ಮಿಂಚಿನಬಳ್ಳಿಯ ೪ನೆಯ ವರುಷದ ೧-೨ನೆಯ ಕುಡಿ

# ಜ್ಞಾನೋಪಾಸನೆ

ಬರೆದವರು:

ಪ್ರೊ. ಶ್ರೀ. ನಾ. ಬನಹಟ್ಟಿ
ಎಂ. ಎ.

ಅನುವಾದಕರು: “ ಸ್ವಾತಂತ್ರ್ಯಪ್ರಿಯರು ”

ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।
ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥
ಭ. ಗೀ. ೪. ೪೨

ಚಾಲುಕ್ಯ ವಿಕ್ರಮ ವರುಷ ೮೬೬

ದವನ–ಕಾರಹುಣ್ಣಿವೆ

೧೯೪೧

ಸಾದಾ ಪ್ರತಿ ೧-೮-೦ ಕ್ಯಾಲಿಕೊ ಪ್ರತಿ ೨-೦-೦

ಮುದ್ರಕರು
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

ಪ್ರಕಾಶಕರು
ಬಾಳಾಚಾರ್ಯ ಗುರಾಚಾರ್ಯ ಅವಧಾನಿ
ಮಿಂಚಿನಬಳ್ಳಿಯ ಚಾವಡಿ
ಧಾರವಾಡ

---

# ' ಮಿಂಚಿನಬಳ್ಳಿ '' ಧಾರವಾಡ

ಪ್ರಾರಂಭ: ಚಾಲುಕ್ಯವಿಕ್ರಮ ಶಕೆ ೮೬೨ (೧೯೩೭)

**ವರುಷಕ್ಕೆ ೧೫೦ ಪುಟಗಳುಳ್ಳ ನಾಲ್ಕು ಗ್ರಂಥಗಳು**

ಮೂರು ತಿಂಗಳಿಗೊಂದರಂತೆ ಪ್ರಕಟವಾಗುವವು

**ವಾರ್ಷಿಕ ಚಂದಾ ೩-೮-೦ ( ಅ. ವೆ. ಸೇರಿ )**

## ೧ನೆಯ ವರುಷ

೧ ಕರ್ನಾಟಕ ದರ್ಶನ ೧ ೦ ೦
೨ ತರುಣ ತುರ್ಕಸ್ತಾನ (ಕಮಾಲಪಾಶಾ) ೧ ೦ ೦
೩ ಮಿಂಚಿನ ಮಹಿಳೆಯರು ೧ ೨ ೦
೪ ಸಾಮ್ಯವಾದ ೧ ೦ ೦

## ೨ನೆಯ ವರುಷ

೫ ಭಾರತೀಯ ಸ್ವಾತಂತ್ರ್ಯದ ಹೆಜ್ಜೆಗಳು ೧ ೪ ೦
೬ ಮುಂದುವರಿದ ಜಪಾನು ೧ನೆಯ ಭಾಗ ೧ ೦ ೦
೭ ೨ನೆಯ ಭಾಗ ೧ ೦ ೦
೮ ಕನ್ನಡ ಸಾಹಿತ್ಯವಾಹಿನಿ ೧ ೦ ೦

## ೩ನೆಯ ವರುಷ

೯ ಭಾರತದ ರಾ. ಮನುಷ್ಯ ೧ ೦ ೦
೧೦ ಮಾದರಿ ೧ ೦ ೦
೧೧ ದೀಪಮಾಲೆ ೧ ೦ ೦
೧೨ ನಾಡಹಾಡುಗಳು ೧ ೦ ೦

## ೪ನೆಯ ವರುಷ

೧೩ ಜ್ಞಾನೋಪಾಸನೆ ೧ ೮ ೦
೧೪ ತಕ್ಕಡಿ

ವ್ಯವಸ್ಥಾಪಕ
' ಮಿಂಚಿನಬಳ್ಳಿ
ಧಾರವಾಡ

# ಸಂಪಾದಕರ ಬಿನ್ನಹ



ಎಂಟಿನಬಳ್ಳಿಯು ಮೂರು ವರುಷಗಳನ್ನು ಮುಗಿಸಿ ನಾಲ್ಕನೆಯ ವರುಷದಲ್ಲಿ ಕಾಲಿಟ್ಟಿದೆ. ಈ 'ಜ್ಞಾನೋಪಾಸನೆ'ಯೇ ನಾಲ್ಕನೆಯ ವರುಷದ ಮೊದಲನೆಯ ಕುಡಿಯು. ಪುಸ್ತಕದ ಪುಟಗಳು ಹೆಚ್ಚಾದ್ದರಿಂದಲೂ, ಸಂಪಾದಕರಾದ ಶ್ರೀ. ಬಿಂದುಮಾಧವರು ಸೆರೆಮನೆಗೆ ಹೋಗಬೇಕಾದ್ದರಿಂದಲೂ ಈ ಪುಸ್ತಕವು ಸಮಯಕ್ಕೆ ಪ್ರಕಟವಾಗಲಿಲ್ಲ. ಈ ತಡೆಯನ್ನು ಚಂದಾದಾರರು ಕ್ಷಮಿಸಬೇಕಾಗಿ ಬಿನ್ನಹ.

ಈ ಗ್ರಂಥದ ಮೂಲ ಲೇಖಕರಾದ ಶ್ರೀ ಬನಹಟ್ಟಿ ಶ್ರೀನಿವಾಸರಾಯರ ಮನೆತನವು ಮೂಲತಃ ಕನ್ನಡಿಗರದು. ಮಹಾರಾಷ್ಟ್ರದಲ್ಲಿ ನೆಲಸಿದ ಬಳಿಕ ಆ ಭಾಷೆಯನ್ನೇ ತಮ್ಮದನ್ನಾಗಿ ಮಾಡಿಕೊಂಡು ಮರಾಠಿಗೆ ಅಪೂರ್ವವಾದ ಸೇವೆಯನ್ನು ಸಲ್ಲಿಸುತ್ತಲಿರುವ ಕನ್ನಡಿಗರು. ಇವರು ನಾಗಪೂರ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರರಾಗಿದ್ದಾರೆ. ಮರಾಠಿಯಲ್ಲಿ ಶ್ರೇಷ್ಠ ತರಗತಿಯ ಲೇಖಕರೆಂದು ಹೆಸರಾಗಿದ್ದಾರೆ. 'ನವಭಾರತ ಗ್ರಂಥಮಾಲಾ' ಎಂಬುದರ ಸಂಚಾಲಕರು. ಇವರು ತಾವು ಮರಾಠಿಯಲ್ಲಿ ಬರೆದ ಪುಸ್ತಕವು ತಮ್ಮ ಮೊದಲಿನ ಭಾಷೆಯಾದ ಕನ್ನಡದಲ್ಲಿ ಪ್ರಕಟವಾಗಬೇಕೆಂಬ ಅವರ ಕೋರಿಕೆಯಂತೆ ಈ ಗ್ರಂಥವನ್ನು ಕನ್ನಡಿಗರಿಗೆ ಅರ್ಪಿಸುವುದರಲ್ಲಿ ತುಂಬಾ ಹಿಗ್ಗು ಎನಿಸುತ್ತಲಿದೆ. ಈ ಗ್ರಂಥವು "ನವಭಾರತ ಗ್ರಂಥಮಾಲೆಯ" ಮೊದಲನೆಯ ಕುಸುಮವಾಗಿ "ಜ್ಞಾನೋಪಾಸನಾ ವ ಭಾರತೀಯಾಂಚೀ ಕರ್ತವ್ಯೇ" ಎಂಬ ಹೆಸರಿನಲ್ಲಿ ಪ್ರಕಟವಾಗಿದೆ.

ಈ ಗ್ರಂಥವು ಮರಾಠಿಯಲ್ಲಿ ಅತ್ಯಂತ ಲೋಕಪ್ರಿಯವಾಗಿದ್ದು ಇದರ ಎರಡನೆಯ ಆವೃತ್ತಿಯು ಬೇಗ ಹೊರಡಲಿದೆ. ಮಾನ್ಯರಾದ ನ. ಚಿ. ಕೇಳಕರ ಮೊದಲಾದ ವಿದ್ವಾಂಸರು ಇದನ್ನು ಮನಸಾರೆ

ಹೊಗಳಿದ್ದಾರೆ. ಕನ್ನಡಿಗರೆಲ್ಲರ ಮನ್ನಣೆಗೂ ಇದು ಪಾತ್ರವಾಗುವದೆಂದು ಆಶಿಸುತ್ತೇವೆ.

ಪ್ರೊ. ಬಸಹಟ್ಟಿಯವರು ತುಂಬಾ ಪರಿಶ್ರಮಬಟ್ಟು ಬರೆದ ಈ ಗ್ರಂಥವನ್ನು ಕನ್ನಡಿಗರಿಗೆ ನೀಡಲು ಅನುವುಮಾಡಿಕೊಟ್ಟುದುದಕ್ಕೆ ಅವರಿಗೆ ತುಂಬಾ ಆಭಾರಿಯಾಗಿದ್ದೇವೆ.

ನಮ್ಮ ಬಳ್ಳಿಯ ಪ್ರತಿ ಪುಸ್ತಕವೂ ಸುಮಾರು ೧೨೦ರಿಂದ ೧೫೦ರ ವರೆಗೆ ಪುಟಗಳುಳ್ಳದ್ದು ಇರಬೇಕೆಂಬುದು ನಮ್ಮ ಸಂಕಲ್ಪವಿದ್ದು ಈ ಗ್ರಂಥವು ಇಮ್ಮಡಿಯಷ್ಟಾದುದಕ್ಕೆ ಇದನ್ನು ನಮ್ಮ ಬಳ್ಳಿಯ ನಾಲ್ಕನೆಯ ವರುಷದ ೧ ಮತ್ತು ೨ನೆಯ ಕುಡಿಯೆಂದು ಪರಿಗಣಿಸಲಾಗಿದೆ. ವಾಚಕರು ಕಾಗದದ ತುಟಾಗ್ರತೆಯ ಈ ಕಾಲದಲ್ಲಿ ದಯವಿಟ್ಟು ಮನ್ನಿಸಬೇಕಾಗಿ ಬಿನ್ನಹ.

—ಸಂಪಾದಕರು

# ನಿವೇದನ

ಪ್ರಸ್ತುತ ಪುಸ್ತಕದೊಳಗಿನ ವಿಷಯದ ರೂಪರೇಖೆಯು ಅನುಕ್ರಮಣಿಕೆಯನ್ನು ನೋಡಿದರೆ ಸಹಜವಾಗಿ ತಿಳಿಯುವಂತಿದೆ. ಪುಸ್ತಕವು ವ್ಯಾಪಕ, ಸಂಗ್ರಾಹಕ, ಕರ್ತವ್ಯಬೋಧಕವಾಗುವಂತೆ ಶಕ್ಯವಿದ್ದಷ್ಟು ಪ್ರಯತ್ನಮಾಡಲಾಗಿದೆ. ಇಲ್ಲಿ ಭಾರತೀಯರ ಜ್ಞಾನೋಪಾಸನೆಯು ವಿವರಣೆಯನ್ನು ಹೆಚ್ಚಾಗಿ ಮಾಡಿರುವದಿಲ್ಲ. ಯಾಕೆಂದರೆ ಆ ವಿಷಯುವನ್ನು ಈ ಪುಸ್ತಕಕ್ಕಾಗಿ ಯೋಜಿಸಿಯೇ ಇರಲಿಲ್ಲ. ಒಟ್ಟಾರೆ ಜಗತ್ತಿನ ಜ್ಞಾನದ ಪ್ರಗತಿಯ ಮೆಟ್ಟಲುಗಳನ್ನು ವಾಚಕರ ಕಣ್ಣೆದುರಿಗಿಟ್ಟು, ಆ ವಿಷಯವಾಗಿ ಭಾರತೀಯರ ಕರ್ತವ್ಯವೇನೆಂಬುದನ್ನು ತೋರಿಸುವ ಉದ್ದೇಶಾನುಸಾರವಾಗಿ ಈ ಪುಸ್ತಕವನ್ನು ರಚಿಸಲಾಗಿದೆ.

ಈ ಪುಸ್ತಕವು ಸಂಕಲನ ಸ್ವರೂಪದ್ದಿರುವದರಿಂದ ಯಾವೊಂದು ವಿಷಯದ ಕೂಲಂಕಷ ವಿವೇಚನೆಯನ್ನು ಮಾಡುವದು ಶಕ್ಯವಿಲ್ಲ. ಇಂಥ ಸಂಕಲನಾತ್ಮಕ ಪುಸ್ತಕದಿಂದ ವಾಚಕರ ಚಿಕಿತ್ಸಕ ಬುದ್ಧಿ, ಬಹುಶ್ರುತತೆ, ಜ್ಞಾನಲಾಲಸೆಗಳು ಹೆಚ್ಚಾಗುವದರಿಂದ, ಅವುಗಳ ಮಹತ್ವವು ಪಾಶ್ಚಾತ್ಯ ದೇಶದಲ್ಲಿ ಬಹಳಿರುವದರಿಂದ ಅಲ್ಲಿ ಇಂಥ ನೂರಾರು ಸಂಗ್ರಹಗಳು ಪ್ರಸಿದ್ಧವಾಗುತ್ತಲಿವೆ.

ಇಂಥ ಗ್ರಂಥ ಲೇಖಕನು ಪ್ರತಿಪಾದಿಸಿದ ಎಲ್ಲ ವಿಷಯಗಳಲ್ಲಿ ತಜ್ಞ ನಿರುವದು ಶಕ್ಯವಿಲ್ಲ; ಹಾಗೆ ಯಾರೂ ಅಪೇಕ್ಷಿಸುವದೂ ಇಲ್ಲ. ಇದಕ್ಕೆ ದೊಡ್ಡ ಉದಾಹರಣೆಯೆಂದರೆ— ಎಚ್. ಜಿ. ವೆಲ್ಸರ Outline of History. ವೆಲ್ಸ ಸಾಹೇಬರು ಜಗತ್ತಿನಲ್ಲಿಯ ಪ್ರತಿಯೊಂದು ದೇಶದ ಇಡಿ ಇತಿಹಾಸತಜ್ಞರಿರುವದು ಸಾಧ್ಯವಿದೆಯೆ ? ಆದರೂ ಇಂಥ ಪುಸ್ತಕ ವನ್ನು ಬರೆಯುವ ಯೋಗ್ಯತೆಯು ಅವರಲ್ಲಿಲ್ಲವೆಂದು ಯಾರೂ ತಿಳಿಯು ವದಿಲ್ಲ.

ನಮ್ಮಲ್ಲಿ ಇಂಥ ಸಂಕಲನಾತ್ಮಕ ಗ್ರಂಥವನ್ನು ರಚಿಸುವ ಪದ್ಧತಿ ಇಲ್ಲವೆನಬಹುದು. ಆದುದರಿಂದ ಇದು ನಮ್ಮ ವಾಚಕರಿಗೆ ಎಷ್ಟರ ಮಟ್ಟಿಗೆ ರುಚಿಸುವದೋ ತಿಳಿಯದಾಗಿದೆ. ಆದರೂ ದೇಶಪ್ರೇಮದಿಂದ ಬರೆಯಲ್ಪಟ್ಟು ಅನಾನುಕೂಲ ಪರಿಸ್ಥಿತಿಯಲ್ಲಿಯೂ ಇದು ಪ್ರಕಟವಾ ಗಲು ಸಾಧ್ಯವಾದುದರಿಂದ ಈ ಪುಸ್ತಕದ ಮುಂದಿನ ಮಾರ್ಗವು ಆಶಾ ಜನಕವಿದೆಯೆಂದು ಹೇಳಬೇಕಾಗಿದೆ.

ಇನ್ನು ಪಾರಿಭಾಷಿಕ ಶಬ್ದಗಳ ಬಗ್ಗೆ ಒಂದೆರಡು ಮಾತು ಹೇಳು ವದು ಅಗತ್ಯವಿದೆ. ಪಾರಿಭಾಷಿಕ ಶಬ್ದಗಳನ್ನು ಸಿದ್ಧಪಡಿಸಿ, ಪ್ರಚಾರದಲ್ಲಿ ತರುವದೇ ನಮ್ಮ ಗುರಿಯಾಗಿಲ್ಲ. ಏಕೆಂದರೆ ವಾಚಕರಿಗೆ ವಿಷಯವನ್ನು ಅರಿತುಕೊಳ್ಳಲು ಅನುಕೂಲವಾಗುವಂತೆ ಸುಲಭ ಶಬ್ದಗಳನ್ನು ನೇರ್ಪಡಿಸಿ ಸಿದ್ಧವಿಲ್ಲದೆ ಈಗಾಗಲೆ ಪ್ರಚಾರದಲ್ಲಿದ್ದ ಶಬ್ದಗಳನ್ನೇ ತೆಗೆದುಕೊಂಡಿದೆ. ಅಲ್ಲದೆ ಕೆಲವೆಡೆ ಇಂಗ್ಲಿಷ ಶಬ್ದಗಳನ್ನೂ ಉಪಯೋಗಿಸಲಾಗಿದೆ.

ಶ್ರೀ. ನಾ. ಬನಹಟ್ಟಿ
ಮೂಲ ಲೇಖಕರು

# ಪರಿವಿಡಿ

# ಜ್ಞಾನೋಪಾಸನೆ

## ಮೊದಲನೆಯ ಮೆಟ್ಟಿಲು



### ಜ್ಞಾನ, ಸಂಸ್ಕೃತಿ ಹಾಗೂ ರಾಷ್ಟ್ರೋನ್ನತಿ

ಅನಾದಿಕಾಲದಿಂದಲೂ ಮಾನವನು ಜ್ಞಾನಕ್ಕಾಗಿ ಹಂಬಲಿಸಿ ಒಂದೇಸವನೆ ಹಾತೊರೆಯುತ್ತಿರುವನು. ಮಾನವನ ಈ ಪ್ರಯತ್ನದ ಪ್ರವಾಹವು ಅಖಂಡವಾಗಿ ಹರಿಯುತ್ತಲಿದೆ- ಹರಿಗಡಿಯುವ ಸಂಭವವೂ ಇಲ್ಲ. ಒಂದೊಂದೇ ರಾಷ್ಟ್ರದ ಇತಿಹಾಸವನ್ನು ನೋಡಿದರೆ ರಾಷ್ಟ್ರದ ಪ್ರಗತಿಯು ಕಟ್ಟಾದುದನ್ನು ನಾವು ಕಾಣುತ್ತೇವೆ. ಇಷ್ಟೇ ಅಲ್ಲ ಕೆಲವೊಂದು ಮಟ್ಟದ ವರೆಗೆ ರಾಷ್ಟ್ರದ ಬೆಳೆವಣಿಗೆಯಾಗಿ, ಮುಂದೆ ಅದರ ಜ್ಞಾನಮಾರ್ಗವು ಕಟ್ಟಾದಂತೆಯೂ, ಇದ್ದ ಜ್ಞಾನವು ಕೂಡ ಇಲ್ಲದಂತಾಗಿ ಆ ರಾಷ್ಟ್ರವು ಕಾಡುಜನಾಂಗದ ಬೀಡಾದಂತೆಯೂ ಕಾಣುವುದುಂಟು. ದಾರಿಕಾರನು ಮಾರ್ಗಾಯಾಸದಿಂದ ಬಳಲಿ ವಿಶ್ರಮಿಸಲು ನಿದ್ರೆ ಹೋಗುವಂತೆ ರಾಷ್ಟ್ರಗಳ ಅವಸ್ಥೆಯಾದರೂ ಆದುದು ಕಾಣುವುದುಂಟು. ಆದರೆ ಹಿಂದಿನಿಂದ ಬರುವ ಧೂರ್ತ ದಾರಿಗಾರನು ಮೊದಲಿಸವನ ಮಗ್ಗುಲಲ್ಲಿದ್ದ ಗಂಟನ್ನು ನೆಗವಿ ಅದರ ಬಲದಿಂದ ಮುಂದೆ ಸಾಗುವ

ವನಂತೆ ಈ ರಾಷ್ಟ್ರಗಳ ವ್ಯವಹಾರವೂ ಎಷ್ಟೋ ಸಲ ಆದುದು ಕಂಡು ಬರುತ್ತದೆ. ಒಂದು ರಾಷ್ಟ್ರವು ಜ್ಞಾನಾರ್ಜನೆಯಲ್ಲಿ ಹಿಂದೆ ಬಿದ್ದೊಡನೆಯೇ, ಉದಯೋನ್ಮುಖವಾದ ಇನ್ನೊಂದು ರಾಷ್ಟ್ರವು ಆ ರಾಷ್ಟ್ರದ ಜ್ಞಾನವನ್ನು ಸೂರೆಗೊಂಡು ಅದರ ಬಲದಿಂದ ತಾನು ಜ್ಞಾನಮಾರ್ಗದಲ್ಲಿ ಮುನ್ನುಗ್ಗುವುದನ್ನು ನಾವು ನೋಡುತ್ತೇವೆ. ನಿದ್ರೆಹೋದ ರಾಷ್ಟ್ರಗಳೂ ಒಮ್ಮೊಮ್ಮೆ ಎಚ್ಚತ್ತು ಆಲಸ್ಯ ತೊರೆದು ಜ್ಞಾನದ ಸೆಣಸಾಟದಲ್ಲಿ ತಮ್ಮ ಕುದುರೆಯನ್ನು ಮುಂದೆ ನುಗ್ಗಿಸುವುದನ್ನೂ ನೋಡುತ್ತೇವೆ. ಇದಕ್ಕೆ **ಇಟಲಿಯೇ** ಒಳ್ಳೇ ಉದಾಹರಣೆ. ರೋಮ ಸಾಮ್ರಾಜ್ಯದ ಕಾಲದಲ್ಲಿ ರೋಮಪಟ್ಟಣವೂ ಇಟಲಿದೇಶವೂ ಸರ್ವ ವಿಷಯಗಳಲ್ಲಿ ಜಗತ್ತಿನಲ್ಲಿಯೇ ಮುಂದುವರಿದಿತ್ತು. ಇವರು ಜ್ಞಾನ, ವಿಜ್ಞಾನದಲ್ಲಿ ಗ್ರೀಕರಷ್ಟು ಚಾಕಚಕ್ಯತೆಯನ್ನು ತೋರದಿದ್ದರೂ ಉಳಿದ ರಾಷ್ಟ್ರಗಳ ಜ್ಞಾನವನ್ನು ಉಂಡು ಅರಗಿಸಿಕೊಂಡು, ತಮ್ಮ ಸ್ವಭಾವಕ್ಕನುಗುಣವಾಗಿ ಜ್ಞಾನಭಾಂಡಾರಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸಿದರು. ಕ್ರಿ. ಪೂ ೪೦೦ ವರ್ಷಗಳ ವರೆಗೆ ಈ ಪರಿಸ್ಥಿತಿಯಿದ್ದಿತು. ಮುಂದೆ ಉತ್ತರದ ಹೂಣ, ಗಾಥ ಜನರ ದಾಳಿಗಳಿಂದ ರೋಮ ಸಾಮ್ರಾಜ್ಯವು ಹಾಳಾಗಿ ಇಟಲಿಯ ಮುಂದಾಳುತನವು ಮಾಯವಾಯಿತು. ಆದರೆ ಇಟಲಿಯು ಕೆಲವು ಶತಮಾನಗಳಲ್ಲಿಯೇ ಮತ್ತೆ ತಲೆಯೆತ್ತಿತು. ೧೨ನೆಯ ಶತಮಾನದಿಂದ ೧೬-೧೭ನೆಯ ಶತಮಾನದ ವರೆಗೆ ಶಾಸ್ತ್ರ, ವಾಙ್ಮಯ, ಕಲೆ ಮೊದಲಾದ ಸರ್ವ ವಿಷಯಗಳಲ್ಲಿ ಯುರೋಪದ ಮುಂದಾಳುತನವನ್ನು ವಹಿಸಿತು. ಇದೇ ಸಮಯದಲ್ಲಿಯೇ **ಡಾಂಟೆ, ಪೇಟ್ರಾರ್ಕ, ಟೆಸೊ**ರಂಥ ಪ್ರಖ್ಯಾತ ಕವಿಗಳೂ, **ಬೋಕೆಶಿಯೊ**ರಂಥ ಅಪ್ರತಿಮ ಚತುರ ಲೇಖಕರೂ, **ಮರೆಯಾವ್ಹೇಲಿ**ಯರಂಥ ರಾಜನೀತಿನಿಪುಣರೂ, **ಲಿವೊಗಾಡೋ, ಡವ್ಹಿನ್** ಸೀಯರಂಥ ಭೌತಿಕಶಾಸ್ತ್ರಜ್ಞರೂ, **ಮಾಯಕೇಲ ಅಂಜೇಲೊ, ರಾಫೇಲ**ರಂಥ ಮೂರ್ತಿಶಿಲ್ಪಿಗಳೂ ಹುಟ್ಟಿದರು. ೧೬ನೆಯ ಶತಮಾನದ ನಂತರ ಮಾತ್ರ ಇಟಲಿಯ ಜ್ಞಾನದ ಮುಂದಾಳುತನವು ಮೆಲ್ಲಮೆಲ್ಲನೆ ಕಡಿಮೆಯಾಯಿತು. ಪೂರ್ವದಲ್ಲಿ ನಡೆಯುತ್ತಿದ್ದ ವ್ಯಾಪಾರದ ನಾಶ, ಧಾರ್ಮಿಕ ಜಗಳ, ಪರಕೀಯರ ಆಕ್ರಮಣ ಇವುಗಳಿಂದ ಇಟಲಿಯಲ್ಲಿಯ

ವೆನಿಸ್, ಫ್ಲಾರೆನ್ಸ್, ಮಿಲಾನ್, ಪಾದುವಾ, ಜಿನೋವಾ ಮೊದಲಾದ ಸುಂದರ, ವೈಭವಸಂಪನ್ನ ಪಟ್ಟಣಗಳು ಕಳೆಗುಂದಿದವು. ಕಲೆ, ಸಾಹಿತ್ಯಗಳ ಪರಂಪರೆಯೂ ಮೆಲ್ಲನೆ ಮಾಯವಾಯಿತು. ಆದರೆ ಇಟಲಿಯು ಮತ್ತೆ ಇತ್ತೀಚೆಗೆ ತಲೆಯೆತ್ತಿದೆ. ರಾಷ್ಟ್ರರಾಷ್ಟ್ರಗಳ ಸ್ಪರ್ಧೆಯಲ್ಲಿ ಮುನ್ನುಗ್ಗುವ ಲಕ್ಷಣಗಳು ಕಾಣಹತ್ತಿವೆ. ೩೦೦ ವರ್ಷಗಳ ಕಷ್ಟದ ನಂತರ ದಿವ್ಯತೇಜಸ್ವಿಗಳಾದ ಮ್ಯಾಝಿನಿ, ಗ್ಯಾರಿಬಾಲ್ಡಿಗಳಂಥ ಧ್ಯೇಯವಾದಿಗಳ ಪ್ರಯತ್ನದಿಂದ, ಸ್ವತಂತ್ರ ರಾಷ್ಟ್ರಗಳ ಜೊತೆಯಲ್ಲಿ ಅದು ಮರ್ಯಾದೆಯಿಂದ ತಲೆಯೆತ್ತಿ ಬಾಳಲು ಮತ್ತೆ ಸಾಧ್ಯವಾಯಿತು. ಈ ೫೦–೬೦ ವರ್ಷಗಳಲ್ಲಿ ಇಟಲಿಯ ವ್ಯಾಪಾರ, ಉದ್ಯೋಗ, ಸಾಹಿತ್ಯ, ಕಲೆ, ಶಾಸ್ತ್ರೀಯ ಜ್ಞಾನಗಳ ಬೆಳವಣಿಗೆಯು ಅಭೂತಪೂರ್ವವಾಗಿದೆ. ಮುಸಲೋನಿಯ ಆಳಿಕೆಯು ಅವುಗಳನ್ನು ಮುಂದರಿಸಿ, ಪೂರ್ವದ ವೈಭವಕ್ಕೆ ಮುಟ್ಟಿಸಲು ಹವಣಿಸುತ್ತಿದೆ. ಆದರೆ, ಉತ್ತರ ರಾಷ್ಟ್ರಗಳ ಸಮಾನ ಸ್ಕಂಧತೆ ದೊರಕಿಸುವುದು ಈಗ ಸ್ವಲ್ಪ ಸಂಶಯದ ಮಾತೇ!

ಇದೇ ಬಗೆಯಾಗಿ ಒಂದು ಕಾಲಕ್ಕೆ ಜ್ಞಾನದ ಮುಖಂಡತ್ವವನ್ನು ವಹಿಸಿದ ಚೀನವೂ ಎಚ್ಚೆತ್ತು ಪ್ರಗತಿಪಥವನ್ನು ಹಿಡಿದಿದೆ. ಆದರೆ ಅದು ಸರ್ವಾಂಗೀಣ ಉನ್ನತಿಗಾಗಿ ಎಷ್ಟು ಹೆಣಗುವದೋ ಸಂದೇಹ.

## ಅಧೋಮುಖ ರಾಷ್ಟ್ರವು ಉದಯೋನ್ಮುಖವಾಗಲು ಶಕ್ಯವಿದೆ

ಅಧೋಗತಿಗಿಳಿದ ರಾಷ್ಟ್ರಗಳು ಪುನಃ ಉದಯವಾಗಲು ಶಕ್ಯವಿದೆ ಎಂಬುದನ್ನು ತೋರಿಸುವುದೇ ಮೇಲಿನ ವಿವರಣೆಯ ಉದ್ದೇಶವು. ವ್ಯಕ್ತಿಯ ಜೀವಸದಲ್ಲಿ ಬಾಲ್ಯ, ತಾರುಣ್ಯ, ಮುಪ್ಪು, ಮರಣಗಳಿರುವಂತೆ ರಾಷ್ಟ್ರದ ಜೀವನದಲ್ಲಿಯೂ ಉಂಟೆಂದು ಇತಿಹಾಸಜ್ಞರ ಮತ. ಕೆಲವರ ಅಭಿಪ್ರಾಯದಂತೆ “ಒಂದು ರಾಷ್ಟ್ರವು ಉನ್ನತಿಶಿಖರವನ್ನು ಮುಟ್ಟಿ, ಅದರ ಇಳಿಕೆಗೆ ಪ್ರಾರಂಭವಾದರೆ ತೀರಿತು. ಅದು ಪಾತಾಳಕ್ಕೇ ಹೋಗುವುದು. ಅದರ ಉನ್ನತಿಯ ಆಶೆಯೇ ಇಲ್ಲ. ಕೆಲವೊಂದು ಕಾರಣಗಳಿಂದ ಅದರ ಕಾಲು ಜಾರಿದರೆ ತೀರಿತು. ಸಾಹಿತ್ಯ, ಕಲೆ, ವಿಜ್ಞಾನ, ರಾಜಕೀಯ ಮೊದಲಾದ ಎಲ್ಲ ಬಗೆಯಿಂದಲೂ ಅದು ಅಧೋಗತಿಗೆ ಇಳಿಯುವುದು.”

ಇದರ ಅರ್ಥವು ಇಷ್ಟೇ! ಆ ರಾಷ್ಟ್ರದ ಅಂತರ್ಶಕ್ತಿಯು ಅರ್ಥಾತ್ ಜೀವನಶಕ್ತಿಯು ಮೃತವಾದರೂ ಆಗಿರಬೇಕು ಇಲ್ಲವೆ ಮರಣದ ದಾರಿ ಟುನ್ನಾದರೂ ಹಿಡಿದಿರಬೇಕು. ಅಂತರ್ಶಕ್ತಿಯೇ ಮೃತವಾದ ಮೇಲೆ ಅದರ ಪುನರುಜ್ಜೀವನದ ಆಶೆಯೆಲ್ಲಿ? ಆದರೆ ಯಾವ ರಾಷ್ಟ್ರದ ಜೀವನ ಶಕ್ತಿಯು ಜೀವಂತವಿರುವುದೋ ಆ ರಾಷ್ಟ್ರಕ್ಕೆ ಎಷ್ಟೇ ಗಂಡಾಂತರಗಳು ಬಂದರೂ ಪೆಟ್ಟುಗಳು ಬಿದ್ದರೂ ಅದು ಮೃತವಾಗದೆ, ಬೂದಿಯಲ್ಲಿ ಮುಚ್ಚಿದ ಕೆಂಡದಂತೆ, ಅನುಕೂಲ ಪರಿಸ್ಥಿತಿಯುಂಟಾದೊಡನೆಯೇ ತನ್ನ ಹಾನಿಯನ್ನು ತುಂಬಿಕೊಂಡು ಮೊದಲಿನಂತೆಯೇ ತಲೆಯೆತ್ತಿ ಮೆರೆಯು ವುದು. ಇದಕ್ಕೆ ಫ್ರಾನ್ಸ, ಜರ್ಮನಿಗಳೇ ಸಾಕ್ಷಿ. ೧೮೧೫ರಲ್ಲಿ ನೆಪೋಲಿ ಯನ್ನನ ಕಾಲಕ್ಕೆ ಫ್ರಾನ್ಸವು ಪೂರ್ಣವಾಗಿ ಸೋತಿತು. ೧೮೭೦ರಲ್ಲಿ ಯಂತೂ ಫ್ರಾಂಕೋ-ಜರ್ಮನ್ ಯುದ್ಧದಲ್ಲಿ ಜರ್ಮನಿಯು ಅದರ ಶಕ್ತಿ ಯನ್ನೇ ಹೀರಿತು. ಆದರೆ ತಳಕ್ಕೆ ಶೀಸವನ್ನು ತುಂಬಿದ ಬೊಂಬೆಯನ್ನು ಹೇಗೆಯೇ ಒಗೆದರೂ ಅದು ಮತ್ತೆ ಸೆಟೆದು ನಿಲ್ಲುವಂತೆ, ಫ್ರಾನ್ಸದ ತಲೆಯು ಯಾವಾಗಲೂ ಮೇಲೆಯೇ! ಭಾರವಾದ ಸಾಲದ ಕರಗಳನ್ನು ತೆತ್ತೂ ಕೂಡ ೩೦ ವರ್ಷಗಳಲ್ಲಿಯೇ ವ್ಯಾಪಾರ ಉದ್ಯಮಗಳಲ್ಲಿ ಫ್ರೆಂಚ ವೀರರು ಮೊದಲಿನಕ್ಕಿಂತ ಮುಂದಾದರು. ಆಲ್ಸಾಸ-ಲಾರೆನ್ ಪ್ರಾಂತ ಗಳನ್ನು ಜರ್ಮನಿಯು ತನ್ನರಾಜ್ಯಕ್ಕೆ ಸೇರಿಸಬೇಕೆಂದಾಗ ಆ ಪ್ರಾಂತಗಳ ಲ್ಲಾದ ಕೋಲಾಹಲ ಅದೆಂತಹದು! ಆದರೆ ನಮ್ಮಲ್ಲಿ ಏನಿದೆ? ೧೫೦ ವರ್ಷ ಸುಖದಿಂದ ರಾಜ್ಯವಾಳುತ್ತಿದ್ದಾರೆ ಬ್ರಿಟಿಶರು! ಜರ್ಮನರ ಶೌರ್ಯ ವಂತೂ ಜಗತ್ತನ್ನೇ ಆಶ್ಚರ್ಯಗೊಳಿಸುವಂತಹದು. ಫ್ರಾನ್ಸಕ್ಕಿಂತಲೂ ಒಂದು ಕೈಮೇಲು. ಕಳೆದ ಮಹಾಯುದ್ಧದಲ್ಲಿ ಅದು ಭಯಂಕರವಾದ ಅಪಜಯವನ್ನು ಹೊಂದಿದರೂ ಭಾರವಾದ ಕರಗಳ ಹಾಗು ಅತ್ಯಂತ ಹಾನಿಕಾರಕ ಕರಾರುಗಳಿಗೆ ಒಪ್ಪಿಕೊಂಡರೂ ಅದು ಯಾರಿಗೂ ಸೊಪ್ಪು ಹಾಕಲಿಲ್ಲ. ರಾಜಕಾರಣ, ವ್ಯಾಪಾರ, ಉದ್ಯಮಗಳಲ್ಲಿ ಎಳ್ಳಷ್ಟು ಹಿಂಜ ರಿಯದೆ ಜ್ಞಾನದ ಸರ್ವ ಶಾಖೆಗಳಲ್ಲಿಯೂ ತನ್ನ ಅಗ್ರಸ್ಥಾನವನ್ನು ಕಳೆದು ಕೊಳ್ಳಲಿಲ್ಲ. ಇದನ್ನು ನೋಡಿ ಜಗತ್ತೇ ಬಟ್ಟುಕಚ್ಚುವುದು.

## ಭಾರತದ ಭವಿಷ್ಯವು ಉಜ್ವಲವಿದೆ

ಅಂತರ್ಗತ ಶಕ್ತಿಯು ನಾಶವಾಗುವುದು ಹಾಗೂ ಯಾವುದಾದರೊಂದು ಆಘಾತದಿಂದ ಮೂರ್ಛೆ ಹೊಂದುವುದು ಇವೆರಡರಲ್ಲಿಯೂ ಅಂತರವಿದೆ ಎಂಬುದು ಈ ಉದಾಹರಣೆಯಿಂದ ಸ್ಪಷ್ಟವಾಗುವುದು. ಆದುದರಿಂದ ಅವನತಿಯ ಮಾರ್ಗವನ್ನು ಹಿಡಿದ ರಾಷ್ಟ್ರದ ಪುನರುದ್ಧಾರವಿಲ್ಲೆಂಬ ಸಿದ್ಧಾಂತವನ್ನು ನಂಬಲು ಶಕ್ಯವಿಲ್ಲ. ಹೀಗೆ ತಿಳಿಯುವುದು ಆತ್ಮಘಾತವು. ಈ ಸಿದ್ಧಾಂತದಂತೆ, ಭಾರತದ ಉದ್ಧಾರದ ಆಶೆಯೇ ಇಲ್ಲ. ರಾಜಕೀಯ ದೃಷ್ಟಿಯಿಂದ ಭಾರತಕ್ಕೆ ಅಸ್ತಿತ್ವವೇ ಇಲ್ಲ. ಆರ್ಥಿಕ ದೃಷ್ಟಿಯಿಂದಂತೂ ದರಿದ್ರರಲ್ಲಿ ದರಿದ್ರ, ಜ್ಞಾನದಲ್ಲಿಯಂತೂ ನೂರಾರು ಹರದಾರಿ ಹಿಂದೆ, ಅಂದ ಮೇಲೆ ಭಾರತದ ಗತಿಯೇನು? ಆದರೆ ಮೇಲಿನ ಸಿದ್ಧಾಂತವೇ ಸತ್ಯವಾದುದಲ್ಲ. ಫೆನಿಕ್ಸ ಪಕ್ಷಿಯಂತೆ, ಪುನಃ ಪುನಃ ಪುನರುಜ್ಜೀವನವಾಗುವ ಇಟಲಿಯು ಈ ಸಿದ್ಧಾಂತವು ಜೊಳ್ಳು ಎಂದು ಕೈಯೆತ್ತಿ ಸಾರುತ್ತದೆ. ಇದೇನು ತ್ರಿಕಾಲಾಬಾಧಿತವಾದ ಸತ್ಯಸಿದ್ಧಾಂತವಲ್ಲ. ಬಾಬಿಲೋನ, ಫಿನ್‌ಲಂಡ, ಇಜಿಪ್ತ, ಗ್ರೀಸ ಮೊದಲಾದ ರಾಷ್ಟ್ರಗಳು ಉನ್ನತಿಯ ಶಿಖರವನ್ನು ಮುಟ್ಟಿ ಮುಗ್ಗರಿಸಿ, ಸಾವಿರಾರು ವರ್ಷಗಳಾದರೂ ಅವು ಉದಯೋನ್ಮುಖವಾಗಿಲ್ಲವೆಂದು ಇತಿಹಾಸದ ಉದಾಹರಣೆಯನ್ನು ಕೊಡಬಹುದು. ಆದರೆ ಅವುಗಳ ಗತಿಯು ಹೀಗಾಗಿರುವುದೆಂದು ಭಾರತದ್ದಾದರೂ ಹೀಗೇ ಎಂದು ಯಾವುದರ ಮೇಲಿಂದ? ಪ್ರತಿಯೊಂದು ರಾಷ್ಟ್ರದ ಪರಿಸ್ಥಿತಿಯು ಆ ರಾಷ್ಟ್ರದ ವಂಶವಿಶಿಷ್ಟವಾದ ಸ್ವಭಾವಧರ್ಮ, ಸಹನಶೀಲತೆಗಳಿಗನುಗುಣವಾಗಿ ಭಿನ್ನಭಿನ್ನವಾಗುತ್ತದೆ. ಯಾವುದೊಂದು ರಾಷ್ಟ್ರದ ಉದಯಾಸ್ತಗಳು ಆ ರಾಷ್ಟ್ರದ ವಂಶ, ಸಾಮಾಜಿಕ ರೀತಿ, ಭೌಗೋಲಿಕ ಮೊದಲಾದ ಅನೇಕ ಕಾರಣಗಳನ್ನು ಅವಲಂಬಿಸಿರುತ್ತದೆ. ಈ ಎಲ್ಲ ಮಾತುಗಳ ವಿಚಾರಾಂತ್ಯದಲ್ಲಿಯೇ ತತ್ವವೇತ್ತರು ಮೇಲಿನ ಸಿದ್ಧಾಂತಕ್ಕೆ ಬಂದಂತೆ ಕಾಣುವುದಿಲ್ಲ. ಭಾರತವು ಪಾರತಂತ್ರ್ಯದಲ್ಲಿ ೪-೫ ನೂರು ವರ್ಷಗಳಿಂದ ಕೊಳೆಯುತ್ತಿದ್ದರೂ ನಾವು ಮೃತರಾಷ್ಟ್ರವೆಂದು ಎಂದೂ ಒಪ್ಪಲಾರೆವು. ಯಾಕೆಂದರೆ, ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಕೂಡ ವಿಜ್ಞಾನ, ಸಾಹಿತ್ಯ, ರಾಜಕಾರಣಗಳಲ್ಲಿ ಜಗತ್ತನ್ನೆ

ಬೆರಗುಗೊಳಿಸುವಂಥ ದಿವ್ಯತೇಜವು ಕಂಡುಬರುತ್ತಲಿದೆ. ಅಂದಮೇಲೆ ಅದು ಕೊನೆಯವರೆಗೂ ಕೊಳಚೆಯಲ್ಲಿಯೇ ಕೊಳೆಯುವುದೆಂತು! ಅದರ ಭವಿಷ್ಯವು ಉಜ್ವಲವಾಗಿದೆ "ಎಂದು ಭಾರತೀಯ ಅಂತಃಕರಣವು ನುಡಿಯುತ್ತಲಿದೆ. ಈ ಒಳದನಿಯೇ ಭಾರತಕ್ಕೆ ನವಚೈತನ್ಯವನ್ನು ಕೊಡುತ್ತಲಿದೆ.

ವಿಷ್ಣುಶಾಸ್ತ್ರಿ ಚಿಪಳೂಣಕರರು "ಭಾರತಕ್ಕೆ ಕೆಲ ಕಾರಣಗಳ ಮೂಲಕ ಮಬ್ಬು ಕವಿದಿದೆ, ಇದು ಅದರ ಮೃತಾವಸ್ಥೆಯಲ್ಲ. ನಮ್ಮ ಮಹಾನ್ ರಾಷ್ಟ್ರವೃಕ್ಷವು ನೋಡಲು ಒಣಗಿದಂತೆ ಕಾಣಬಹುದು. ಆದರೆ ಅದರ ಬುಡವು ಹಸಿಯಿದ್ದು ಭದ್ರವಾಗಿದೆ. ಅದರ ಬೇರುಗಳೆಲ್ಲವೂ ಜೀವಂತವಿವೆ. ವಸಂತ ಬರುತ್ತಲೇ ಮತ್ತೆ ಚಿಗುರೊಡೆದು ಫಲ-ಪುಷ್ಪಗಳನ್ನೀಯುವುದು" ಎಂದು ಭಾರತದ ಭವಿಷ್ಯವನ್ನು ಚಿತ್ರಿಸಿದ್ದಾರೆ.

ಭಾರತದ ಉಜ್ವಲವಾದ ಚಿತ್ರವು ನಮ್ಮ ಕಣ್ಣಿಗೆ ಕಟ್ಟಿದೆ. ಇತರ ರಾಷ್ಟ್ರಗಳೂ ಉದಯೋನ್ಮುಖವಾಗುವುದಿಲ್ಲೆಂದು ಹೇಳುವುದೆಂತು! ಇಜಿಪ್ತ, ಬಾಬಿಲೋನ, ನೊದಲಾದ ರಾಷ್ಟ್ರಗಳು ಮತ್ತೊಮ್ಮೆ ಜಗತ್ತಿನಲ್ಲಿ ಮೆರೆಯುವದಿಲ್ಲೆಂದು ಹೇಳಬಲ್ಲವರಾರು? ಕಾಲಗರ್ಭವು ಅಗಾಧವಿದೆ.

ಅನೇಕ ಜನ ಪಾಶ್ಚಾತ್ಯ ಲೇಖಕರು ಪೌರ್ವಾತ್ಯ ರಾಷ್ಟ್ರಗಳ ವಿಷಯವಾಗಿ ಕೆಳಗಿನ ಉದ್ಗಾರಗಳನ್ನು ತೆಗೆದಿದ್ದಾರೆ.

ಪೌರ್ವಾತ್ಯ ರಾಷ್ಟ್ರಗಳ ಪ್ರಗತಿಯ ಶಕ್ತಿಯು ಮರ್ಯಾದಿತವಿದೆ. ಕೆಲವೊಂದು ಮರ್ಯಾದೆಯ ವರೆಗೆ ಪ್ರಗತಿಯು ಬಹು ಬೇಗ ಆಗುತ್ತದೆ. ಮುಂದೆ ಅದು ಕುಂದಿ ಇದ್ದುದರಲ್ಲಿಯೇ ಆನಂದಪಡುವ ಪ್ರವೃತ್ತಿಯು ಕಾಣುತ್ತದೆ. ಅತ್ಯಂತ ಪ್ರಾಚೀನ ಹಾಗು ವಿಶಾಲ ರಾಷ್ಟ್ರಗಳಾದ ಭಾರತ-ಚೀನಗಳು ಒಂದು ಕಾಲಕ್ಕೆ ಜ್ಞಾನದ ಚರಮಸೀಮೆಯನ್ನು ಮುಟ್ಟಿದುವು. ವಿಜ್ಞಾನ, ಸಾಹಿತ್ಯ, ಕಲೆಗಳನ್ನು ಬೆಳೆಸಿದುವು. ಆದರೆ ಮುಂದೆ ಈ ಶೋಧನಸಾಮರ್ಥ್ಯವು ಉಳಿಯಲಿಲ್ಲ. ಆದರೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇದರ ವಿರುದ್ಧ ಕಾಣುವುದು. ಒಂದು ರಾಷ್ಟ್ರವು ಅತ್ಯಂತ

ಪರಿಶ್ರಮದಿಂದ ಮಾನವೀ ಸಂಸ್ಕೃತಿಯು ಹಾಗು ಜ್ಞಾನದ ರಥವನ್ನು ಮುಂದಕ್ಕೆ ಎಳೆದು ತಾನು ಮೃತವಾಗುತ್ತದೆ. ಇದೇ ಜ್ಞಾನದ ಸಹಾಯದಿಂದ ಇನ್ನೊಂದು ರಾಷ್ಟ್ರವು ಮುಂದೆ ಬಂದು ಸರಸತಿಯ ರಥವನ್ನು ಮುಂದಕ್ಕೆ ಎಳೆದು ಕೆಲಕಾಲ ಐಶ್ವರ್ಯವನ್ನು ಭೋಗಿಸಿ ಮಾಯವಾದುದನ್ನು ಕಾಣುತ್ತೇವೆ. ಹೀಗೆ ರಾಷ್ಟ್ರಗಳು ಕಣ್ಮರೆಯಾದರೂ ಜ್ಞಾನದ ರಥವು ಮಾತ್ರ ಅತ್ಯಂತ ವೇಗದಿಂದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮುಂದರಿಯುತ್ತಲೇ ಇದೆ.''

ಆದರೆ ಇದರ ವಿರುದ್ಧವಾಗಿ ಹೀಗೂ ಹೇಳಬಹುದಲ್ಲವೇ? ಪ್ರತಿಕೂಲ ಪರಿಸ್ಥಿತಿ ಬಂದರೂ ಕೂಡ ತಮ್ಮ ಸಂಸ್ಕೃತಿಯನ್ನು ಕಾಯ್ದುಕೊಂಡು, ಅದನ್ನು ರಕ್ಷಿಸುವ ಜಿಗುಟುತನವು ಪೌರ್ವಾತ್ಯ ರಾಷ್ಟ್ರಗಳಲ್ಲಿದ್ದಂತೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಾಣುವುದಿಲ್ಲ. (ಪಾಶ್ಚಾತ್ಯ ದೇಶಗಳಲ್ಲಿ ಸುಧಾರಣೆಯ ಯುಗವು ೭೦೦೦ ವರ್ಷಗಳ ಪೂರ್ವದಲ್ಲಿ ಇಜಿಪ್ತದಲ್ಲಿ ಮೊದಲಾಯಿತು. ಸ್ಥೂಲದೃಷ್ಟಿಯಿಂದ ಇಜಿಪ್ತ, ಫಿನಿಶಿಯಾ, ಗ್ರೀಸ, ಅಲೆಕ್‌ಝಾಂಡ್ರಿಯಾ, ಬಾಯಝಾಂಶಿಯಮ್, ಇಟಲಿ ದೇಶಗಳಲ್ಲಿ ಕ್ರಮವಾಗಿ ಸುಧಾರಣೆಯು ಮುಂದರಿಯುತ್ತ ಇಂದಿನ ಸುಧಾರಿಸಿದ ಪಾಶ್ಚಾತ್ಯ ರಾಷ್ಟ್ರಗಳ ವರೆಗೆ ಬಂದುಮುಟ್ಟಿದೆ.) ಆದರೆ ಈ ಸುಧಾರಣೆಯು ಯಾವ ರಾಷ್ಟ್ರಗಳಿಂದ ಬಂದಿತೋ, ಆ ಇಜಿಪ್ತ, ಫಿನಿಶಿಯಾ, ಗ್ರೀಸ ಮೊದಲಾದ ರಾಷ್ಟ್ರಗಳು ಮಾತ್ರ ಪೂರ್ಣ ಪಾತಾಳಕ್ಕೆ ಇಳಿದೇ ಹೋಗಿವೆ. ಮರಳಿ ಅವು ಇನ್ನೂ ವರೆಗೂ ತಲೆಯೆತ್ತಿಲ್ಲ. ಇಷ್ಟೇ ಅಲ್ಲ. ಅವಕ್ಕೆ ತಮ್ಮ ಉತ್ಕರ್ಷದ ಕಾಲದಲ್ಲಿದ್ದ ಜ್ಞಾನವನ್ನು ಕೂಡ ಕಾಯ್ದುಕೊಳ್ಳಲು ಆಗಲಿಲ್ಲ. ಆದರೆ ಇದರ ವಿರುದ್ಧವಾಗಿ ಭಾರತವು ರಾಷ್ಟ್ರಗಳ ಪ್ರಗತಿಯ ಸ್ಪರ್ಧೆಯಲ್ಲಿ ಇಂದು ಎಷ್ಟೇ ಹಿಂದೆ ಬಿದ್ದಿದ್ದರೂ ಅದು ತನ್ನ ಸಂಸ್ಕೃತಿಯನ್ನೂ ಜ್ಞಾನವನ್ನೂ ಕಾಯ್ದುಕೊಂಡಿದೆ. ತನ್ನ ಪಿತ್ರಾರ್ಜಿತ ಜ್ಞಾನದ ಬಗ್ಗೆ ಅಭಿಮಾನವನ್ನು ತಾಳುವುದಲ್ಲದೆ, ಪೂರ್ವದ ಶಾಸ್ತ್ರಗಳ–ಕಲೆಗಳ ಪರಂಪರೆಯನ್ನು ಇನ್ನೂ ಉಳಿಸಿಕೊಂಡಿದೆ. ಹೊಸ ಜ್ಞಾನವನ್ನು ಸಂಪಾದಿಸಿ ಸರ್ವತೋಮುಖವಾಗಿ ಬೆಳೆಯಬೇಕೆಂಬ ಉತ್ಸುಕತೆಯು ಜನತೆಯಲ್ಲಿ

ಕಂಡುಬರುತ್ತಲಿದೆ. ಇಜಿಪ್ತ ಮೊದಲಾದವುಗಳಂತೆ ಮೃತಪ್ರಾಯವಾಗದೆ ಜೀವಂತ ಉಳಿದು ಪರಂಪರೆಯನ್ನು ಕಾಯ್ದುಕೊಂಡುದಕ್ಕಾಗಿ ನಮಗೆ ಅಭಿಮಾನವೆನಿಸುತ್ತದೆ. ಆದುದರಿಂದ ನಮ್ಮ ಪ್ರಗತಿಯ ಮಾರ್ಗವು ಸುಗಮವಾದೆ ನಮಗೆ.

## ಜ್ಞಾನಗಂಗೆಯು ಹರಿಗಡಿಯದೆ ಹರಿಯುತ್ತಲಿದೆ

ರಾಷ್ಟ್ರರಾಷ್ಟ್ರಗಳ ಉದಯಾಸ್ತಗಳು ಹೇಗೇ ಇರಲಿ, ಅವುಗಳ ಉತ್ಪತ್ತಿ-ಸ್ಥಿತಿ-ಲಯಗಳು ಹೇಗೇ ಇರಲಿ, ಮಾನವೀ ಸಂಸ್ಕೃತಿಯು ಹಾಗೂ ಜ್ಞಾನದ ರಥವು ಮಾತ್ರ ಪ್ರಗತಿಪಥದಲ್ಲಿ ಮುಂದರಿಯುತ್ತಲೇ ಇದೆ ಎಂಬುದರಲ್ಲಿ ಸಂಶಯವಿಲ್ಲ. ಭಿನ್ನಭಿನ್ನ ಕಾಲಕ್ಕೆ ಬೇರೆ ಬೇರೆ ಸಾರಥಿಗಳು ಬಂದಿರಬಹುದು. ವೇಗವೂ ಹೆಚ್ಚು ಕಡಿಮೆಯಾಗಿರಬಹುದು. ಆದರೆ ರಥವು ಮಾತ್ರ ಮುರಿದು ಬಿದ್ದಿಲ್ಲ. ರಥವು ನಿಂತಲ್ಲಿಯೇ ನಿಂತಿಲ್ಲ. ಯಾವುದೇ ರಾಷ್ಟ್ರದ ಅನುಭವ ಹಾಗು ಜ್ಞಾನವು ವ್ಯರ್ಥವಾಗಿ ಹೋಗಿಲ್ಲ.

ಇನ್ನು ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ಜ್ಞಾನವು ಹರಿಯುವಾಗ ಸಂಕ್ರಮಣಾವಸ್ಥೆಯಲ್ಲಿ ಜ್ಞಾನದ ಕೆಲವೊಂದು ಪರಂಪರೆಯು ಕಡಿಯುವುದು ಸ್ವಾಭಾವಿಕ. ಇದರಿಂದ ಅದು ಕೆಲವೊಂದು ಕಾಲ ಕಾಣದಂತಾಗಬಹುದು. ಆದರೆ ಲುಪ್ತವಾದ ಅಂಶವೂ ಕೂಡ ಅನುಕೂಲ ಪರಿಸ್ಥಿತಿ ಬಂದೊಡನೆ ಪುನರುಜ್ಜೀವನ ಹೊಂದಿ ಜ್ಞಾನದ ಪ್ರಗತಿಯು ಮುಂದೆ ಸಾಗುವುದು. ಹೀಗೆ ವಿಶಾಲದೃಷ್ಟಿಯಿಂದ ನೋಡಿದರೆ ಇಲ್ಲಿಯವರೆಗಿನ ಯಾವ ರಾಷ್ಟ್ರದ ಜ್ಞಾನದ ಪ್ರಯತ್ನವೂ ವ್ಯರ್ಥವಾಗದೆ, ಸರ್ವ ರಾಷ್ಟ್ರಗಳ ಜ್ಞಾನವು ಸಂಕುಚಿತವಾಗುತ್ತ ಇಂದು ನಮ್ಮೆದುರಿಗೆ ಪ್ರಚಂಡವಾದ ಜ್ಞಾನದ ನಿಧಿಯು ಕಾಣುತ್ತದೆ.

ಈ ಜ್ಞಾನದ ನಿಧಿಯು ಏನೂ ಆಯಾಸವಿಲ್ಲದೆ ಒಂದೇ ಸವನೆ ಬೆಳೆಯುತ್ತ ಹೋಯಿತೆಂದು ಮಾತ್ರ ಯಾರೂ ತಿಳಿಯಕೂಡದು. ಅನೇಕ ಸಲ ಪರಂಪರೆಯು ಕಡಿದು ಮೊದಲಿನ ಜ್ಞಾನವು ಮಾಯವಾದುದನ್ನು

ಇತಿಹಾಸದಲ್ಲಿ ಕಾಣಬಹುದು. ಅದರಂತೆಯೇ ಜ್ಞಾನಶೋಧನೆಯ ಕಾರ್ಯವು ಅತ್ಯಂತ ಕಠಿಣವಾದುದನ್ನೂ ನೋಡಬಹುದು. ತಮ್ಮ ಉತ್ಕರ್ಷದ ಕಾಲದಲ್ಲಿ ಗ್ರೀಕತತ್ವಜ್ಞಾನಿಗಳು ಜ್ಯೋತಿಷ, ಪದಾರ್ಥವಿಜ್ಞಾನ ಮೊದಲಾದ ಶಾಸ್ತ್ರಗಳಲ್ಲಿ ಆಶ್ಚರ್ಯಕಾರಕ ಶೋಧಗಳನ್ನು ಮಾಡಿದ್ದರು. ಪೃಥ್ವಿಯು ದುಂಡಗಿದ್ದು ಸೂರ್ಯನ ಸುತ್ತಲೂ ತಿರುಗುತ್ತದೆ. ಪ್ರತಿಯೊಂದು ವಸ್ತುವೂ ಪರಮಾಣುವಿನಿಂದ ಆಗಿದೆ ಇತ್ಯಾದಿ ಅನೇಕ ಮಾತುಗಳನ್ನು ಗ್ರೀಕರು ಶೋಧಿಸಿದ್ದರು. ಆದರೆ ಈ ಜ್ಞಾನವು ಮಧ್ಯಕಾಲದಲ್ಲಿ ಮಾಯವಾಯಿತು. ಜನರು ಮೂಢರೂ ಕಾಡುಜನರೂ ಆದರು. ಮುಂದೆ ಸಾವಿರಾರು ವರ್ಷಗಳ ನಂತರ ಇವೇ ಮಾತುಗಳನ್ನು ಪ್ರಕಟಿಸಿದ **ಗ್ಯಾಲಿಲಿಯೋ, ಬ್ರೂನೋ** ಮೊದಲಾದವರು ಕಷ್ಟಕ್ಕೆ ಗುರಿಯಾಗಬೇಕಾಯಿತು. ಆದರೆ ಗ್ರೀಕರ ಈ ಶೋಧವು ವ್ಯರ್ಥವಾಯಿತೆಂದು ತಿಳಿಯಕೂಡದು. ಅವರು ತಮ್ಮ ಬುದ್ಧಿಬಲದಿಂದ ಪ್ರಕಟಿಸಿದ ವಿಚಾರಗಳು ಮುಂದಿನ ಶಾಸ್ತ್ರಜ್ಞರಿಗೆ ಮಾರ್ಗದರ್ಶಕವಾದವು. ಅವೇ ವಿಚಾರಗಳ ಆಧಾರಗಳಿಂದ ೧೭ನೆಯ ಶತಮಾನದಲ್ಲಿ ಮತ್ತು ೧೮ನೆಯ ಶತಮಾನದಲ್ಲಿ ಆಧುನಿಕ ಪಂಡಿತರು ಅನೇಕ ಶಾಸ್ತ್ರಗಳನ್ನು ರಚಿಸಿದರು.

**ಜ್ಞಾನವು ಅವಿನಾಶಿಯು**

ಬೇಸಿಗೆ ಚಳಿಗಾಲದಲ್ಲಿ ಮಾಯವಾದ ಹುಲ್ಲು ಮೃಗಪ್ರವೇಶವಾದೊಡನೆಯೇ ಹಸರೊಡೆಯುವಂತೆ ಜ್ಞಾನವೂ ಅನುಕೂಲ ಪರಿಸ್ಥಿತಿಯುಂಟಾದ ಕೂಡಲೇ ಹೊರಹೊಮ್ಮುವುದು. ಜ್ಞಾನದ ಬುಡಕ್ಕಿರುವ ಸತ್ಯಸಿದ್ಧಾಂತಗಳೂ ಮಾನವನ ವಿಚಾರಶಕ್ತಿಗಳೂ ಇದಕ್ಕೆ ಕಾರಣವು. ಸತ್ಯವೇ ಜ್ಞಾನದ ಮೂಲವಿರುವುದರಿಂದ ಕೆಲವು ಕಾಲ ಮಾಯವಾದರೂ ಅದು ಪುನಃ ಉದಯವಾಗುತ್ತದೆ. ಮಾನವನ ವಿಚಾರಶಕ್ತಿಯು ಅದರ ಉತ್ಥಾನಕ್ಕೆ ಪುಟಕೊಡುವುದು.

ಪ್ರತಿಕೂಲ ಪರಿಸ್ಥಿತಿಯ ಮೂಲಕ ಕೆಲಕಾಲ ಜ್ಞಾನವು ಸುಷುಪ್ತಾವಸ್ಥೆಯಲ್ಲಿದ್ದರೂ ಕೂಡ ಅದು ಯಾವಾಗಾದರೊಮ್ಮೆ ಎಲ್ಲಿಯಾದರೂ ಮತ್ತೆ ಉದಯವಾಗಲೇಬೇಕು. ಈ ಸಿದ್ಧಾಂತಕ್ಕೆ ಆಶ್ಚರ್ಯಕಾರಕ ಉದಾಹರಣೆಯೊಂದನ್ನು ಇಲ್ಲಿ ಕೊಡಬಹುದು. ಭಾರತೀಯರು ಪ್ರಾಚೀನ

ಕಾಲದಲ್ಲಿ ಭಾಷಾಶಾಸ್ತ್ರ ಹಾಗು ವ್ಯಾಕರಣದ ಸೂಕ್ಷ್ಮ ಅಭ್ಯಾಸವನ್ನು ಮಾಡಿ ಅದನ್ನು ಪರಿಣತಾವಸ್ಥೆಗೆ ಮುಟ್ಟಿಸಿದ್ದರು. ಯಾಸ್ಕ, ಪಾಣಿನಿ, ಪಾತಂಜಲಿಗಳ ವರೆಗೆ ಈ ಶಾಸ್ತ್ರವು ಬೆಳೆದು ಮುಂದೆ ಟೀಕೆ-ಟಿಪ್ಪಣಿಗಳ ಉದಯವಾಗಿ ಅದರ ಬೆಳವಣಿಗೆಯು ನಿಂತುಹೋಯಿತು. ಇದ್ದ ಬಾಂಡ ವಲದ ಮೇಲೆಯೇ ಪೂರ್ವಪಕ್ಷ, ಉತ್ತರಪಕ್ಷ, ಕೋಟಿ, ಪ್ರತಿಕೋಟಿ ಮಾಡುವುದರಲ್ಲಿಯೇ ನಮ್ಮ ಪಂಡಿತರ ಬುದ್ಧಿಯು ವ್ಯಯವಾಗಹತ್ತಿತು. ಜಗತ್ತಿನಲ್ಲಿ ಉಳಿದ ಯಾವ ರಾಷ್ಟ್ರಗಳಿಗೂ ತಿಳಿಯದ, ಭಾರತದಲ್ಲಿ ಅರ್ಧಕ್ಕೇ ನಿಂತ ಈ ಭಾಷಾಶಾಸ್ತ್ರವು ೧೮ನೆಯ ಶತಮಾನದ ಅಂತ್ಯಕ್ಕೆ ಸಂಸ್ಕೃತ ಅಭ್ಯಾಸವನ್ನು ಕೈಕೊಂಡ ಪಾಶ್ಚಾತ್ಯರ ಕಣ್ಣಿಗೆ ಬಿದ್ದಿತು. ಸಂಸ್ಕೃತಕ್ಕೂ ಗ್ರೀಕ್ ಲ್ಯಾಟಿನ್‌ಗಳಿಗೂ ಇರುವ ಸಾಮ್ಯವನ್ನು ಕಂಡು ಬೆರಗಾದರು. ಅವರ ಚಿಕಿತ್ಸಕ ಬುದ್ಧಿಗೆ ಅನ್ನ ದೊರೆತಂತಾಯಿತು. ಸಂಸ್ಕೃತಭಾಷಾಶಾಸ್ತ್ರದಲ್ಲಿಯ ಅಲೌಕಿಕವಾದ ಶಾಸ್ತ್ರೀಯ ವಿಚಾರಗಳು ಅವರಿಗೆ ಹೊಸ ಬೆಳಕನ್ನು ಕೊಟ್ಟವು. ಗ್ರೀಕರ ಶಾಸ್ತ್ರೀಯ ಜ್ಞಾನವು ಆಧುನಿಕ ಭೌತಿಕ ವಿದ್ವಾಂಸರಿಗೆ ಮಾರ್ಗದರ್ಶಕವಾದಂತೆ, ಭಾರತೀಯ ಭಾಷಾಶಾಸ್ತ್ರವು, ತುಲನಾತ್ಮಕ ಭಾಷಾಶಾಸ್ತ್ರದ ನಿರ್ಮಾಣಕ್ಕೆ ನೆರ ವಾಯಿತು. ಯಾವುದೋ ಕಾಲದ, ಯಾವುದೋ ಸ್ಥಳದ ಜ್ಞಾನದ ಬೀಜ ಗಳು ಮತ್ತೆ ಎಲ್ಲಿ ಅಂಕುರಿಸುವುವು ಎಂಬುದನ್ನು ಹೇಳಲಿಕ್ಕೆ ಬರುವುದಿಲ್ಲ. ಎಲ್ಲಿಯ ನಮ್ಮ ಶಾಕಟಾಯನ, ಯಾಸ್ಕ, ಪಾಣಿನಿ, ಪಾತಂಜಲಿ ಮೊದ ಲಾದ ವ್ಯಾಕರಣಕಾರರು ! ಎಲ್ಲಿಯ ಬಾಪ್, ಗ್ರೀಮ್, ಶ್ಲೇಗಲ್, ಹೇರ್ಡರ್, ಮ್ಯಾಕ್ಸ್‌ಮುಲ್ಲರ್ ಇತ್ಯಾದಿ ಜರ್ಮನ್ ಭಾಷಾಜಿಜ್ಞಾಸು ಗಳು ! ಆದರೆ ಸಾವಿರಾರು ವರ್ಷಗಳ ಪೂರ್ವದ ನಮ್ಮ ಭಾಷಾ ಶಾಸ್ತ್ರಜ್ಞರು ಮತ್ತು ಮೊನ್ನೆ ಮೊನ್ನಿನ ಶಾರ್ಮಣ್ಯದೇಶಿಯ ಶೋಧಕರು! ಇಂಥ ವಿಲಕ್ಷಣ ಘಟನೆಯು ದೈವೀಲೀಲೆಯೆಂದೇ ಹೇಳಬಹುದು.

### ಜ್ಞಾನ ಹಾಗು ಸಂಸ್ಕೃತಿಗಳ ಭಿನ್ನತೆ

ಇಲ್ಲಿ ಜ್ಞಾನ ಹಾಗು ಸಂಸ್ಕೃತಿಗಳ ಅಂತರವನ್ನು ನಾವು ಲಕ್ಷ ದಲ್ಲಿಡಬೇಕು. ನಿತ್ಯ ಹಾಗು ಅವಿನಾಶಿ ಎಂದು ವರ್ಣಿಸಿದುದು ಜ್ಞಾನ

ಎಂಬುದನ್ನು ಮರೆಯಲಾಗದು. ಯಾವುದೊಂದು ರಾಷ್ಟ್ರದ ಸಂಸ್ಕೃತಿ ಯೆಂದೊಡನೆ, ಆ ರಾಷ್ಟ್ರದ ಧರ್ಮ, ಪಾರಮಾರ್ಥಿಕ ವಿಚಾರ, ಸಾಮಾಜಿಕ ನಡೆನುಡಿ, ನೀತಿಯ ಕಲ್ಪನೆ, ಮನೋಭಾವನೆ ಮೊದಲಾದ ಅನೇಕ ಸಂಗತಿಗಳ ಸಮಾವೇಶವಾಗುತ್ತದೆ. ಒಂದು ರಾಷ್ಟ್ರದ ಸಂಸ್ಕೃತಿ ಯನ್ನು ಇನ್ನೊಂದು ರಾಷ್ಟ್ರವು ಸ್ವೀಕರಿಸುವುದು ಕಠಿಣವಿದೆ. ಆದರೆ ಜ್ಞಾನದ ಮಾತು ಹಾಗಲ್ಲ. ಅದು ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ಸುಲಭವಾಗಿ ಹೋಗಬಹುದು. ಯಾವುದೊಂದು ರಾಷ್ಟ್ರವು ಉನ್ನತಾವಸ್ಥೆಯಲ್ಲಿರುವುದು ಎಂದರೆ, ಅದರ ಸಂಸ್ಕೃತಿಯೂ ಜ್ಞಾನವೂ ಸರಿಯಾಗಿಯೇ ಬೆಳವಣಿಗೆಯನ್ನು ಹೊಂದಿವೆ ಎಂದರ್ಥ. ಆದರೆ ಆ ರಾಷ್ಟ್ರದ ಜ್ಞಾನವು ಇತರ ರಾಷ್ಟ್ರಗಳಲ್ಲಿ ಹಬ್ಬಲು ಶಕ್ಯವಿದ್ದಷ್ಟು ಸಂಸ್ಕೃತಿಯು ಹಬ್ಬಲಾರದು. ಇಜಿಪ್ತ ಹಾಗು ಬಾಬಿಲೋನ ಜನರಿಂದ ಗ್ರೀಕರು ಸರ್ವ ಪ್ರಕಾರದ ಜ್ಞಾನನಿಧಿಯನ್ನು ತೆಗೆದುಕೊಂಡರು. ಅವರ ವಿಶಿಷ್ಟ ಸಂಸ್ಕೃತಿಯೆಂದರೆ, ಅವರ ಧರ್ಮ, ಆಚಾರ-ವಿಚಾರ, ನೀತಿ ಗಳನ್ನೂ ಅನುಸರಿಸಿದರು ಎಂದು ಹೇಳುವುದು ತಪ್ಪಾಗುವುದು. ಇಜಿಪ್ತ ಬಾಬಿಲೋನ ರಾಷ್ಟ್ರಗಳ ಸಂಸ್ಕೃತಿಗಳು ಅಲ್ಲಿಯೇ ಅಳಿದುವು. ಗ್ರೀಕರ ಮನೋಭೂಮಿಕೆಯೂ ಸಂಸ್ಕೃತಿಯೂ ಅವರಿಂದ ತೀರ ಭಿನ್ನವಾದುದು. ಅದರಂತೆಯೇ ಭಾರತವು ೧೦೦-೧೫೦ ವರ್ಷಗಳಿಂದ ಪಾಶ್ಚಾತ್ಯರ ಭೌತಿಕ ಜ್ಞಾನವನ್ನು ಸಂಪಾದಿಸತೊಡಗಿದೆ. ಆದರೆ ಅವರ ಸಂಸ್ಕೃತಿಯನ್ನೇ ನಾವು ತೆಗೆದುಕೊಳ್ಳುತ್ತಿರುವೆವೆಂದು ತಿಳಿಯುವುದು ಶುದ್ಧ ತಪ್ಪು. ಸಂಸರ್ಗದಿಂದ ಕೆಲವು ಬಾಹ್ಯಾಚಾರಗಳು ಬಂದಿರಬಹುದು. ಅವರ ರಾಷ್ಟ್ರೀಯ ಗುಣಗಳನ್ನು ನಾವು ಅನುಕರಣಮಾಡುವುದೂ ಅವಶ್ಯ. ಆದರೆ ಅದರಿಂದ ನಮ್ಮ ರಾಷ್ಟ್ರದ ಸ್ವಭಾವ ಹಾಗು ಆತ್ಮಗಳು ಅದರಂ ತೆಯೇ ಆಗುವುವೆಂದು ಬಗೆಯುವುದು ತೀರ ತಪ್ಪು.

ಜ್ಞಾನ ಹಾಗು ಸಂಸ್ಕೃತಿಗಳ ಅಂತರವನ್ನು ಸ್ಥೂಲಮಾನದಿಂದ ನೋಡೋಣ. ಯಾವುದೊಂದು ರಾಷ್ಟ್ರದ ಜ್ಞಾನವು ಅದರ ಸಂಸ್ಕೃತಿ ಯಲ್ಲಿ ಅಡಕವಾಗಿರುತ್ತದೆ. ಅದರ ಜ್ಞಾನದೊಡನೆ ಅದರ ಸಂಸ್ಕೃತಿಯು ಕಲ್ಪನೆಯೂ ಅಲ್ಪಸ್ವಲ್ಪ ಹಬ್ಬುತ್ತದೆ. ಒಂದು ರಾಷ್ಟ್ರದ ಜ್ಞಾನವನ್ನು

ಪೂರ್ಣವಾಗಿ ಮತ್ತೊಂದು ರಾಷ್ಟ್ರವು ತೆಗೆದುಕೊಳ್ಳಬಹುದು. ಆದರೆ ಸಂಸ್ಕೃತಿಯ ಮಾತು ಹಾಗಲ್ಲ. ಸಂಸ್ಕೃತಿಯು ಆಯಾ ರಾಷ್ಟ್ರಗಳ ಸ್ವಭಾವಗುಣಗಳಿಗೆ ಅನುಸರಿಸಿ ಭಿನ್ನಭಿನ್ನವಾಗಿರುತ್ತದೆ. ಆದುದರಿಂದ ಅನುಕರಣಮಾಡಲು ಶಕ್ಯವಾಗುವುದಿಲ್ಲ. ಜ್ಞಾನವು ಶುದ್ಧ ನಿರ್ಗುಣ ಹಾಗು ಸರ್ವ ರಾಷ್ಟ್ರೀಯವಿರುತ್ತದೆ. ಸಂಸ್ಕೃತಿಯು ಆಯಾ ರಾಷ್ಟ್ರಗಳ ಸ್ವಭಾವಾನುರೂಪವಿರುತ್ತದೆ. ಒಂದು ರಾಷ್ಟ್ರದ ಸಂಸ್ಕೃತಿಯನ್ನು ಮತ್ತೊಂದು ರಾಷ್ಟ್ರವು ಅತ್ಯಂತ ಪರಿಶ್ರಮದಿಂದ ಅನುಕರಿಸಲು ಯತ್ನಿಸಬಹುದು. ಆದರೆ ಆ ಅನುಕರಣದಲ್ಲಿಯೂ ತನ್ನ ಸ್ವಭಾವಕ್ಕೆ ಅನುಸರಿಸಿ ಬದಲು ಮಾಡಿಕೊಳ್ಳಬೇಕಾದೀತು. ಅಂತೂ ಪೂರ್ಣವಾಗಿ ಅನುಕರಿಸಲು ಅಶಕ್ಯವಿದೆ. ಯಾಕಂದರೆ, ಇದು ಪ್ರಕೃತಿಗೆ ವಿರುದ್ಧವಾದುದು. ಇದಲ್ಲದೆ ಅದು ಅಗತ್ಯವೂ ಇಲ್ಲ. ಯಾಕಂದರೆ, ರಾಷ್ಟ್ರದ ಉನ್ನತಿಯು ಜ್ಞಾನವನ್ನು ಅವಲಂಬಿಸಿದಷ್ಟು ಸಂಸ್ಕೃತಿಯನ್ನು ಅವಲಂಬಿಸಿರುವುದೆಂದು ಹೇಳಲು ಬರುವುದಿಲ್ಲ. ಇಜಿಪ್ತ ಹಾಗು ಬಾಬಿಲೋನ ರಾಷ್ಟ್ರಗಳ ಧಾರ್ಮಿಕ ಹಾಗು ಸಾಮಾಜಿಕ ಕಲ್ಪನೆಗಳು ವಿಲಕ್ಷಣವಾಗಿದ್ದವು. ಆದರೆ ಅವುಗಳ ಕೀರ್ತಿಯು ಜ್ಞಾನದಿಂದಲೇ ಇದ್ದಿತು. ಆದುದರಿಂದಲೇ ಜ್ಞಾನಸಂಪಾದನೆಯು ಅವಶ್ಯವೆಂದೂ ಸಂಸ್ಕೃತಿಯ ಅನುಕರಣವು ಅಗತ್ಯವಿಲ್ಲೆಂದೂ ಮೇಲೆಯೇ ಕಾಣುವುದು. ಇದರಿಂದ ಪರಸಂಸ್ಕೃತಿಯ ಅಭ್ಯಾಸ ಮಾಡಬಾರದೆಂದಲ್ಲ. ಸಂಸ್ಕೃತಿಯ ಇತಿಹಾಸವೂ ಒಂದು ಬಗೆಯ ಜ್ಞಾನವೇ! ಇತರ ಜ್ಞಾನಾಭ್ಯಾಸದ ಅವಶ್ಯಕತೆಯಿರುವಂತೆ ಸಂಸ್ಕೃತಿಯ ಅಭ್ಯಾಸವೂ ಬೇಕು. ಆದರೆ ಯಾವುದೊಂದು ರಾಷ್ಟ್ರದ ಶಾಸ್ತ್ರೀಯ ಜ್ಞಾನವು ಎರಡನೆಯ ರಾಷ್ಟ್ರದ ಪ್ರಗತಿಗೆ ಹೇಗೆ ಉಪಯೋಗ ಬೀಳುವುದೊ ಹಾಗೆ ಸಂಸ್ಕೃತಿಯು ಬೀಳಲಾರದು. ತುಲನಾತ್ಮಕದೃಷ್ಟಿಯಿಂದ ಅಭ್ಯಸಿಸಲು ಮಾತ್ರ ಅನುಕೂಲವಾಗುವುದು. ಆದರಿಂದ ನಾವು ಹೊಸ ಪಾಠವನ್ನು ಕಲಿಯಬಹುದು. ಆದರೆ ಪರಕೀಯ ಸಂಸ್ಕೃತಿಯು ಪ್ರತ್ಯಕ್ಷವಾಗಿ ಎಂದೂ ನಮಗೆ ಆತ್ಮೀಯವೆನಿಸಲಾರದು.

ಜ್ಞಾನ ಹಾಗು ಸಂಸ್ಕೃತಿಯಲ್ಲಿಯ ಈ ಸೂಕ್ಷ್ಮಭೇದವನ್ನು ಅರಿಯದೆ ನಮ್ಮಲ್ಲಿಯ ಹಲವು ಮುಂದಾಳುಗಳು ಪಾಶ್ಚಾತ್ಯ ಸಂಸ್ಕೃತಿಯ

ಅನುಕರಣವೇ ಭಾರತೋದ್ಧಾರದ ಮಾರ್ಗವೆಂದು ಬಗೆದು ತಪ್ಪು ದಾರಿಯನ್ನು ಹಿಡಿದರು. ಪಾಶ್ಚಾತ್ಯರು ಭೌತಿಕಜ್ಞಾನದಿಂದಲೂ ಶಾಸ್ತ್ರೀಯ ದೃಷ್ಟಿಯಿಂದಲೂ ಮುಂದುವರಿದಿರುವರು. ಜ್ಞಾನ ಹಾಗು ಸಂಸ್ಕೃತಿಗಳು ಭಿನ್ನವಿರುತ್ತವೆ. ನಾವು ಜ್ಞಾನದ ಅನುಕರಣವನ್ನಷ್ಟೇ ಮಾಡಬೇಕು ಎಂಬ ವಿವೇಕವು ಪಾಶ್ಚಾತ್ಯರ ಬೆಡಗಿಗೆ ಮರುಳಾದ ನಮ್ಮ ಮುಖಂಡರಿಗೆ ಹೊಳೆಯಲಿಲ್ಲ. ಪಾಶ್ಚಾತ್ಯರ ಸರ್ವಸ್ವವೂ ಅನುಕರಣೀಯ ವೆಂದು ಬಗೆದರು. ಮದ್ಯಮಾಂಸಾದಿಗಳ ಸೇವನೆಯು ಕೂಡ ಯೋಗ್ಯ ವೆಂದು ಭಾವಿಸಿದರು. ಆದರೆ ಇಂತಹ ಪರಿಸ್ಥಿತಿಯು ಬಹು ದಿವಸ ಉಳಿಯಲಿಲ್ಲ. ಜ್ಞಾನೋದಯವಾಯಿತು. ವಿಷ್ಣುಶಾಸ್ತ್ರಿಗಳಂಥ ವಿವೇಕಿ ಗಳು ಮುಂದೆ ಬಂದರು. (೧) ಜ್ಞಾನ ಹಾಗು ಸಂಸ್ಕೃತಿಗಳು ಭಿನ್ನ ವಿರುತ್ತವೆ. (೨) ಭೌತಿಕಜ್ಞಾನವನ್ನು ಪಾಶ್ಚಾತ್ಯರಿಂದ ಸಂಪಾದಿಸಬೇಕು. (೩) ಅವರ ಜ್ಞಾನದೊಡನೆ ಅವರ ಸಂಸ್ಕೃತಿ ಹಾಗೂ ಸಾಮಾಜಿಕ ಕಲ್ಪನೆಗಳನ್ನು ತೆಗೆದುಕೊಳ್ಳುವ ಕಾರಣವಿಲ್ಲ. ನಮಗೆ ಒಂದು ಸಂಸ್ಕೃತಿ ಯಿದೆ. ಅದನ್ನು ಸಂರಕ್ಷಿಸುವುದರಲ್ಲಿಯೇ ನಮ್ಮ ರಾಷ್ಟ್ರದ ಬೆಳವಣಿಗೆ ಯಿದೆ. (೪) ಆದರೆ ಪಾಶ್ಚಾತ್ಯ ಸಂಸ್ಕೃತಿಯಿಂದ ನಾವು ಸ್ವದೇಶಾಭಿ ಮಾನ, ಶಿಸ್ತು, ಸಂಘಟನೆಗಳನ್ನು ಕಲಿಯಲೇಬೇಕೆಂಬ ತತ್ವಗಳ ಪ್ರಚಾರಕ್ಕೆ ಪ್ರಾರಂಭವಾಯಿತು. ಈ ತತ್ವಗಳೇ ನಮ್ಮ ರಾಷ್ಟ್ರದ ಮಹಾಮಂತ್ರಗಳೆಂದು ಹೇಳಬಹುದು. ಇವುಗಳು ನಮ್ಮ ಜೀವನದಲ್ಲಿ ಇಳಿದಷ್ಟು ನಾವು ಪ್ರಗತಿಯ ಸಮೀಪಕ್ಕೆ ತೆರಳುವೆವು.

---

# ಎರಡನೆಯ ಮೆಟ್ಟಿಲು



## ಜ್ಞಾನಮಾರ್ಗದಲ್ಲಿ ಮಾನವನ ಮುನ್ನಡೆ

### ಪ್ರಾಗೈತಿಹಾಸಿಕ ಕಾಲ

**ಮಾನವನ ಪ್ರಚಾರಪ್ರಗತಿ**

ಮಾನವನು ಜ್ಞಾನಕ್ಕಾಗಿ ಎಡೆಬಿಡದೆ ಯತ್ನಿಸುತ್ತಿರುವುನೆಂಬುದೇ ನಮ್ಮ ಪಲ್ಲವಿಯು. ಇದು ಅತ್ಯಂತ ಯಥಾರ್ಥವಿದೆ. ಅವನು ಇಲ್ಲಿಯ ವರೆಗೆ ದೊರಕಿಸಿದ ಜ್ಞಾನದಿಂದಂತೂ ಅವನು ಸುಖಿಯಾಗಿಲ್ಲ. ಆ ಸುಖ ಕ್ಕಾಗಿ ಅವನು ಯುಗಯುಗಗಳಿಂದ ತಳಮಳಿಸುತ್ತಿರುವನು. ಎಡವುತ್ತ ತಡವುತ್ತ ಇಂದು ಜ್ಞಾನದ ಅತ್ಯುನ್ನತ ಪ್ರದೇಶದ ಮೇಲೆ ಬಂದು ನಿಂತಿ ರುವನು. ಈಗ ಅವನಿಗೆ ತನ್ನ ಮೊದಲಿನ ಪರಿಸ್ಥಿತಿಯ ಕಲ್ಪನೆಯು ಕೂಡ ಬರಲು ಶಕ್ಯವಿಲ್ಲ. ಯಾಕಂದರೆ, ಅವನ ಈಗಿನ ಇರುವಿಕೆ, ಆಚಾರವಿಚಾರ, ಜೀವನಸಾಧನಗಳು ಮೊದಲಿನಕ್ಕಿಂತ ತೀರ ಭಿನ್ನವಾಗಿವೆ. ಆ ಕಾಲದ ಮನುಷ್ಯನು ಇಂದು ಅವತರಿಸಿದರೆ ಇವರು ನನ್ನ ಪೂರ್ವಜರೇ ಎಂಬ ಸಂಶಯವು ಅವನಿಗೆ ಸಹಜವಾಗಿ ಬರಬಹುದು. ಉಗಿಬಂಡಿ, ತಾರಾ ಯಂತ್ರ, ವಿಮಾನ ಮೊದಲಾದ ಶಾಸ್ತ್ರೀಯ ಜ್ಞಾನವನ್ನು ಬಿಟ್ಟರೂ ಕೂಡ ಮಾನವನ ಜೀವನದಲ್ಲಿ ಉಂಟಾದ ಪ್ರಚಂಡ ಉತ್ಕ್ರಾಂತಿಗೆ ಅವನು ಹಾಲು ಕುಡಿಯುವ ಒಂದು ಸಾದಾ ಮಾತೇ ಸಾಕು. ದನಕರ ಗಳ ಹಾಲನ್ನು ಉಪಯೋಗಿಸುವುದು ಇಂದಿನ ಸ್ವಾಭಾವಿಕ ಜೀವನ ವಾಗಿದೆ. ಆದರೆ ಒಂದು ಕಾಲಕ್ಕೆ ಮಾನವನಿಗೆ ಹಾಲು ತುಪ್ಪಗಳೆಂದರೇನು ಎಂಬ ಕಲ್ಪನೆಯು ಕೂಡ ಇರಲಿಲ್ಲವೆಂದರೆ ಈಗ ನಮಗೆ ಆಶ್ಚರ್ಯ ವಾಗುವುದು. ಆದರೆ ಮಾನವನು ಹಾಲು ತುಪ್ಪಗಳಿಲ್ಲದೆ ಒಂದು ಕಾಲಕ್ಕೆ ಜೀವಿಸಿದ್ದು ಅವುಗಳು ಮನುಷ್ಯನ ಉಪಯೋಗಕ್ಕೆ ಯೋಗ್ಯವೆಂಬ ಅರಿವು

ಕೂಡ ಇರಲಿಲ್ಲವೆಂದು ಶಾಸ್ತ್ರಜ್ಞರು ನಿರ್ಧರಿಸಿದ್ದಾರೆ. ಕಬ್ಬಿಣದ ಉಪ ಯೋಗವಿಲ್ಲದೆ ಇಂದಿನ ಜೀವನವೇ ಅಸಾಧ್ಯವೆಂದು ನಮಗೆ ಅನಿಸ ಬಹುದು. ಆದರೆ ಕಬ್ಬಿಣದ ಶೋಧವು ತೀರ ಇತ್ತೀಚೆಗೆ ಆಗಿದೆ. ೩-೪ ಸಾವಿರ ವರ್ಷಗಳ ಪೂರ್ವದಲ್ಲಿ ಈ ಧಾತುವೇ ಗೊತ್ತಿರಲಿಲ್ಲ. ಆದರೆ ಅದಕ್ಕಿಂತ ಮೊದಲು ಎಷ್ಟೋ ಸಾಮ್ರಾಜ್ಯಗಳು ಆ ಕಾಲಕ್ಕೆ ತಕ್ಕಂತೆ ಸುಧಾರಣೆಯ ಶಿಖರಕ್ಕೆ ಮುಟ್ಟಿದ್ದುವು. ಹೀಗೆ ಅನೇಕ ಉದಾಹರಣೆ ಗಳನ್ನು ಕೊಡಬಹುದು. ಮಾನವ ಜನಾಂಗವು ಎಂತಹ ಕಂಟಕಮಯ ವಾದ ದಾರಿಯಲ್ಲಿ ನಡೆಯುತ್ತ ಅದ್ಭುತವಾದ ಜ್ಞಾನಭಾಂಡಾರವನ್ನು ದೊರಕಿಸಿರುವದೆಂಬ ಕಲ್ಪನೆಯೂ ಹೊಳೆಯಬಹುದು.

ತೀರ ಮೊದಲು ಮನುಷ್ಯನಿಗೂ ಇತರ ಪ್ರಾಣಿಗಳಿಗಳೂ ವಿಶೇಷ ಅಂತರವಿರಲಿಲ್ಲ. ಮನುಷ್ಯನಂಥ ಪ್ರಾಣಿಗಳು ಪೃಥ್ವಿಯ ಮೇಲೆ ಹುಟ್ಟಹತ್ತಿಯೇ ೩-೪ ಲಕ್ಷ ವರ್ಷಗಳಾಗಿರಬಹುದು. ಆದರೆ ಸದ್ಯದ ಮನುಷ್ಯನಂಥ ಶರೀರ ಹಾಗೂ ಮೆದುಳುಳ್ಳ ಪ್ರಾಣಿಗಳು ಭೂತಲದ ಮೇಲೆ ಅವತರಿಸಿ ೫೦-೬೦ ಸಾವಿರ ವರುಷಗಳಿಗಿಂತಲೂ ಹೆಚ್ಚಾಗಿಲ್ಲ ವೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಿರುವರು. ೬೦ ಸಾವಿರ ವರ್ಷಗಳ ಪೂರ್ವದಲ್ಲಿ ಪಶುಗಳಿಗೂ ಮನುಷ್ಯನಿಗೂ ಏನೂ ಅಂತರ ವಿರಲಿಲ್ಲ. ಆದರೆ ಪಶುಗಳಲ್ಲಿ ಪ್ರಗತಿಯಾಗದೆ ಇದ್ದಲ್ಲಿಯೇ ಇವೆ. ಮಾನವನು ಮಾತ್ರ ಮುಂದುವರಿದಿದ್ದಾನೆ. ಇದೇ ಭೇದ. ಅನೇಕ ಪ್ರಾಣಿವರ್ಗದಲ್ಲಿ ಅನ್ನವನ್ನು ಸಂಗ್ರಹಿಸುವ ಹಾಗು ಮನೆಕಟ್ಟುವ ಪ್ರವೃತ್ತಿಯು ಕಾಣುತ್ತದೆ. ಇರುವೆಗಳಂಥ ಪ್ರಾಣಿಗಳಂತೂ ಸಮಾಜ ವನ್ನು ಕಟ್ಟಿಕೊಂಡು ವಾಸಿಸುವವಲ್ಲದೆ, ಶ್ರಮವಿಭಾಗವೂ ಕೆಲವೊಂದು ಮಟ್ಟಿಗೆ ಕಾಣುತ್ತದೆ. ಕೆಲವು ಪ್ರಾಣಿಗಳಲ್ಲಿ ಉಚ್ಚಭಾವನೆಯ ಬೆಳವಣಿ ಗೆಯನ್ನು ಕೂಡ ನೋಡಬಹುದು. ಮಂಗಗಳಲ್ಲಿ ಅಲಂಕಾರಪ್ರಿಯ ತೆಯೂ ಕಲ್ಲುಕಟ್ಟಿಗೆಗಳನ್ನು ಆಯುಧಗಳಂತೆ ಉಪಯೋಗಿಸುವ ಬುದ್ಧಿಯೂ ಕಾಣಬಹುದು. ಅದರಂತೆ ಪ್ರತಿಯೊಂದು ಪ್ರಾಣಿಯಲ್ಲಿಯೂ ಮಕ್ಕಳ ಮೇಲಿರುವ ಮಮತೆಯೂ ಕಂಡುಬರುವದು. ಮೊದಮೊದಲು ಮನುಷ್ಯನ ಜೀವನವು ಇದಕ್ಕಿಂತ ಮುಂದುವರಿದಿದ್ದಿಲ್ಲ. ಇಷ್ಟೇ ಅಲ್ಲ

ಮೇಲೆ ವರ್ಣಿಸಿದ ಮನೆಕಟ್ಟುವ, ಅನ್ನವನ್ನು ಸಂಗ್ರಹಿಸುವ ಜ್ಞಾನವು ಕೂಡ ಇರಲಿಲ್ಲ. ಸಿಂಹ, ಹುಲಿಗಳಂತೆ ಹಸಿವೆಯಾದೊಡನೆ ಬೇಟೆಯಾಡಿ ಹಸಿಮಾಂಸವನ್ನೇ ತಿನ್ನುತ್ತ ತಿರುಗುತ್ತಿರುವ ಸ್ಥಿತಿಯೂ ಇದ್ದಿತು.

## ಅಗ್ನಿಸಿದ್ಧಿ ಹಾಗು ಚಿತ್ರಕಲೆ

ಆದರೆ ಅವರಲ್ಲಿ ಪ್ರಗತಿಯ ಬೀಜಗಳಿದ್ದುದು ಸುಳ್ಳಲ್ಲ. ಬಹು ಪುರಾತನ ಕಾಲದಲ್ಲಿಯೇ ಅಂದರೆ ೪೦ ಸಾವಿರ ವರ್ಷ ಪೂರ್ವದಲ್ಲಿಯೇ ಬೆಂಕಿಯನ್ನು ಹೊತ್ತಿಸುವ ವಿದ್ಯೆಯನ್ನು ಕಲಿಯಲು ಪ್ರಾರಂಭಿಸಿದನು. ಮಾನವನ ಶೋಧದಲ್ಲಿ ಇದು ಅತ್ಯಂತ ಮಹತ್ವವಾದ ಮೊದಲನೆಯ ಶೋಧವು. ಇದರಿಂದಲೇ ಉಳಿದ ಪ್ರಾಣಿಗಳಲ್ಲಿಯೂ ಮನುಷ್ಯನಲ್ಲಿಯೂ ಒಮ್ಮೆಲೆ ಅಂತರವು ಬಿದ್ದಿತು. ಇದಲ್ಲದೆ ಬೇಟೆಗಾಗಿ ಕಲ್ಲಿನ ಹಾಗು ಕಟ್ಟಿಗೆಗಳ ಆಯುಧಗಳನ್ನು ಉಪಯೋಗಿಸಲು ಕಲಿತನು.

ನಮ್ಮ ಪ್ರಾಚೀನರು ಈಗಿನಕ್ಕಿಂತಲೂ ಅತ್ಯಂತ ಸಾತ್ವಿಕರೂ, ಋಷಿತುಲ್ಯರು ಇದ್ದರೆಂಬ ನಮ್ಮ ಕುರುಡ ನಂಬುಗೆಯು ಎಷ್ಟು ಜೊಳ್ಳು ಇದೆಯೋ ಅಷ್ಟೇ ಅವರು ರಾಕ್ಷಸರೂ, ಅಂತಃಕರಣಶೂನ್ಯರೂ ಎಂದು ತಿಳಿಯುವದೂ ತಪ್ಪು. ಬಾಹ್ಯಪರಿಸ್ಥಿತಿಯನ್ನಷ್ಟು ಬಿಟ್ಟರೆ ಅಂತ ರಂಗದ ಬುದ್ಧಿ-ಮನೋವೃತ್ತಿಗಳಲ್ಲಿ ಹಿಂದಣ ಹಾಗು ಇಂದಣ ಮಾನವ ರಲ್ಲಿ ಅಂತರವೇನೂ ಕಾಣುವದಿಲ್ಲ. ಈ ನಾಲ್ವತ್ತುಸಾವಿರ ವರ್ಷಗಳಲ್ಲಿ ಮಾನವನ ವಿವೇಚನಶಕ್ತಿಯು ಸ್ವಲ್ಪ ತೀಕ್ಷ್ಣವಾಗಿರಬಹುದು. ಅದೂ ತೀರ ಕಡಿಮೆ ಪ್ರಮಾಣದಿಂದ, ಹೊಸಮಾನಸಶಕ್ತಿಯನ್ನೇನು ಸಂಪಾದಿಸಿ ದಂತೆ ಕಂಡುಬರುವದಿಲ್ಲ. ಯಾಕಂದರೆ ಇಬ್ಬರ ಮೆದುಳುಗಳಲ್ಲಿಯೂ ಯಾವ ಬಗೆಯ ಅಂತರವೂ ಕಾಣುವದಿಲ್ಲೆಂದು ಶಾಸ್ತ್ರಜ್ಞರ ಅಭಿಪ್ರಾಯ.

ಇಂದಿನವರು ಹಿಂದಿನವರಿಗಿಂತ ಸೌಂದರ್ಯಗ್ರಾಹಿಗಳೂ ಬುದ್ಧಿ ವಂತರೂ ಕಾಣಲು, ಇಂದಿನವರ ಬುದ್ಧಿಯು ಅದಕ್ಕೆ ಕಾರಣವಲ್ಲ. ಮಾನ ವನು ಸಾವಿರಾರು ವರ್ಷಗಳಿಂದ ಸಂಗ್ರಹಿಸಿದ ಜ್ಞಾನದ ಸಂಸ್ಕಾರವು ಇಂದಿನವರೆಗೆ ಆನುವಂಶಿಕವಾಗಿ ದೊರೆಯುತ್ತಿರುವದೇ ಮುಖ್ಯ ಕಾರಣ ವೆಂದು ತಜ್ಞರ ಮತ.

ಮಾನವನಲ್ಲಿ ಶೋಧಕಬುದ್ಧಿಯೂ ಸೌಂದರ್ಯದೃಷ್ಟಿಯೂ ಇವೆ. ಶೋಧಕ ಬುದ್ಧಿಯ ಪರಿಣಾಮಗಳೇ ಅಗ್ನಿಶೋಧ ಹಾಗು ಆಯುಧಗಳ ನಿರ್ಮಾಣವೆಂದು ಹಿಂದೆಯೇ ಹೇಳಿದ್ದೇವೆ. ಸೌಂದರ್ಯದ ದೃಷ್ಟಿಯು ಕಲೆಯಲ್ಲಿ ಪರಿಣಮಿಸಿತು; ಚಿತ್ರರೂಪದಿಂದ ಮೊದಲು ಹೊರ ಹಮ್ಮಿತು. ಅತ್ಯಂತ ಪ್ರಾಚೀನ ಕಾಲದ ಅಸ್ತಿಗಳ ಮೇಲೆಯೂ ಕಲ್ಲು ಗಳ ಮೇಲೆಯೂ ಕೊರೆದ ಆನೆ, ಹಾಗು ಜಿಗರೆಗಳ ಚಿತ್ರಗಳು ದೊರೆತಿವೆ. ಭಾಷೆ ಹಾಗು ವಾಙ್ಮಯಗಳ ಉದಯಕ್ಕಿಂತ ಮೊದಲೇ ಚಿತ್ರಕಲೆಯು ಪ್ರಗತಿಯನ್ನು ಹೊಂದಿತ್ತೆಂದು ಹೇಳಿದರೆ ಇಂದು ನಮಗೆ ನಂಬಿಗೆಯಾಗು ವದಿಲ್ಲ. ಆದರೆ ನಿರ್ಮಿಸಿದ ಕಲೆಯಲ್ಲಿ ಚಿತ್ರಕಲೆಯೇ ಅತ್ಯಂತ ಪ್ರಾಚೀನ ವೆಂದು ಭೂಗರ್ಭದಲ್ಲಿ ದೊರೆತ ಅವಶೇಷಗಳಿಂದ ಶಾಸ್ತ್ರಜ್ಞರು ಸಿದ್ಧ ಮಾಡಿದ್ದಾರೆ.

## ಅನ್ನ ಬೇಯಿಸುವ ಕಲೆ

ಮೆಲ್ಲನೆ ಮಾನವನು ಅನ್ನವನ್ನು ಸಂಗ್ರಹಿಸಲು ಹಾಗು ವಾಸಕ್ಕೆ ಗುಹೆಗಳನ್ನು ಆಶ್ರಯಿಸಲು ಕಲಿತನು. ಮನುಷ್ಯನು ಎಂದೂ ಪೂರ್ಣ ವಾಗಿ ಮಾಂಸಾಹಾರಿ ಇರಲಿಕ್ಕಿಲ್ಲ. ಅವನು ಮೊದಲಿನಿಂದಲೂ ಅಲ್ಪಸ್ವಲ್ಪ ಗಡ್ಡೆ-ಗೆಣಸುಗಳನ್ನೂ ತಿನ್ನುತ್ತಿರಬೇಕೆಂದು ವಿದ್ವಾಂಸರ ಮತ ಳಸೆಯ ಹಿಮಯುಗವು ಮುಗಿದು ಹವೆಯಲ್ಲಿಯ ಚಳಿಯು ಕಡಿಮೆಯಾದಂತೆ, ಮಧ್ಯಯುರೋಪದಲ್ಲಿ ಕಾಡು ಹೆಚ್ಚೆಚ್ಚು ಬೆಳೆಯಲಾರಂಭಿಸಿತು. ಅದರಲ್ಲಿ ಆಹಾರ ಪದಾರ್ಥಗಳು ಹೆಚ್ಚೆಚ್ಚು ದೊರೆಯಹತ್ತಿದಂತೆ, ಮಾಂಸಾ- ಹಾರವು ಕಡಿಮೆಯಾಗಿರಬೇಕು. ತಿನ್ನಲು ಪ್ರಾಣಿಗಳನ್ನು ದೊರಕಿಸು ವುದು ಆ ಕಾಲಕ್ಕೆ ಬಹುಕಷ್ಟ. ನಿರಾಧಾರನೂ ಅಶಕ್ತನೂ ಆದ ಮನು ಷ್ಯನು ದೊಡ್ಡ ಪ್ರಾಣಿಗಳ ಬೇಟೆಯಾಡುವಾಗ ಎಷ್ಟೋ ಪ್ರಾಣಸಂಕ ಟಕ್ಕೆ ಸಿಕ್ಕಬೇಕಾಗುತ್ತಿತ್ತು. ಆನೆ ಅಥವಾ ಕುದುರೆಗಳು ಬೇಟೆಗೆ ಸಿಕ್ಕ ರಂತೂ ತೀರಿತು ಅವರಿಗೆ ಒಂದು ದೊಡ್ಡ ಹಬ್ಬವಾಗುತ್ತಿರಲು ಸಾಕು. ಅರಣ್ಯವು ಬೆಳೆದು ಕಂದಮೂಲಗಳು ದೊರೆತಂತೆ ಶಾಕಾಹಾರವು ಬೆಳೆದು ಅವನ್ನು ಸಂಗ್ರಹಿಸುವ ಬುದ್ಧಿಯೂ ಉಂಟಾಗಿರಬೇಕು. ಯಾಕಂದರೆ

ಮಾಂಸವು ತೀವ್ರವೇ ಕೊಳೆತು ಸಂಗ್ರಹಿಸಲು ಅಯೋಗ್ಯವಾಗುವುದು. ಗಡ್ಡೆ ಗೆಣಸುಗಳು ಮಾತ್ರ ಬಹು ದಿವಸ ಬಾಳುವವು.

ತೀರ ಮೊದಮೊದಲು ಸಿಂಹ-ಹುಲಿಗಳಂತೆ ಮನುಷ್ಯನು ಒಂಟಿಗನಾಗಿ ತಿರುಗುತ್ತ ಹಸಿವೆಯಾದೊಡನೆಯೇ ಬೇಟೆಯಾಡಿ ತಿಂದು ನೀರು ಇದ್ದಲ್ಲಿ ನೀರು ಕುಡಿದು ನೆರಳಿದ್ದಲ್ಲಿ ಮಲಗುತ್ತಿರಬೇಕು. ಮುಂದೆ ಅವನು ಅಗ್ನಿಯ ಶೋಧಮಾಡಿದನಂತರ ಈ ಸ್ಥಿತಿಯು ಬದಲಾಗಿರಬೇಕು. ಅಗ್ನಿಯನ್ನು ಆಶ್ರಯಿಸಿ ಅವನು ವಾಸಿಸಹತ್ತಿರಬೇಕು. ಅದನ್ನು ನಿರ್ಮಿಸುವದಂತೂ ಬಹು ಕಠಿಣ. ಎಲ್ಲರಿಗೂ ಅವಶ್ಯಕ. ಹೀಗಾಗಿ ಆಗಿನ ಕಾಲಕ್ಕೆ ಅಗ್ನಿಯು ಒಂದು ಆಕರ್ಷಕ ವಸ್ತುವಾಗಿರಲು ಸಾಕು. ಬೆಂಕಿಯಿದ್ದಲ್ಲಿ ಅದರ ಸುತ್ತುಮುತ್ತಲು ಜನರು ನೆರೆಯಲು ಪ್ರಾರಂಭವಾದ ಕೂಡಲೆ ಆ ಜನರ ನಿಕಟ ಸಂಬಂಧವುಂಟಾಗಿ ಗುಂಪುಗಳಾಗಹತ್ತಿದವು. ಅನೇಕ ಗುಂಪುಗಳು ಕೂಡಿ ಸಮಾಜನಿರ್ಮಾಣವು ಪ್ರಾರಂಭವಾಯಿತು. ಐತಿಹಾಸಿಕ ಕಾಲದಲ್ಲಿ ಇಂತಹ ಅನೇಕ ಸಮಾಜಗಳು ಉದಯಹೊಂದಿ ಒಂದರಮೇಲೊಂದು ಏರಿಹೋದ ಉದಾಹರಣೆಗಳುಂಟು.

ಮನುಷ್ಯನು ಆಯುಧಗಳಲ್ಲಿ ಶೋಧವನ್ನು ನಡೆಯಿಸಿಯೇ ಇದ್ದನು. ಕಲ್ಲಿನ ಆಯುಧಗಳನ್ನಾದರೂ ಕೂಡ ಅತ್ಯಂತ ಹದನ, ಸೂಕ್ಷ್ಮವಾಗಿ ಮಾಡಲು ಕಲಿತಿದ್ದನು. ಸಾವಿರಾರು ವರ್ಷಗಳ ನಂತರ ಅವನು ಬಿಲ್ಲಿನ ಶೋಧವನ್ನು ಮಾಡಿದನು. ಮಾನವನು ಶೋಧಿಸಿದ ಮೊದಲನೆಯ ಅಸ್ತ್ರವೇ ಇದು. ದೂರದಿಂದಲೇ ಪ್ರಾಣಿಗಳನ್ನು ಸಂಹರಿಸುವ ಉಪಾಯವು ದೊರೆತುದದರಿಂದ ಬೇಟೆಯ ಕಾಲದ ಪ್ರಾಣಭಯವು ಕಡಿಮೆಯಾಯಿತು. ಕಲ್ಲಿನಿಂದಲೂ, ಎಲುವುಗಳಿಂದಲೂ ತೀಕ್ಷ್ಣವಾದ ಬಾಣಗಳನ್ನು ಮಾಡುತ್ತಿದ್ದರು.

ಮುಂದೆ ಮಾನವನು ಅನ್ನವನ್ನು ಬೇಯಿಸುವ ಮಹತ್ವವಾದ ಶೋಧವನ್ನು ಮಾಡಿದನು. ಈ ಶೋಧವು ಎಂದು ಹೇಗೆ ಆಯಿತೆಂಬುದು ಶಾಸ್ತ್ರಜ್ಞರಿಗೂ ಒಗಟವೇ ಆಗಿದೆ. ಆದರೆ ೧೫-೨೦ ಸಾವಿರ ವರ್ಷಗಳ ಪೂರ್ವದಲ್ಲಿಯೇ ಇದರ ಶೋಧವಾಗಿರಬೇಕು. ಮೊದಲು ಅವರು ಮಾಂಸವನ್ನು ಸುಡಲು ಕಲಿತಿರಬೇಕು. ನಂತರ ಬೇಯಿಸುವುದು

ಗೊತ್ತಾಗಿರಬೇಕು. ಯಾಕಂದರೆ ಬೇಯಿಸಲು ಬೇಕಾಗುವ ಪಾತ್ರೆಗಳ ಶೋಧವೇ ಇನ್ನೂ ಆಗಿದ್ದಿಲ್ಲ. ಸುಟ್ಟು ತಿನ್ನಬೇಕೆಂಬ ಕಲ್ಪನೆಯಾದರೂ ಹೇಗೆ ಹೊಳೆಯಿತೆಂಬುದಕ್ಕೆ ಅನೇಕರು ಅನೇಕ ಬಗೆಯ ತರ್ಕಗಳನ್ನು ಮಾಡುತ್ತಾರೆ. ಸ್ವಾಭಾವಿಕವಾದ ಕಾಡ್ಗಿಚ್ಚಿನಲ್ಲಿ ಹುರುಪಳಿಸಿದ ಪ್ರಾಣಿಗಳ ಮಾಂಸವು ರುಚಿಹತ್ತಿ ಸುಡುವ ಬುದ್ಧಿಯು ಹುಟ್ಟಿರಬೇಕೆಂದು ಕೆಲವರ ತರ್ಕ. ಹೀಗೆ ಕಿಚ್ಚಿನಲ್ಲಿ ಬಿದ್ದು ಬೆಂದ ಪ್ರಾಣಿಗಳ ಮಾಂಸವು ರುಚಿಹತ್ತಿ ಸರ್ವ ಪ್ರಾಣಿಗಳನ್ನೂ ಸುಟ್ಟು ತಿನ್ನುವ ಪರಿಪಾಠವು ಬಿದ್ದಿರಬೇಕೆಂದು ಕೆಲವರು ಊಹಿಸುತ್ತಾರೆ. ಏನೇ ಇರಲಿ ಮನುಷ್ಯನ ಈ ಶೋಧವು ಅತ್ಯಂತ ಮಹತ್ವವಾದುದು.

**ಕುಟುಂಬವ್ಯವಸ್ಥೆ ಹಾಗೂ ಒಕ್ಕಲತನ**

ಇಪ್ಪತ್ತು ಸಾವಿರ ವರ್ಷಗಳ ಪೂರ್ವದಲ್ಲಿಯೇ ಮನುಷ್ಯನು ಪಶುಗಳನ್ನು ಸಾಕಲು ಕಲಿತನು. ಪಶುಗಳೇ ಜೀವನಾಧಾರವಾದುದರಿಂದ ಅವುಗಳನ್ನು ಯಾವಾಗಲೂ ಕಾಯ್ದುವ ಪ್ರಸಂಗವು ಒದಗಲು ಸಾಕು. ಅವುಗಳಿಗೆ ಹುಲ್ಲು ಕಡಿಮೆಯಾದೊಡನೆ, ಹುಲ್ಲಿದ್ದಲ್ಲಿ ಅವುಗಳನ್ನು ತಿರಿವಿಕೊಂಡು ಹೋಗುವ, ಮತ್ತು ಅವು ಓಡಿಹೋಗದಂತೆ ನೋಡಕೊಳ್ಳುವ ಪ್ರಸಂಗವು ಬಂದು ಮನುಷ್ಯನು ಅವುಗಳ ಮೇಲೆ ತನ್ನ ಸ್ವಾಮಿತ್ವವನ್ನು ಕೂಡಿಸಿದಂತೆ ತೋರುತ್ತದೆ. ೩೦ ಸಾವಿರ ವರ್ಷಗಳ ಪೂರ್ವದಲ್ಲಿಯೇ ಕುದುರೆಯು ಮನುಷ್ಯನಿಗೆ ಈಲಾಗಿತ್ತೆಂದು ವಿದ್ವಾಂಸರ ತರ್ಕ. ನಿವೋಲಿಥಿಕ್ (ನೂತನಪಾಷಾಣಯುಗ) ದಲ್ಲಿ ಯುರೋಪದೊಳಗೆ ಮಾನವ ಸಮಾಜವು ಹಬ್ಬುವ ಪೂರ್ವದಲ್ಲಿಯೇ ಬೇಟೆಗೆ ಯೋಗ್ಯವಾದ ನಾಯಿಯು ಈಲಾಗಿತ್ತೆಂದು ಹೇಳುತ್ತಾರೆ. ಆಮೇಲೆ ಎಷ್ಟೋ ಸಾವಿರ ವರ್ಷಗಳ ನಂತರ ಎತ್ತು ಆಕಳುಗಳು ಸಾಕಲ್ಪಟ್ಟವು. ಹೀಗೆ ಬಹು ದಿನಗಳಹಿಂದೆ ಅಂದರೆ ೨೦ ಸಾವಿರ ವರ್ಷಗಳಿಂದ ೧೨ ಸಾವಿರ ವರ್ಷಗಳ ವರೆಗೆ ಮನುಷ್ಯನು ಪಶುಪಾಲಕವೃತ್ತಿಯಲ್ಲಿದ್ದನು. ಈ ಕಾಲದಲ್ಲಿ ಇವುಗಳ ಉಪಯೋಗವು ಆಹಾರಕ್ಕಾಗಿ ಮಾತ್ರ. ಮುಂದೆ ಎಷ್ಟೋ ಸಾವಿರ ವರ್ಷಗಳ ನಂತರ ಇವುಗಳ ಉಪಯೋಗವು ಒಕ್ಕಲತನಕ್ಕೂ ಹೈನಕ್ಕೂ ಇದೆ ಎಂಬುದು ಗೊತ್ತಾಯಿತು.

ಮುಂದೆ ಮನುಷ್ಯನು ಕಲ್ಲು, ಕಟ್ಟಿಗೆ, ಮಣ್ಣುಗಳಿಂದ ಪಾತ್ರೆಗಳನ್ನು ಮಾಡಲು ಕಲಿತನು. ಇವೆಲ್ಲವೂ ಕೈಯಿಂದಲೇ ಮಾಡಲ್ಪಡುತ್ತಿದ್ದವು. ಮೊದಮೊದಲು ಮಣ್ಣಿನ ಪಾತ್ರೆಗಳನ್ನು ಒಣಗಿಸಿ ಉಪಯೋಗಿಸುತ್ತಿದ್ದರು.

ಈ ಸಮಯಕ್ಕೆ ಬಹುಮಟ್ಟಿಗೆ ಸಂಘಟಿತವಾದ ಕುಟುಂಬ ವ್ಯವಸ್ಥೆಯು ಉಂಟಾಗಿತ್ತು. ಆರ್ಥಿಕ ಹಾಗು ಸಾಮಾಜಿಕ ದೃಷ್ಟಿಯಿಂದ ಇದು ಬಹು ಮಹತ್ವದ ಮೆಟ್ಟಲು. ಕುಟುಂಬಸಂಸ್ಥೆಯು ಉದಯವಾದೊಡನೆಯೇ ಮಾನವನ ಜೀವನದಲ್ಲಿ ಕ್ರಾಂತಿಯುಂಟಾಗಿ ಕಾಡುತನವು ಕಡಿಮೆಯಾಗಿ ಸುಧಾರಣೆಯು ತಲೆದೋರಿತು. ಕುಟುಂಬ ವ್ಯವಸ್ಥೆಯು ಮುಖ್ಯವಾಗಿ ರಾಜಕೀಯ ಹಾಗು ಆರ್ಥಿಕ ತತ್ವಗಳಿಂದ ಒಡಗೂಡಿದ ಸಂಘಟನೆಯು. ಬಹುತರ ಪುರುಷಪ್ರಧಾನವಾದ ಕುಟುಂಬ ವ್ಯವಸ್ಥೆಯು ರೂಢವಾಯಿತು. ಸ್ತ್ರೀಯರ ಮೇಲೆ ಪುರುಷರ ಸ್ವಾಮಿತ್ವವು ಉಂಟಾಯಿತು. ಶಿಥಿಲವಾದ ಪತಿ-ಪತ್ನಿ ಸಂಬಂಧವು ತಲೆದೋರಿತು. ಕುಟುಂಬವನ್ನು ರಕ್ಷಿಸುವ ಕಾರ್ಯವು ಪುರುಷರ ಪಾಲಿಗೆ ಬಂದಿತು. ಸಂತಾನನಿರ್ಮಾಣ-ಸಂರಕ್ಷಣೆಗಳು ನಿಸರ್ಗದಿಂದಲೇ ಸ್ತ್ರೀಯರಿಗಿದ್ದವು. ಇದಲ್ಲದೆ ಮನೆಗೆಲಸವೆಲ್ಲವೂ ಅವರ ಪಾಲಿಗೆ ಬಂದಿತು.

ಮಾನವನ ಜೀವನದಲ್ಲಿ ಕುಟುಂಬನಿರ್ಮಾಣದ ಕಾಲವು ಅತ್ಯಂತ ಕ್ರಾಂತಿಕಾಲವೆಂದು ಹೇಳಬಹುದು. ಸ್ತ್ರೀಪುರುಷರ ಕರ್ತವ್ಯಗಳು ನಿರ್ಣಯಿಸಲ್ಪಟ್ಟ ನಂತರ, ಅನೇಕ ಕಲೆ ಹಾಗು ವಿದ್ಯೆಗಳಲ್ಲಿ ಮಾನವನ ಪ್ರಗತಿಯು ಶೀಘ್ರಗತಿಯನ್ನು ತಾಳಿತು. ನೆಯ್ಯುವ ಕಲೆಯು ಒಂದು ವೇಳೆ ಮೊದಲೇ ಶೋಧವಾಗಿದ್ದರೂ ಕುಟುಂಬವ್ಯವಸ್ಥೆಯು ರೂಢಿಯಲ್ಲಿ ಬಂದು ಅದು ಹೆಣ್ಣುಮಕ್ಕಳ ಕೈಸೇರಿದ ನಂತರ ವಿಶೇಷ ಪ್ರಗತಿಯನ್ನು ಹೊಂದಿತು. ಚಾಪಿ, ಬುಟ್ಟಿ ಮೊದಲಾದವುಗಳನ್ನು ಹೆಣೆಯುತ್ತ ನೇಗೆಯ ಕಲೆಯು ಹೊಳೆಯಿತು. ಮೊದಮೊದಲು ಗಿಡಗಳ ನಾರುಗಳಿಂದ ವಸ್ತ್ರ ನೆಯ್ಯುವದು ಪ್ರಾರಂಭವಾಯಿತು. ಹತ್ತಿಯಿಂದ ನೂಲು ತೆಗೆದು ನೆಯ್ಯುವ ಕಲೆಯು ಮಾತ್ರ ತೀರ ಇತ್ತೀಚಿನದಾದರೂ ಅದು ಭಾರತದಲ್ಲಿಯೇ ಹುಟ್ಟಿ, ಬೆಳೆದಿರಬೇಕೆಂಬುದು ಮೇಲೆಯೇ ಕಾಣುತ್ತದೆ.

ಆಹಾರ ಸಂಗ್ರಹದ ಕಾರ್ಯವೂ ಸ್ತ್ರೀಯರ ಕಡೆಗೆ ಇದ್ದುದರಿಂದ ಅವರು ಒಂದು ಮಹತ್ವವಾದ ವಿದ್ಯೆಯ ಶೋಧವನ್ನು ಮಾಡಿದರು. ಅದೇ ಕೃಷಿಯು. ತನ್ನಷ್ಟಕ್ಕೆ ತಾನೇ ಬೆಳೆದ ಧಾನ್ಯಗಳನ್ನು ಸಂಗ್ರಹಿಸುವ ಕಾರ್ಯವನ್ನು ಮನುಷ್ಯನು ಮೊದಲೇ ಮಾಡುತ್ತಿದ್ದನು. ಅಂದರೆ ಕೊಯ್ಯುವ ಕಲೆಯನ್ನು ಅವನು ಮೊದಲೇ ಕಲಿತಿದ್ದನು. ಆದರೆ ಮುಂದೆ ಅನಾಯಾಸವಾಗಿ ದೊರೆಯುವ ಧಾನ್ಯದ ಕೊರತೆಯಾದೊಡನೆ ಅದನ್ನು ದೊರಕಿಸಲು ಕಠಿಣವಾಗಿರಬೇಕು. ಇಂತಹ ಪ್ರಸಂಗದಲ್ಲಿಯೇ ತನಗೇ ಧಾನ್ಯಗಳನ್ನು ಬೆಳೆಯಲು ಬರುವುದೋ ಇಲ್ಲವೋ ಎಂಬುದರ ಕಡೆಗೆ ಬುದ್ಧಿಯು ಓಡುವುದು ಸ್ವಾಭಾವಿಕ. ಧಾನ್ಯ ಹಾಗೂ ಹಣ್ಣಿನ ಬೀಜ ಗಳು ನೆಲದಲ್ಲಿ ಬಿದ್ದು ಮಳೆಯಾದೊಡನೆ ತನ್ನಷ್ಟಕ್ಕೆ ತಾನು ಹುಟ್ಟುವ ದನ್ನು ಕಂಡು ನಾವೇ ಬೀಜಗಳನ್ನು ಹಾಕಿ ಏಕೆ ಬೆಳಿಸಬಾರದೆಂಬ ಕಲ್ಪನೆಯು ಅನ್ನದ ಒಡತಿಯಾದ ಹೆಣ್ಣುಮಗಳಿಗೆ ಹೊಳೆಯಿತು. ಇದೇ ಒಕ್ಕಲತನದಲ್ಲಿ ಪರಿಣಮಿಸಿತು. ಕನಿಷ್ಠ ಹನ್ನೆರಡು ಸಾವಿರ ವರ್ಷಗಳ ಮೊದಲು ಯುರೋಪದಲ್ಲಿ ಒಕ್ಕಲತನವು ಪ್ರಾರಂಭವಾಗಿರಬೇಕೆಂದು ವಿದ್ವಾಂಸರ ಮತ. ಆಗ ಯುರೋಪಕ್ಕೆ ಈ ಸಮಾಜವು ಎಲ್ಲಿಂದ ಬಂದಿತೋ ಆ ದೇಶದಲ್ಲಿ ಅದಕ್ಕಿಂತ ೨-೩ ಸಾವಿರ ವರ್ಷ ಮೊದಲು ಒಕ್ಕಲತನವು ಪ್ರಾರಂಭವಾಗಿರಬೇಕೆಂದೆನಬಹುದು.

ಈ ಕೃಷಿಯು ಪ್ರಾರಂಭದಲ್ಲಿ ತೀರ ಬಾಲ್ಯಾವಸ್ಥೆಯಲ್ಲಿತ್ತೆಂದು ಹೇಳಲಿಕ್ಕೇ ಬೇಡ. ನೇಗಿಲ, ರೆಂಟೆ ಮೊದಲಾದವು ಮುಂದೆ ಬಂದವು. ಮೆಲ್ಲಮೆಲ್ಲನೆ ದನಕರಗಳನ್ನು ಉಪಯೋಗಿಸಲು ಹಾಗು ಅವುಗಳ ಹೈನ ವನ್ನು ಉಣ್ಣಲು ಮನುಷ್ಯನು ಕಲಿತನು.

## ವರ್ಣವ್ಯವಸ್ಥೆ

ಪಾಶ್ಚಾತ್ಯ ದೇಶಗಳಲ್ಲಿ ಗೋದಿ, ಜವೆಗೋದಿಗಳೂ, ಪೌರ್ವಾತ್ಯ ದೇಶದಲ್ಲಿ ಭತ್ತ, ಗೋದಿ, ಜವೆಗೋದಿಗಳೂ ಹನ್ನೆರಡು ಸಾವಿರ ವರ್ಷ ಗಳಿಂದಲೂ ಬೆಳೆಯುತ್ತವೆ. ಭಾರತದಲ್ಲಿ ಈ ಮೂರೂ ಧಾನ್ಯಗಳೂ ಬೆಳೆಯುತ್ತವೆ.

ಒಕ್ಕಲತನವು ಸುರುವಾದಂದಿನಿಂದ ಮನುಷ್ಯನು ಸಾಧಾರಣವಾಗಿ ಸುಧಾರಿಸಿದನೆಂದು ಹೇಳಬಹುದು. ಕೃಷಿಪ್ರಧಾನವಾದ ದೇಶಗಳಲ್ಲಿ ಈಗ ಇರುವ ಸಮಾಜರಚನೆಯೇ ೮-೧೦ ಸಾವಿರ ವರ್ಷಗಳ ಪೂರ್ವದಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಇದ್ದಿತೆಂದು ಹೇಳಬಹುದು. ೧೦ ಸಾವಿರ ವರ್ಷಗಳಿಂದ ನಡೆದು ಬಂದ ಈ ಸಮಾಜರಚನೆಯು ೧೮ನೆಯ ಶತಮಾನದ ಔದ್ಯೋಗಿಕ ಕ್ರಾಂತಿಯ ವರೆಗೆ ಹಾಗೆಯೇ ಸಾಗಿತು. ಭಾರತದಂಥ ಕೃಷಿಕ ರಾಷ್ಟ್ರದಲ್ಲಿ ಇನ್ನೂ ಹಾಗೆಯೇ ಇದೆ. ಕೃಷಿಯು ಪ್ರಾರಂಭವಾದೊಡನೆ ಮನುಷ್ಯನು ಭೂಮಿಗೆ ಅಂಟಿಕೊಂಡನು. ಭೂಮಿಯೇ ಶ್ರೇಷ್ಠಸಂಪತ್ತಾಗಿ ಪರಿಣಮಿಸಿತು. ನೀರಿಗೆ ಅನುಕೂಲತೆಯಿದ್ದು ಒಕ್ಕಲತನಕ್ಕೆ ಯೋಗ್ಯವಾದ ಭೂಮಿಯಿದ್ದಲ್ಲೆಲ್ಲ ಜನರು ತಳ ಊರಹತ್ತಿದರು. ಹೀಗೆ ಅನೇಕ ಗುಂಪುಗಳು ನೆಲಸಿ ಊರುಗಳಾದವು. ಒಕ್ಕಲತನವು ಬೆಳೆದು ಧಾನ್ಯಸಂಗ್ರಹವಾಗಹತ್ತಿತು. ಕುಟುಂಬಕ್ಕೆ ಸಾಕಾಗಿ ಉಳಿದ ಧಾನ್ಯವನ್ನು ಕೊಟ್ಟು ತಮಗೆ ಬೇಕಾದುದನ್ನು ತೆಗೆದುಕೊಳ್ಳುವ ರೂಢಿಯಾಗಿ ವ್ಯಾಪಾರವು ತಲೆಯೆತ್ತಿತು. ಕಲೆಗೆ ಪ್ರಾರಂಭವಾಯಿತು. ಧರ್ಮಗುರುಗಳ, ಶಕುನ ಹೇಳುವವರ ವರ್ಗಗಳು ಉದಯವಾದವು. ಹೀಗೆ ಶ್ರಮವಿಭಾಗ ತತ್ವವು ಕುಟುಂಬಕ್ಕಷ್ಟೇ ಉಳಿಯದೇ ಸಮಾಜದ ಮೇಲೆಯೂ ತನ್ನ ಪ್ರಭಾವವನ್ನು ಬೀರಿದ್ದರಿಂದ ನವಸಮಾಜರಚನೆಗೆ ಪ್ರಾರಂಭವಾಯಿತು.

ಗುಣಕರ್ಮಗಳಿಗನುಸರಿಸಿ, ಒಕ್ಕಲಿಗರು, ಪುರೋಹಿತರು, ಕಸಬುಗಾರರು ಎಂಬ ಮೂರು ವರ್ಗಗಳು ಉಂಟಾದವು. ನಮ್ಮ ಚಾತುರ್ವರ್ಣ್ಯ ವ್ಯವಸ್ಥೆಯೂ ಇದರಿಂದ ತೀರ ಭಿನ್ನವಿಲ್ಲ. ಮಾನವನು ಗುಂಪುಗಟ್ಟಿಕೊಂಡು ತಿರುಗುವಾಗ ಎರಡನೆಯ ಗುಂಪಿನೊಡನೆ ಹೋರಾಡುವ ಪ್ರಸಂಗವು ಮೇಲಿಂದ ಮೇಲೆ ಬರಹತ್ತಿತು. ಇಡಿ ಗುಂಪೇ ಹೋರಾಡಬೇಕಾಗುತ್ತಿದ್ದಿತು. ಆದರೆ ಕೃಷಿಯು ಪ್ರಾರಂಭವಾದ ನಂತರ ಒಕ್ಕಲಿಗರು ಯುದ್ಧದಂತಹ ಕಾರ್ಯದಲ್ಲಿ ಸೇರಲು ಹಿಂಜರಿಯಹತ್ತಿದರು. ಆಗ ಯುದ್ಧಪ್ರಿಯವಾದ ಜನರು ಮುಂದೆ ಬಂದು ಈ ಸಂಕಟದ ಹೊಣೆಯನ್ನು ಹೊತ್ತರು. ಈ ಹೊಣೆಯೊಡನೆಯೇ ವಿಶೇಷ ಮರ್ಯಾದೆಯೂ ಅಧಿ

ಕಾರವೂ ಇವರ ಪಾಲಿಗೆ ಬರುವುದು ಸ್ವಾಭಾವಿಕವಾಯಿತು. ಹೀಗೆ ಪ್ರತಿಯೊಂದು ರಾಷ್ಟ್ರದಲ್ಲಿ ರಾಜಕೀಯ ಅಧಿಕಾರವು ತಲೆಯೆತ್ತಿತು. ಭಾರತದಲ್ಲಿ ಮಾತ್ರ ಈ ವರ್ಗಗಳು ನಿಯಮಬದ್ಧವಾಗಿ ರೂಢವಾದವು. ಇದೇ ನಮ್ಮ ವೈಶಿಷ್ಟ್ಯವು.

## ಸಿಂಹಾವಲೋಕನ

ಮಾನವನ ಬೆಳವಣಿಗೆಯನ್ನು ನೋಡುತ್ತ ನಾವು ಐತಿಹಾಸಿಕ ಕಾಲದ ವರೆಗೆ ಬಂದಿದ್ದೇವೆ. ಮಾನವನ ಪ್ರಗತಿಯ ಸಿಂಹಾವಲೋಕನ ವನ್ನು ಮಾಡಿ ಮುಂದೆ ಸಾಗೋಣ. ಮಾನವನು ಇಲ್ಲಿಯ ವರೆಗೆ ಏನೇನು ಕಲಿತಿದ್ದಾನೆ, ಇನ್ನೂ ಏನೇನು ಕಲಿಯುವುದುಳಿದಿದೆ ಎಂಬುದು ನಮ್ಮ ಲಕ್ಷ್ಯಕ್ಕೆ ಬಂದರೆ ನಮಗೆ ಒಳ್ಳೇ ಮನರಂಜನೆಯಾಗ ಬಹುದು.

ಐತಿಹಾಸಿಕಕಾಲದ ಮೊದಲು ಸುಸಂಘಟಿತವಾದ ಸಮಾಜ ವ್ಯವ ಸ್ಥೆಯೂ, ಪುರುಷಪ್ರಧಾನವಾದ ಕುಟುಂಬವ್ಯವಸ್ಥೆಯೂ ರೂಢಿಯಲ್ಲಿ ಬಂದಿದ್ದುವಲ್ಲದೆ ಊರುಗಳೂ ಗ್ರಾಮಗಳೂ ನಿರ್ಮಾಣವಾಗಿದ್ದವು. ನದಿಗಳ ದಂಡೆಗುಂಟ ಒಕ್ಕಲತನವು ಒಳ್ಳೇ ಸ್ಥಿತಿಯಲ್ಲಿ ಸಾಗಿತ್ತು. ದನ ಕರಗಳನ್ನೂ, ಕುದುರೆ ನಾಯಿಗಳನ್ನೂ ಸಾಕುತ್ತಿದ್ದರು. ಕಲ್ಲು ಇಟ್ಟಂಗಿ ಮಣ್ಣುಗಳಿಂದ ಮನೆಗಳನ್ನು ಕಟ್ಟುತ್ತಿದ್ದರು. ಕಟ್ಟಿಗೆಯು ಸಾರ್ವತ್ರಿಕ ವಾಗಿ ಉಪಯೋಗದಲ್ಲಿದ್ದಿತು. ಕಮ್ಮಾರ ಕೆಲಸವು ಮಾತ್ರ ಅಷ್ಟು ಮುಂದುವರಿದಂತೆ ತೋರುವುದಿಲ್ಲ. ಬಿಲ್ಲು ಬಾಣಗಳು ಉಪಯೋಗದಲ್ಲಿ ದ್ದವು. ಬಾಣಗಳು ಎಲುವುಗಳಿಂದಲೂ ಕಲ್ಲುಗಳಿಂದಲೂ ಮಾಡಲ್ಪಡು ತ್ತಿದ್ದವು. ಧಾತುಗಳಲ್ಲಿ ಬಂಗಾರ ಬಹಳವಾದರೆ ಬೆಳ್ಳಿಯ ಪರಿಚಯ ವಾಗಿತ್ತು. ಎಷ್ಟೋ ವರ್ಷಗಳ ವರೆಗೆ ಮನುಷ್ಯನು ತಾಮ್ರದಿಂದಲೇ ತನ್ನ ಆಯುಧಗಳನ್ನು ಮಾಡಿಕೊಳ್ಳುತ್ತಿದ್ದನು. ತಾಮ್ರವೂ ಕೂಡ ತೀರ ಐತಿಹಾಸಿಕ ಕಾಲದ ಸಮೀಪಕ್ಕೆ ಗೊತ್ತಾಗಿರಬೇಕು. ಮುಂದೆ ತವರಿನ ಶೋಧವಾಗಿ ಕಂಚುಮಾಡುವ ಕಲೆಯು ತಿಳಿದು ಆಯುಧಕ್ಕೆ ಹೆಚ್ಚು ಉಪಯೋಗ ಬಿದ್ದಿತು. ಮಣ್ಣಿನ ಪಾತ್ರೆಗಳೂ ನಾರುಬಟ್ಟೆಗಳೂ

ಇದ್ದುವು. ಅಡ್ಡತಿಡ್ಡ ನಾವುಗಳನ್ನು ಮಾಡಿಕೊಂಡು ಸಮುದ್ರದಲ್ಲಿ ಸಂಚರಿಸುತ್ತಿದ್ದರು.

ರಾಜಕೀಯ ದೃಷ್ಟಿಯಿಂದ ಸಮಾಜವು ಸಂಘಟಿತವಾಗಿ ಬೇರೆ ಬೇರೆ ರಾಜ್ಯಗಳು ನಿರ್ಮಾಣವಾಗಿದ್ದಿಲ್ಲ. ಸಮಾಜದ ಕಟ್ಟುಗಳು ಶಿಥಿಲ ವಾಗಿಯೇ ಇದ್ದುವು. ಆದರೆ ರೂಢಿಗಳಿಗೆ ಒಂದು ಬಗೆಯ ಬಿಗಿಯಾದ ಕಟ್ಟು ಇದ್ದುದರಿಂದ ಸಮಾಜವು ಸುರಕ್ಷಿತವಾಗಿ ಸಾಗಿತ್ತು. ಧರ್ಮಶಾಸ್ತ್ರ ಅಥವಾ ಕಾಯಿದೆಗಳು ಇನ್ನೂ ಇರಲಿಲ್ಲ. ಆದರೆ ಅವುಗಳ ತಳಹದಿಯನ್ನು ಭದ್ರವಾಗಿ ಕಟ್ಟುವ ಕಾರ್ಯವು ನಡೆದಿತ್ತು. ಅನೇಕ ಧಾರ್ಮಿಕ ಮೂಢ ಕಲ್ಪನೆಗಳೂ ಮನೆಮಾಡಿದ್ದವು. ಆದರೆ ಇಲ್ಲಿ ನಾವು ಕೇವಲ ಜ್ಞಾನದ ಪ್ರಗತಿಯನ್ನು ವಿಚಾರಮಾಡುವುದಿರುವುದರಿಂದ ಆ ಭಾಗವನ್ನು ಬಿಟ್ಟು ಮುಂದೆ ಸಾಗಬೇಕಾಗಿದೆ.

ಚಿತ್ರಕಲೆಯು ಮೊದಲಿನಿಂದಲೂ ಬೆಳೆಯಹತ್ತಿದೆ ಎಂದು ಹಿಂದೆಯೇ ಹೇಳಿದೆ. ಚಿತ್ರಕಲೆಯು ಇಬ್ಬಗೆಯಾಗಿ ಬೆಳೆಯುತ್ತ ಬಂದಿದೆ. ಮನುಷ್ಯನು ತನ್ನ ಎದುರಿಗೆ ಇರುವ ವಸ್ತುಗಳ ಚಿತ್ರಗಳನ್ನು ತೆಗೆಯಲು ಪ್ರಯತ್ನ ಪಡಹತ್ತಿದನು. ಇದಕ್ಕೆ ವಸ್ತುನಿದರ್ಶಕ (Representative) ಚಿತ್ರ ಕಲೆಯೆಂದು ಹೇಳಬಹುದು. ಎರಡನೆ ಪ್ರಕಾರವೆಂದರೆ, ಮಣ್ಣಿನ ಪಾತ್ರೆ ಗಳ ಮೇಲೆ ಅಥವಾ ಇತರ ವಸ್ತುಗಳ ಮೇಲೆ, ಅಂದಕ್ಕಾಗಿ ಸುಳುವು ಗಳನ್ನು ತೆಗೆಯುವದು (Decorative). ನೈಸರ್ಗಿಕ ಬಣ್ಣಗಳ ಜ್ಞಾನವಂತೂ ಚನ್ನಾಗಿಯೇ ಇದ್ದಿತು. ಗಾಯನ ವಾದನ ಕಲೆಗಳನ್ನೂ ಅವರು ಅರಿತಿರಬೇಕು. ಯಾಕಂದರೆ ಅವರು ಬಿಲ್ಲನ್ನು ಪ್ರಚಾರದಲ್ಲಿ ತಂದಾಗ ಅದರ ಟಂಕಾರವು ತಂತುವಾದ್ಯವನ್ನು ಸೂಚಿಸುವದು ಸಹಜ. ಹಾಡುವದು ಕುಣಿಯುವದು ಮನುಷ್ಯನ ನೈಸರ್ಗಿಕ ಗುಣಗಳು. ಮನುಷ್ಯನು ಆನಂದದಲ್ಲಿ ಆಲಾಪವನ್ನು ತೆಗೆಯುವದು ಸಹಜವಾದುದ ರಿಂದ ಗಾಯನವು ಅದರಿಂದಲೇ ಪ್ರಾರಂಭವಾಗಿರಬೇಕು. ಆದರೆ ಇವೆ ಲ್ಲವೂ ಪ್ರಾಥಮಿಕಾವಸ್ಥೆಯಲ್ಲಿದ್ದವೆಂದು ಹೇಳಲಿಕ್ಕೆಬೇಡ. ಕೆಲವು ಸಮಾಜಗಳಲ್ಲಿ ಭಾಷೆಯು ಆದೇ ತಲೆಯೆತ್ತಿರಬೇಕು. ಆದರೆ ಲಿಪಿ ಯಂತೂ ಗೊತ್ತೇಯಿರಲಿಲ್ಲ. ಇಜಿಪ್ತ ಮೊದಲಾದ ದೇಶಗಳಲ್ಲಿಯ

ಚಿತ್ರಲಿಪಿಯ ಬೀಜಗಳು ಮಾತ್ರ ಆ ಕಾಲಕ್ಕೆ ಕಾಣುತ್ತಿರಬೇಕು ೮-೧೦ ಸಾವಿರ ವರ್ಷಗಳಲ್ಲಿ ಮಾನವನ ಬೆಳವಣಿಗೆಯು ಹೇಗೆ ಆಯಿತು ಎಂಬುದು ಮೇಲಿನ ವರ್ಣನೆಯಿಂದ ಹೊಳೆಯುಬಹುದು.

ಜಗತ್ತಿನಲ್ಲಿರುವ ಎಲ್ಲ ಮಾನವರಲ್ಲಿಯೂ ಒಂದೇ ಬಗೆಯಾದ ಪ್ರಗತಿ ಯಾಗಿತ್ತೆಂದು ತಿಳಿಯುಕೂಡದು. ಈಗ ಸದ್ಯಕ್ಕೆ ಹೇಗೆ ಸುಧಾರಣೆಯು ಒಂದೇ ಮಟ್ಟಕ್ಕೆ ಎಲ್ಲ ರಾಷ್ಟ್ರಗಳಲ್ಲಿಯೂ ಇಲ್ಲವೋ ಹಾಗೆ ಆಗಿನ ಕಾಲಕ್ಕೂ ಕೂಡ ಇದ್ದಿಲ್ಲ. ಅಲ್ಲಿಂದ ಮುಂದೆ ಮತ್ತೆ ೮-೧೦ ಸಾವಿರ ವರ್ಷಗಳು ಗತಿಸಿದರೂ ಕೂಡ ಆಸ್ಟ್ರೇಲಿಯಾ, ಟಾಮೋನಿಯಾಗಳಲ್ಲಿಯ ಜನರು ಮೊದಲಿನಗಿಂತಲೂ ಕಾಡುಸ್ಥಿತಿಯಲ್ಲಿ ಈಗ ಇರುವರು. ಅಂದರೆ ಇಂದು ಸುಧಾರಿಸಿದ ರಾಷ್ಟ್ರಗಳಿಗಿಂತಲೂ ೧೫ ಸಾವಿರ ವರ್ಷ ಹಿಂದೆ ಇರುವರು.

ಪ್ರಾಚೀನಕಾಲದ ಮಾನವನ ಇರುವಿಕೆ, ರೀತಿ, ನೀತಿ, ಸಂಸ್ಕೃತಿ ಗಳ ಅಭ್ಯಾಸದಿಂದ ಪಾಶ್ಚಾತ್ಯರು ಒಂದು ಶಾಸ್ತ್ರವನ್ನೇ ನಿರ್ಮಿಸಿದ್ದಾರೆ. ಅದಕ್ಕೆ ಆ್ಯಂಥ್ರೊಪಾಲಜಿ (ಮನುಷ್ಯವಿಜ್ಞಾನ) ಯುನ್ನುವರು. ಶಾಸ್ತ್ರೀಯ ವರ್ಗೀಕರಣವನ್ನು ಮಾಡಿ ಇಲ್ಲಿ ಅದರ ಅನುವಾದವನ್ನು ಮಾಡ ಲಾಗಿದೆ. ೧೦ನೆಯ ಪ್ರಕರಣದಲ್ಲಿ ಅದರ ವಿವರಣೆಯುನ್ನು ಕಾಣಬಹುದು.

# ಮೂರನೆಯ ಮೆಟ್ಟಿಲು



## ಜ್ಞಾನಮಾರ್ಗದಲ್ಲಿ ಮಾನವನ ಮುನ್ನಡೆ

**ಪುರಾಣಕಾಲ**

ಈಗ ನಾವಿರುವುದು ೨೦ನೆಯ ಶತಮಾನ. ಇಂದಿನಿಂದ ೮ ಸಾವಿರ ವರ್ಷ ಹಿಂದೆ ಹೋದರೆ ಕ್ರಿ. ಪೂರ್ವದ ೬ ಸಾವಿರ ವರ್ಷಗಳಾಗುವವು. ಈ ಕಾಲದಲ್ಲಿ ಸಾಧಾರವಾದ ಐತಿಹಾಸಿಕ ಸಂಗತಿಗಳು ಅಲ್ಪಸ್ವಲ್ಪ ದೊರೆಯುತ್ತವೆ. ಆದುದರಿಂದಲೇ ಪ್ರಾಗೈತಿಹಾಸಿಕ ಕಾಲವೆಂದು ಕರೆಯುವರು. ಕ್ರಿ. ಪೂ. ೬ ಸಾವಿರದಿಂದ ಕ್ರಿ. ಪೂ. ೬೦೦ ರ ವರೆಗಿನ ಕಾಲಕ್ಕೆ ಪುರಾಣಕಾಲವೆಂದೂ ಆದರ ಮುಂದಿನ ಇತ್ತೀಚಿನ ಕಾಲಕ್ಕೆ ಐತಿಹಾಸಿಕಕಾಲವೆಂದೂ ಅನ್ನುವರು. ಈ ಐತಿಹಾಸಿಕಕಾಲದಲ್ಲಿಯೂ ಕೂಡ ಕ್ರಿ. ಪೂ. ೬೦೦ ರಿಂದ ಕ್ರಿ. ಶ. ೪೭೬ ರ ವರೆಗೆ **ಪ್ರಾಚೀನಕಾಲ**ವೆಂದೂ ೪೭೬ ರಿಂದ ೧೪೫೩ ರ ವರೆಗೆ **ಮಧ್ಯಕಾಲ**ವೆಂದೂ ಅದರ ಮುಂದಿನದು **ಅರ್ವಾಚೀನಕಾಲ**ವೆಂದೂ ಹೀಗೆ ಮೂರು ಭಾಗಗಳನ್ನು ಯುರೋಪದ ಇತಿಹಾಸಕ್ಕನುಸಾರವಾಗಿ ಮಾಡಿರುವದು ಸಹಜವಾಗಿದೆ.

ಪೌರಾಣಿಕಕಾಲದಲ್ಲಿ ಅತ್ಯಂತ ಮಹತ್ವವಾದ ಐದು ರಾಷ್ಟ್ರಗಳು ಉದಯವಾಗಿ ಜ್ಞಾನರಥವನ್ನು ಮುಂದಕ್ಕೆ ಸಾಗಿಸಿದವು. ಇಜಿಪ್ತ, ಕ್ರೇಟ, ಮೆಸೋಪೋಟೋಮಿಯಾ, ಭಾರತವರ್ಷ, ಹಾಗು ಚೀನ ಈ ಐದೂ ರಾಷ್ಟ್ರಗಳ ಸಂಸ್ಕೃತಿಯು ಭಿನ್ನವಿದ್ದು ಉಚ್ಚಸ್ಥಿತಿಗೆ ಮುಟ್ಟಿದ್ದಿತೆಂದು ಹೇಳಬಹುದು. ಪ್ರತಿಯೊಂದು ರಾಷ್ಟ್ರದ ಸಂಸ್ಕೃತಿಯ ರೂಪರೇಷೆಗಳನ್ನು ತಿಳಿದುಕೊಂಡು ಆ ರಾಷ್ಟ್ರವು ಜ್ಞಾನನಿಧಿಗೆ ಯಾವ ಕಾಣಿಕೆಯನ್ನು ಅರ್ಪಿಸಿತೆಂಬುದನ್ನು ನೋಡೋಣ.

ಕೃಷಿಪ್ರಧಾನವಾದ ಸಮಾಜಗಳ ಸುಧಾರಣೆಯು ಕಲಾಪ್ರಧಾನ ರಾಷ್ಟ್ರಸಮಾಜಗಳಿಗಿಂತ ಮೊದಲು ಹಾಗು ಬಹುಬೇಗ ಆಯಿತು. ದೊಡ್ಡ ದೊಡ್ಡ ಪಟ್ಟಣಗಳು ಅಲ್ಲಿ ನಿರ್ಮಾಣವಾದವು. ವಿದ್ಯೆ ಹಾಗು ಕಲೆಗಳ ಪ್ರಗತಿಯು ಭರದಿಂದ ಬೆಳೆಯಿತು. ಆದರೆ ಇಂತಹ ಕೃಷಿಪ್ರಧಾನ ವಾದ ರಾಷ್ಟ್ರಗಳ ಸಂಸ್ಕೃತಿಯಲ್ಲಿ ಒಂದು ಬಗೆಯ ಹೇಡಿತನವೂ ಧರ್ಮದ ಮೂಢನಂಬಿಕೆಯೂ ಕಂಡುಬರುವದೆಂಬುದನ್ನೂ ನಾವು ಮರೆಯಲಾಗದು. ಮತ್ತು ಈ ರಾಷ್ಟ್ರಗಳಲ್ಲಿ ರಾಜಪ್ರಭುತ್ವವು ಬಹು ಬೇಗ ಸ್ಥಾಪಿತವಾಗುವದು. ಹಾಗೂ ಈ ಪದ್ಧತಿಯೇ ಅವುಗಳಿಗೆ ಸರಿ ಹೋಗುವುದು. ಆದರೆ ಇದರಿಂದ ಜನರಲ್ಲಿ ಸಾಹಸ, ಪರಾಕ್ರಮ, ಚಪಲತೆ, ಸ್ವತಂತ್ರಬುದ್ಧಿ ಇವೆ ಮೊದಲಾದವುಗಳು ಸಾಕಷ್ಟು ವಿಕಾಸ ವನ್ನು ಹೊಂದುವದಿಲ್ಲ.

## ಇಜಿಪ್ತ

ಕೃಷಿಯ ಮೇಲೆಯೇ ಇಜಿಪ್ತದ ಸಂಸ್ಕೃತಿಯು ಬೆಳೆದುದರಿಂದ ಮೇಲೆ ವರ್ಣಿಸಿದ ಗುಣಾವಗುಣಗಳೆಲ್ಲವೂ ಇದರಲ್ಲಿ ಒಡೆದು ಕಾಣು ತ್ತವೆ. ನೈಲನದಿಯ ಎರಡೂ ದಂಡೆಗಳಲ್ಲಿಯೂ ಸುಮಾರು ೨೦ ಮೈಲು ಗಳ ವರೆಗೆ ಮಹಾಪೂರ ಬರುವುದರಿಂದ, ರೇವೆಯು ಬಿಟ್ಟು ಭೂಮಿಯು ಒಳ್ಳೇ ಫಲವತ್ತದ್ದಾಗಿದೆ. ಈ ಬೆಳೆಯುಳ್ಳ ಪ್ರದೇಶವೇ ಮಿಸರಿ ಜನರ ಅರ್ಥಾತ್ ಇಜಿಪ್ತರ ಸಂಸ್ಕೃತಿಯ ಜೀವಾಳವು. ಗ್ರೀಕ ಇತಿಹಾಸ ಕಾರನಾದ ಹೀರಾಡೋಟಸನು ಇಜಿಪ್ತಕ್ಕೆ 'ನೈಲನದಿಯ ವರವು' ಎಂದು ಕರೆದಿದ್ದಾನೆ. ವಿಶೇಷವಾಗಿ ನಾವು ರಾಜಕೀಯ ಇತಿಹಾಸವನ್ನು ಒಳಹೊಕ್ಕು ನೋಡುವ ಕಾರಣವಿಲ್ಲ. ಕ್ರಿ. ಪೂ. ೫ ಸಾವಿರ ವರ್ಷಗಳ ಹಿಂದೆ, ಕೆಂಪುಸಮುದ್ರದಲ್ಲಿಯ ದಾಳಿಗಾರರು ಇಜಿಪ್ತವನ್ನು ಗೆದ್ದು ಅಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿದರು. ಮೊದಲನೆಯ ಮನೆತನವು ಕ್ರಿ. ಪೂ.೫೦೦೪ರಲ್ಲಿ ಸ್ಥಾಪಿತವಾಯಿತು. ಅಂದಿನಿಂದ ಅಲೆಕ್ಝಾಂಡರನ ದಾಳಿಯ ವರೆಗೆ ಅಂದರೆ ಸುಮಾರು ೪೬೭೨ ವರ್ಷಗಳಲ್ಲಿ ೩೧ ಅರಸುಮನೆತನಗಳು ಅಲ್ಲಿ ರಾಜ್ಯವನ್ನು ಆಳಿದವು. ಈ ದೀರ್ಘಕಾಲದಲ್ಲಿ ಇತಿಹಾಸಕಾರರು

೩-೪ ಭಾಗಗಳನ್ನು ಮಾಡುವರು. ಕ್ರಿ.ಪೂ. ೫೦೦೦ ದಿಂದ ೩೩೫೮ರ ವರೆಗಿನ ಕಾಲಕ್ಕೆ ಹಳೆಯಕಾಲವೆನ್ನುವರು. ಈ ಕಾಲದಲ್ಲಿ ಇಜಿಪ್ತದ ರಾಜ್ಯವು ಒಳ್ಳೇ ಪ್ರಖ್ಯಾತವಾಯಿತು. ಕಲೆಗಳ ಬೆಳೆವಣಿಗೆಯು ಕೂಡ ಬಹು ಚೆನ್ನಾಗಿ ಆಯಿತು. ಜಗಪ್ರಸಿದ್ಧವಾದ 'ಪಿರಾಮಿಡ್'ಗಳು ೩-೪ನೆಯ ಅರಸುಮನೆತನಗಳ ಕಾಲಕ್ಕೆಯೇ ಕಟ್ಟಲ್ಪಟ್ಟವು. ಚಿಆ್ಯಪ್ಸ ರಾಜನು ಕಟ್ಟಿಸಿದ ಎಲ್ಲಕ್ಕೂ ದೊಡ್ಡದಾದ ಪಿರಾಮಿಡ್‌ವು ೭೦೦ ಫೂಟು ಉದ್ದ ೪೫೦ ಫೂಟು ಎತ್ತರವಿದೆ. ಮುಂದೆ ೯ರಿಂದ ೧೪ನೆಯ ಮನೆತನದವರೆಗಿನ ಕಾಲವೆಲ್ಲ ಯಾದವಿಯಲ್ಲಿಯೇ ಹೋಯಿತು. (ಕ್ರಿ.ಪೂ. ೩೩೫೮-೨೨೧೪ ರ ವರೆಗೆ) ಮುಂದೆ ಕೆಲಕಾಲದ ನಂತರ ಹಿಕ್ಸಾಸನೆಂಬ ಏಶಿಯಾದ ದಾಳಿಗಾರನು ಬಂದು ಇಜಿಪ್ತವನ್ನು ಗೆದ್ದನು. ಇವನ ವಂಶಜರು ಮೂರು ತಲೆಯವರೆಗೆ ಆಳಿದರು. ಅಷ್ಟರಲ್ಲಿ ಇಜಿಪ್ಸಿಯನ್ನರು ಅವರನ್ನು ಪಟ್ಟದಿಂದ ತಳ್ಳಿ ಸ್ವರಾಜ್ಯವನ್ನು ಸ್ಥಾಪಿಸಿದರು ( ಕ್ರಿ. ಪೂ. ೧೭೦೩ ). ಮುಂದೆ ೧೮ ರಿಂದ ೨೦ ರ ವರೆಗಿನ ರಾಜಮನೆತನಗಳ ಕಾಲಕ್ಕೆ ನೂತನ ಸಾಮ್ರಾಜ್ಯ ಕಾಲವೆಂದು ಹೇಳಬಹುದು. ಈ ಕಾಲದಲ್ಲಿ ಇಜಿಪ್ತವು ಮತ್ತೆ ವೈಭವ ಶಿಖರವನ್ನು ಮುಟ್ಟಿತು. ಟಾಟಾಮೀಸ, ರಮೋಸಿಸ್ ಮೊದಲಾದ ರಾಜರು ದೊಡ್ಡ ದೊಡ್ಡ ದೇವಾಲಯಗಳನ್ನೂ ಕಾಲುವೆಗಳನ್ನೂ ಕಟ್ಟಿಸಿದರು. ಸೀರಿಯಾ ಪಾಲಿಸ್ತ್ಯಾಯಿನಗಳು ಇವರ ಕೈಸೇರಿ ಇಜಿಪ್ತಸಾಮ್ರಾಜ್ಯವು ಬೆಳೆಯಿತು. ಮುಂದೆ ಕ್ರಿ. ಪೂ. ೭೨೦ ರಲ್ಲಿ ನಿಗ್ರೊಜಾತಿಯ ಅರಸನು ಇಜಿಪ್ತವನ್ನು ಗೆದ್ದನು. ಮುಂದೆ ಬಾಬಿಲೋನ, ಇರಾಣಗಳೂ ಇಜಿಪ್ತವನ್ನು ಗೆದ್ದವು. ಕಡೆಗೆ ಅಲೆಕ್ಝಾಂಡರನು ಇದನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು.

ಧಾರ್ಮಿಕ ಹಾಗು ಪೌರಾಣಿಕ ಕಥೆಗಳನ್ನು ಬಿಟ್ಟರೆ, ಮಿಸರಿ ಜನರ ಸಂಸ್ಕೃತಿಯು ಅಂತಹ ಮಹತ್ವವಾದ ಯಾವ ಶೋಧವನ್ನು ಮಾಡಲಿಲ್ಲವೆಂದು ಹೇಳಬಹುದು. ಭೂಮಿತಿಯ ಜ್ಞಾನವು ಅವರಿಗೆ ವಿಶೇಷವಾಗಿದ್ದಿತು. ನಾವಿಕವಿದ್ಯೆಯಲ್ಲಿ ಅವರು ಪ್ರಗತಿಯನ್ನು ಮಾಡಿದ್ದರು. ಶಿಲ್ಪದಲ್ಲಿಯೂ, ಕಟ್ಟಡಗಳಲ್ಲಿಯೂ ಜಗತ್ತು ಬಟ್ಟುಕಚ್ಚುವಂತಹ ಕೃತಿಗಳನ್ನು ಅವರು ನಿರ್ಮಿಸಿದರು. ಆದರೆ ಜ್ಞಾನದ ಕ್ಷೇತ್ರ

ದಲ್ಲಿ ಮಾತ್ರ ಅವರು ಅಷ್ಟು ಮುಂದುವರಿಯಲಿಲ್ಲ. ವಿಗ್ರಹ, ಬಣ್ಣದ ಚಿತ್ರಗಳು, ಕುಂದಣದ ಕೈಗಾರಿಕೆಗಳು, ಸುಳುವುಳ್ಳ ನೇಯ್ಗೆಯ ಬಟ್ಟೆಗಳು ಇಜಿಪ್ತದ ಸಂಶೋಧನದಲ್ಲಿ ದೊರೆತುದೇನೋ ನಿಜ. ಆದರೆ ಇವೆಲ್ಲವುಗಳಲ್ಲಿ **ಕ್ರೀಟ್**ರ ಕೈವಾಡವಿದೆಯೆಂದು ಹೇಳುತ್ತಾರೆ. ಬಣ್ಣದ ಕಾಜುಗಳನ್ನು ಮಾಡುವ ಕಲೆಯು ಇವರಿಗೆ ವಿದಿತವಿದ್ದಿತು. ಜ್ಯೋತಿಷ, ಗಣಿತಗಳಲ್ಲಿ ಅವರು ಆ ಕಾಲದವರಿಗಿಂತ ಮಿಗಿಲಿದ್ದರು. ಒಟ್ಟಿನಲ್ಲಿ ಶಾಸ್ತ್ರೀಯಜ್ಞಾನದಲ್ಲಿ ಅವರು ಮುಂದುವರಿಯದಿದ್ದರೂ, ಜೀವನೋಪಯುಕ್ತಜ್ಞಾನದಲ್ಲಿ ಆ ಕಾಲಕ್ಕೆ ಎಲ್ಲರಿಗಿಂತಲೂ ಅವರೇ ಮುಂದಿದ್ದರು.

## ಕ್ರೀಟ್

ಗ್ರೀಸದ ದಕ್ಷಿಣಕ್ಕೆ ಹಾಗು ಪೂರ್ವಕ್ಕೆ ಸಣ್ಣ ದ್ವೀಪಗಳಿಂದ ತುಂಬಿದ ಏಜಿಯನ್ ಸಮುದ್ರದಲ್ಲಿ, **ಕ್ರೀಟ್**ವೆಂಬುದು ಎಲ್ಲಕ್ಕೂ ದೊಡ್ಡ ದ್ವೀಪವು. ಈ ದ್ವೀಪದ ಸಂಸ್ಕೃತಿಯೂ ಇಜಿಪ್ತದಷ್ಟೇ ಪ್ರಾಚೀನವೆಂದು ಹೇಳಲ್ಪಡುತ್ತದೆ. ಏಶಿಯನ್ ಸಮುದ್ರದಲ್ಲೆಲ್ಲ ಈ ಸಂಸ್ಕೃತಿಯ ಪ್ರಭಾವವೇ ಇರುವದರಿಂದ ಇದಕ್ಕೆ ಏಜಿಯನ್ ಸಂಸ್ಕೃತಿಯೆಂದು ಕರೆಯುತ್ತಾರೆ. ೧೯೦೦ರಿಂದ ೧೯೦೭ರ ವರೆಗೆ, ಈ ಭೂಪ್ರದೇಶದಲ್ಲಿ ನಡೆದ ಸಂಶೋಧನೆಯಿಂದ ಈ ಸಂಸ್ಕೃತಿಯು ಬೆಳಕಿಗೆ ಬಂದಿದೆ. ಎಲ್ಲ ಬಗೆಯ ಸುಖವಿಲಾಸಗಳಿಗೆ ಆವಶ್ಯಕವಾದ ವಸ್ತುಗಳಿಂದ ಕೂಡಿದ ಈ ಸಂಸ್ಕೃತಿಯು ಎಷ್ಟು ಪರಿಣತಾವಸ್ಥೆಗೆ ಮುಟ್ಟಿತ್ತೆಂಬುದು ಇದರಿಂದ ವ್ಯಕ್ತವಾಗುತ್ತದೆ. ಈ ಸಂಸ್ಕೃತಿಯ ಮುಖ್ಯ ಕೇಂದ್ರವು ಕ್ನೊಸಾಸ ಪಟ್ಟಣವು. ಅದನ್ನು ಅಗಿದು ಇಂದು ಹೊರಗೆ ತೆಗೆದಿದ್ದಾರೆ. ಭವ್ಯವಾದ ಅರಮನೆ, ಸುಂದರವಾದ ಮಹಾಲುಗಳು, ಸ್ನಾನಗೃಹಗಳು, ನಲ್ಲಿಗಳು ಇವೇ ಮೊದಲಾದವು ಆಶ್ಚರ್ಯವನ್ನುಂಟುಮಾಡುತ್ತವೆ. ಸುಂದರವಾದ ಚಿತ್ರಗಳೂ, ಸೂಕ್ಷ್ಮವಾದ ಶಿಲ್ಪಕಲೆಯೂ, ನಯವಾದ ಸುಳುವುಗಳುಳ್ಳ ಬಟ್ಟೆಗಳೂ, ಹಸ್ತಿದಂತ ಹಾಗು ರತ್ನಗಳಲ್ಲಿ ಮಾಡಿದ ಕೆತ್ತನೆಯ ಕೆಲಸವೂ, ಧಾತುಗಳ ಮೇಲೆ ಕೆತ್ತಲ್ಪಟ್ಟ ಚಿತ್ರ ಹಾಗು ಸುಳುವುಗಳು

ಮನುಷ್ಯನನ್ನು ಮುಗ್ಧಗೊಳಿಸುತ್ತವೆ. ಇಂತಹ ಕಲೆಯು ೨೦ನೆಯ ಶತಮಾನದಲ್ಲಿ ಕೂಡ ಕಣ್ಣಿಗೆ ಬೀಳುವುದು ದುಸ್ತರ.

ಕೈಕೆಲಸದಲ್ಲಿಯೂ ಸುಖಜೀವನೋಪಯುಕ್ತ ಒಡವೆಗಳನ್ನು ನಿರ್ಮಿಸುವಲ್ಲಿಯೂ ಈ ರಾಷ್ಟ್ರವು ಇಷ್ಟು ಮುಂದುವರಿಯಲು ಅಲ್ಲಿ ೩ ಸಾವಿರ ವರ್ಷಗಳವರೆಗೆ ನೆಲೆಸಿದ ಶಾಂತಿಯೇ ಮುಖ್ಯ ಕಾರಣವು. ಇದಲ್ಲದೆ ಈ ರಾಷ್ಟ್ರವು ಕೃಷಿಪ್ರಧಾನವಿರದೆ, ಕಲಾಪ್ರಧಾನವಾದುದೆಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ವ್ಯಾಪಾರ, ಉದ್ಯಮ, ಕೈಗಾರಿಕೆಗಳಿಂದ ಅಪಾರ ಸಂಪತ್ತನ್ನು ಗಳಿಸಬಹುದೆಂಬುದನ್ನು ಬೇರೆ ಹೇಳಲಿಕ್ಕೆಬೇಡ.

## ಮೆಸೋಪೋಟೊಮಿಯಾ ಅರ್ಥಾತ್ ಬಾಬಿಲೋನ

ತೈಗ್ರೀಸ ಹಾಗು ಯುಕ್ರೇಟೀಸ ನದಿಗಳ ಮುಖ್ಯ ಪ್ರದೇಶದ ಸಂಸ್ಕೃತಿಯು ಕೂಡ ಇಜಿಪ್ತದಂತೆಯೇ ಇದೆ. ಗ್ರೀಕರು ಇದಕ್ಕೆ ಮೆಸೋಪೋಟೋಮಿಯಾ (ಎರಡು ನದಿಗಳ ನಡುವಿನ ಮಧ್ಯಪ್ರದೇಶ: ಅಂತರ್ವೇದೀಯ) ಎಂದು ಹೆಸರಿಟ್ಟಿರುವರು. ಈ ಪ್ರದೇಶವು ಈಗ ಇರಾಕವೆಂದು ಕರೆಯಲ್ಪಡುತ್ತದೆ. ಈ ಪ್ರದೇಶದಲ್ಲಿ ಪ್ರಾಚೀನ ಕಾಲಕ್ಕೆ ಎರಡು ರಾಷ್ಟ್ರಗಳು ನೆಲೆಸಿದ್ದವು. ಉತ್ತರಕ್ಕೆ 'ಅಸಿರಿಯಾ' ಹಾಗು ದಕ್ಷಿಣಕ್ಕೆ 'ಸುಮೇರಿಯಾ'. ಸುಮೇರಿಯದಲ್ಲಿ ಸುಮೇರ ಎಂಬ ಕಲೋಪಾಸಕ ಜನಾಂಗವು ನೆಲೆಸಿದ್ದು, ಧರ್ಮಗುರುಗಳ ಛತ್ರದಲ್ಲಿ ಸಾವಿರಾರು ವರ್ಷ ಶಾಂತತೆಯಿಂದಲೂ ಸುಖದಿಂದಲೂ ಜೀವಿಸಿದ್ದಿತು. ಆದರೆ ಈ ಪ್ರದೇಶವು ಸುರಕ್ಷಿತವಿರದ್ದರಿಂದ, ಸೆಮಿಟಿಕ್ ವಂಶದ ಕಾಡುಜನರು ಬಂದು ಮೇಲಿಂದ ಮೇಲೆ ದಾಳಿ ಮಾಡುತ್ತಿದ್ದರು. ಆದರೆ ಗೆದ್ದ ಜನರು ಕೂಡ ಇಲ್ಲಿ ಕೆಲಕಾಲ ನೆಲೆಸಿದನಂತರ ಅಲ್ಲಿಯ ಸುಖೋಪಜೀವನಕ್ಕೆ ಮನಸೋತು ವಿಲಾಸಿಗಳೂ, ಸೋಮಾರಿಗಳೂ ಆಗುತ್ತಿದ್ದರು. ಇದನ್ನು ಜಯಿಸಿದವರ ಗತಿಯೆಲ್ಲ ಹೀಗೆಯೇ ಆಗುತ್ತಿದ್ದಿತು. ಎಲ್ಲಕ್ಕೂ ಮೊದಲಿನ ದಾಳಿಯು ಕ್ರಿ. ಪೂ. ೨೭೫೦ರಲ್ಲಿ ಆಯಿತು. ಸೆಮಿಟಿಕ್ ಪಂಗಡದ ಮುಂದಾಳುವಾದ **ಸಾರಗೋಣನು** ಇದನ್ನು ಪಾದಾಕ್ರಾಂತಮಾಡಿ

'ಅಕೇಡಿಯನ್' ಸಾಮ್ರಾಜ್ಯವನ್ನು ಸ್ಥಾಪಿಸಿ ರಾಜನಾದನು. ಇನ್ನೊಂದು ಗುಂಪು ಬಾಬಿಲೋನದಲ್ಲಿ ಬಂದು ತಮ್ಮ ರಾಜ್ಯವನ್ನು ಸ್ಥಾಪಿಸಿತು. ಈ ಹೊಸ ಮನೆತನದ '**ಹಾಮುರಾಬಿ**' ಎಂಬವನ ಕಾಲದಲ್ಲಿ ಅಂತರ್ವೇದಿಯ ಪ್ರದೇಶವೆಲ್ಲ ಒಂದೇ ಆಡಳಿತಕ್ಕೆ ಒಳಗಾಗಿ ಮೊದಲನೆಯ ಬಾಬಿಲೋನ ಸಾಮ್ರಾಜ್ಯದ ಸ್ಥಾಪನೆಯಾಯಿತು (ಕ್ರಿ. ಪೂ. ೨೧೦೦).

ಆಶಿಯಾ ಸಾಮ್ರಾಜ್ಯವು ಸುಮೇರಿಯಕ್ಕಿಂತ ಇತ್ತೀಚಿನದು. ಅಸೂರ ಹಾಗು ನಿನವೇ ಪಟ್ಟಣಗಳು ಈ ಪ್ರದೇಶದಲ್ಲಿ ಪ್ರಸಿದ್ಧವಾದವು. ಇವರು ಕ್ಷತ್ರಿಯರಿದ್ದು ಒಳ್ಳೇ ಪರಾಕ್ರಮಿಗಳು. ದಕ್ಷಿಣಕ್ಕೆ ದಂಡೆತ್ತಿ ಹೋಗಿ ಬಾಬಿಲೋನವನ್ನು ಇವರು ವಶಪಡಿಸಿಕೊಂಡರು. ಆಶಿಯಾ ಸಾಮ್ರಾಜ್ಯವನ್ನು ಸ್ಥಾಪಿಸಿದರು (ಕ್ರಿ. ಪೂ. ೭೪೫). ಇಜಿಪ್ತ ದೇಶವನ್ನು ಗೆದ್ದ 'ಅಸುರಬನಿಪಾಲ'ನು ಆಸೀರಿಯನ್ ರಾಜಮನೆತನದ ಸಾಮ್ರಾಟನು. ಮತ್ತೆ ಕೆಲಕಾಲದ ನಂತರ ಬಾಲ್ಡಿ ಎಂಬ ಹೆಸರುಳ್ಳ ಸೆಮಿಟಿಕ್ ತಂಡವು ಬಂದು ಈ ಪ್ರದೇಶವನ್ನು ವಶಪಡಿಸಿಕೊಂಡು ಬಾಲ್ಡಿಯ ಸಾಮ್ರಾಜ್ಯವನ್ನು ಸ್ಥಾಪಿಸಿತು (ಕ್ರಿ. ಪೂ. ೬೦೬). ಆದರೆ ಇದು ಬಹಳ ದಿವಸ ಬಾಳಲಿಲ್ಲ. ಇರಾಣದ ಅರಸನಾದ ಸಾಯುರಸನು ಕ್ರಿ. ಪೂ. ೫೩೮ ರಲ್ಲಿ ಇದನ್ನು ಹಾಳುಮಾಡಿದನು. ಹೀಗೆ ಈ ಅಂತರ್ವೇದಿಯ ಪ್ರದೇಶದ ಇತಿಹಾಸವು ಉದಯಾಸ್ತಗಳಿಂದ ತುಂಬಿದೆ.

ಜ್ಞಾನದ ದೃಷ್ಟಿಯಿಂದ ಮಹತ್ವದ ಸಂಗತಿಗಳೇನೂ ಒದಗಲಿಲ್ಲ. ಜ್ಞಾನ ಹಾಗು ಕಲಾಕೌಶಲ್ಯಗಳಲ್ಲಿ ಇದೂ ಕೂಡ ಇಜಿಪ್ತದ ಸರಿಸಮಾನ ರಾಷ್ಟ್ರವೆಂದೇ ಹೇಳಬಹುದು. ಜ್ಯೋತಿಷ್ಯದಲ್ಲಿ ಬಾಬಿಲೋನಿಯನ್ನರು ಇಜಿಪ್ತಕ್ಕಿಂತ ಮುಂದಿದ್ದರು. ಆದರೆ ಫಲಜ್ಯೋತಿಷ ಹಾಗು ಶಕುನಗಳ ಹಾವಳಿಯು ಮಾತ್ರ ಈ ಪ್ರದೇಶದಲ್ಲಿ ಬಹಳವಿದ್ದಿತು. ಧರ್ಮಮೂಢ ತನವೂ ಅಂಧಶ್ರದ್ಧೆಗಳೂ ತುಂಬಿದ್ದವು. ಅದನ್ನು ಪ್ರಚಾರಮಾಡುವ ಧರ್ಮಗುರುಗಳ ತಂಡಕ್ಕೇನೂ ಕೊರತೆಯಿರಲಿಲ್ಲ. ಕೃಷಿ, ವಾಸ್ತುಶಿಲ್ಪ, ನಾವಿಕ ಕಲೆಗಳು ಇಜಿಪ್ತದಂತೆಯೇ ಇಲ್ಲಿಯೂ ವಿಕಾಸವನ್ನು ಹೊಂದಿದ್ದವು.

ಜಗತ್ತಿನ ಪ್ರಗತಿಯ ದೃಷ್ಟಿಯಿಂದ ಈ ಸಾಮ್ರಾಜ್ಯಗಳು ಜ್ಞಾನ

ನಿಧಿಗೆ ಅಪೂರ್ವವಾದ ಎರಡು ಮೂರು ಕಾಣಿಕೆಗಳನ್ನು ಅರ್ಪಿಸಿವೆ. ಲಿಪಿಯ ಶೋಧವೇ ಮೊದಲನೆಯದು. ಬಾಬಿಲೋನ ಇಜಿಪ್ತ ದೇಶಗಳೆರಡೂ ಸ್ವತಂತ್ರ ರೀತಿಯಿಂದ ಲಿಪಿಯನ್ನು ನಿರ್ಮಿಸಿದುವು. ಇಜಿಪ್ತದ ಧಾರ್ಮಿಕ ಗುರುಗಳು ಚಿತ್ರಲಿಪಿಯನ್ನು ಪ್ರಚಾರದಲ್ಲಿ ತಂದು ಅದರಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು. ಸುಮೇರಿಯನ್ನರು ಧ್ವನಿ ನಿದರ್ಶಕ ಚಿನ್ಹಗಳನ್ನು ಕಲ್ಪಿಸಿ ಲಿಪಿಯನ್ನು ನಿರ್ಮಿಸಿದರು. ಈ ಲಿಪಿಯು ಮಣ್ಣಿನ ಇಟ್ಟಿಗೆಗಳ ಮೇಲೆ ಚೂಪಾದ ಲೆಕ್ಕಣಿಕೆಯಿಂದ ಬರೆಯಲ್ಪಟ್ಟಿದೆ. ಇವು ಕೀಲಾಕೃತಿ ಅಕ್ಷರಗಳೆಂದು ಕರೆಯಲ್ಪಡುತ್ತವೆ (Cuneiform). ಈ ಲಿಪಿಯಲ್ಲಿ ವಿಪುಲವಾದ ವಾಙ್ಮಯವನ್ನೂ ಕಾಯಿದೆಗಳನ್ನೂ ಬಾಬಿಲೋನಿಯನ್ನರು ಬರೆದಿಟ್ಟಿರುವರು. ಸಾಮಾನ್ಯ ಜನರ ಲೆಖ್ಖಪತ್ರಗಳೂ, ರಾಜರ ಆಜ್ಞಾಪತ್ರಗಳೂ, ಒಪ್ಪಂದಗಳೂ ಕೂಡ ಇಟ್ಟಿಗೆಯ ಮೇಲೆ ಬರೆಯಲ್ಪಟ್ಟಿವೆ. ಈ ವಾಙ್ಮಯವು ಏನೇ ಇರಲಿ, ಈ ರಾಷ್ಟ್ರಗಳ **ಲಿಪಿಯ ಕಾಣಿಕೆಯು** ಮಾತ್ರ ಜಗತ್ತಿಗೆ ಅಪೂರ್ವವಾದುದು. ಇಜಿಪ್ತರ ಚಿತ್ರಲಿಪಿ ಹಾಗು ಬಾಬಿಲೋನರ ಧ್ವನಿಲಿಪಿಗಳ ಬೆರಿಕೆಯಿಂದ 'ಫಿನಿಸಿಯನ್' ಎಂಬ ಹೊಸ ಲಿಪಿಯನ್ನು ಜಗತ್ತಿನಲ್ಲೆಲ್ಲ ಸಂಚರಿಸುವ ನಾವಿಕರಾದ ವ್ಯಾಪಾರಿಗಳು ಪ್ರಚಾರದಲ್ಲಿ ತಂದರು. ಈ ಲಿಪಿಯೇ ಇಂದಿನ ಯುರೋಪದಲ್ಲಿಯ ಎಲ್ಲ ಲಿಪಿಗಳ ಜನನಿಯು. ಅದರಂತೆಯೇ ಭಾರತೀಯ ಸರ್ವ ಲಿಪಿಗಳ ಜನನಿಯಾದ 'ಬ್ರಾಹ್ಮಿ' ಲಿಪಿಯು ಕೂಡ ಫಿನಿಸಿಯನ್ ಲಿಪಿಯಿಂದಲೇ ಹುಟ್ಟಿದುದು ಎಂದು ಪಾಶ್ಚಾತ್ಯ ವಿದ್ವಾಂಸರ ತರ್ಕ.

ದುಂಡನ್ನ ಗಾಲಿಗಳುಳ್ಳ ರಥ ಹಾಗು ಅದನ್ನು ಎಳೆಯಲು ಪಶುಗಳ ಉಪಯೋಗವನ್ನು ಮಾಡಿಕೊಂಡುದೇ ಮಹತ್ವವಾದ ಎರಡನೆಯ ಶೋಧವು. ರಥಗಳು ೩ ಸಾವಿರ ವರ್ಷಗಳ ಪೂರ್ವದಲ್ಲಿಯೇ ಇದ್ದುವೆಂದು ಮೊಹೆಂಜೋದಾರೊ ಸಾಕ್ಷಿ ನುಡಿಯುತ್ತಲಿದೆ.

ಮೂರನೆಯ ಮಹತ್ವದ ಶೋಧವೆಂದರೆ ಕಬ್ಬಿಣವು. ಅದರುಗಳಿಂದ ಕಬ್ಬಿಣವನ್ನು ಬೇರ್ಪಡಿಸಿ, ಶಸ್ತ್ರಾಸ್ತ್ರಗಳನ್ನು ನಿರ್ಮಿಸುವ ಕಲೆಯು ಕ್ರಿ. ಪೂ. ೧೫೦೦ರಲ್ಲಿಯೇ ಆಶಿಯಾಮೈನರದಲ್ಲಿ ಸಾರ್ವತ್ರಿಕವಾಗಿ ಪ್ರಚಾರದಲ್ಲಿದ್ದಿತು. ಇಜಿಪ್ತದ ಒಂದು ಪಿರಾಮಿಡ್‌ದಲ್ಲಿ ಉಕ್ಕಿನ

ಒಂದು ಅಲಗು ಸಿಕ್ಕಿದೆ. ಅದು ಕ್ರಿ. ಪೂ. ೩ ಸಾವಿರ ವರ್ಷಕ್ಕಿಂತಲೂ ಮೊದಲಿನದಿರಬೇಕೆಂದು ತರ್ಕವಿದೆ. ಕಬ್ಬಿಣದ ಶೋಧವು ಮೊದಲು ಭಾರತದಲ್ಲಿಯೇ ಆಗಿರಬೇಕೆಂದು ಅನೇಕ ಜನರ ಊಹೆಯಿದೆ. ಅದು ಮೊದಲು ಎಲ್ಲಿಯೇ ಶೋಧವಾಗಿರಲಿ,ಕ್ರಿ. ಪೂ. ೧ ಸಾವಿರ ವರ್ಷಕ್ಕಿಂತ ಮೊದಲು ಅದರಿಂದ ಶಸ್ತ್ರಾಸ್ತ್ರಗಳನ್ನು ಮಾಡಿ ಯುದ್ಧದಲ್ಲಿ ಎಲ್ಲ ರಾಷ್ಟ್ರಗಳೂ ಉಪಯೋಗಿಸುತ್ತಿದ್ದವೆಂಬ ಮಾತು ಮಾತ್ರ ನಿಜವಿದೆ.

### ಭಾರತವರ್ಷ

ಇನ್ನು ನಾವು ಭಾರತೀಯ ಸಂಸ್ಕೃತಿಯ ಕಡೆಗೆ ತಿರುಗೋಣ! ಇಂದು ಭಾರತದಲ್ಲಿಯ ಸಂಸ್ಕೃತಿಯು ಎರಡು ಸಂಸ್ಕೃತಿಗಳ ಸಮ್ಮಿಶ್ರಣವು. ಅತ್ಯಂತ ಪ್ರಾಚೀನ ಕಾಲದಲ್ಲಿ ಭಾರತದಲ್ಲೆಲ್ಲ ದ್ರಾವಿಡ ಸಂಸ್ಕೃತಿಯು ಹಬ್ಬಿತ್ತೆಂಬುದು ಈಗ ಸರ್ವಮಾನ್ಯವಾಗಿದೆ. ಈ ದ್ರಾವಿಡ ಸಂಸ್ಕೃತಿಯ ಸ್ವರೂಪವೇನು? ಅದರ ಸಮಕಾಲೀನ ರಾಷ್ಟ್ರಗಳಾದ ಸುಮೇರಿ, ಬಾಬಿಲೋನಗಳ ಸಂಸ್ಕೃತಿಗೆ ಅದು ಎಷ್ಟರಮಟ್ಟಿಗೆ ಸಂಬಂಧ ವಿದೆ? ಎಂಬ ಸಂಗತಿಗಳು ಇನ್ನೂ ಉಪಲಬ್ಧವಿಲ್ಲ. ಕ್ರಿ. ಪೂ. ೩ ಸಾವಿರ ವರೆಗೆ, ಈ ದ್ರಾವಿಡ ಸಂಸ್ಕೃತಿಯು ಭಾರತದಲ್ಲಿ ಬಾಳಿ ಬೆಳೆಯುತ್ತಿದ್ದಿತು. ಮುಂದೆ ಕ್ರಿ. ಪೂ. ೩ ಸಾವಿರದಿಂದ ೨ ಸಾವಿರದವರೆಗಿನ ಕಾಲದಲ್ಲಿ ಆರ್ಯರು ಬಹುತರವಾಗಿ ವಾಯುವ್ಯ ದಿಕ್ಕಿನಿಂದ ಭಾರತದಲ್ಲಿ ಬಂದಿರಬೇಕು. ಈ ಎರಡೂ ಜನಾಂಗಗಳ ಸಂಸ್ಕೃತಿಯ ಸಮ್ಮಿಶ್ರಣವೇ ಇಂದಿನ ವಿಶಿಷ್ಟ ಭಾರತೀಯ ಸಂಸ್ಕೃತಿಯು.

ಆರ್ಯರ ಮೂಲಸ್ಥಾನವಾವುದು? ಅವರು ಎಲ್ಲಿಂದ ಯಾವ ಮಾರ್ಗವಾಗಿ ಭಾರತಕ್ಕೆ ಬಂದರು? ಎಂದು ಬಂದರು? ಋಗ್ವೇದವನ್ನು ರಚಿಸಿರುವ ಕಾಲವು ಯಾವುದು? ಇವೇ ಮೊದಲಾದ ಅನೇಕ ತೊಡಕಿನ ಪ್ರಶ್ನೆಗಳು ಆರ್ಯರ ಸಂಸ್ಕೃತಿಯ ಬಗ್ಗೆ ವಿಚಾರಮಾಡುವಾಗ ಎದುರಿಗೆ ನಿಲ್ಲುತ್ತವೆ. ಅನೇಕ ಭಾರತೀಯ ಹಾಗು ಪಾಶ್ಚಾತ್ಯ ವಿದ್ವಾಂಸರಲ್ಲಿ ಈ ಬಗ್ಗೆ ಮತಭೇದವಿದೆ. ಅವೆಲ್ಲವನ್ನೂ ಇಲ್ಲಿ ವಿವರಿಸದೆ ಸರ್ವಸಾಧಾರಣವಾಗಿ ಸಯುಕ್ತಿಕವಾದುದನ್ನು ಇಲ್ಲಿ ವಿವರಿಸಲಾಗುವುದು.

ಆರ್ಯರ ಮೂಲಸ್ಥಾನವು ಯಾವುದೇ ಇರಲಿ, ಅವರು ತಮ್ಮ ಸ್ಥಾನದಿಂದ ಕ್ರಿ ಪೂ. ೫೦೦೦ದಿಂದ ೪ಸಾವಿರದ ವರೆಗಿನ ಕಾಲಾವಧಿ ಯಲ್ಲಿ ಹೊರಗೆ ಹರಿಸಿದ್ದರು. ಆದರಲ್ಲಿ ಒಂದು ಶಾಖೆಯು ಕ್ರಿ. ಪೂ. ೩ ಸಾವಿರದ ಸುಮಾರಿಗೆ ಇರಾಣದ ಉತ್ತರಕ್ಕೆ ಬಂದಿರಬೇಕು. ಅದರಲ್ಲಿ ಮತ್ತೆ ಇಬ್ಭಾಗವಾಗಿ ಒಂದು ತುಂಡು ಆಗ್ನೇಯ ದಿಕ್ಕಿನಿಂದ ಅಫಗಾಣಿ ಸ್ತಾನದ ಮಾರ್ಗವಾಗಿ ಭಾರತಕ್ಕೆ ಬಂದಿರಬೇಕು. ಎರಡನೆಯ ಗುಂಪು ನೆಟ್ಟಗೆ ದಕ್ಷಿಣಕ್ಕೆ ಇರಾಣದಲ್ಲಿ ಇಳಿದಿರಬೇಕು. ಇದಲ್ಲದೆ ಆರ್ಯರ ಇನ್ನೊಂದು ಶಾಖೆಯು ಅಕಸ್ಮಾತ್ತಾಗಿ ಆರ್ಮಿನಿಯಾ ಅಥವಾ ಕಾಕೇಸಸ್ ಪರ್ವತದಲ್ಲಿ ಹಾಯ್ದು ಇರಾಣದ ವಾಯುವ್ಯಕ್ಕಿರುವ ಮೀಡಿಯಾ ದೇಶದಲ್ಲಿ ನೆಲೆಸಿರಬೇಕು. ಈ ಎರಡನೆಯ ಶಾಖೆಯ ಜನರೂ ಭಾರತಕ್ಕೆ ಬಂದಿರುವ ಸಂಭವವಿದೆ. ಸಾರಾಂಶ ಕ್ರಿ. ಪೂ. ೨೫೦೦ರ ಸುಮಾರಿಗೆ ಆರ್ಯರು ಭಾರತಕ್ಕೆ ಬಂದರು. ಋಗ್ವೇದದಲ್ಲಿಯ ಕೆಲಭಾಗವನ್ನು ಭಾರತಕ್ಕೆಬರುವ ಮೊದಲೇ ಇರಾಣದ ಉತ್ತರಕ್ಕಿರುವಾಗ ರಚಿಸಿರಬೇಕು.

ಈ ವಿವೇಚನೆಯು ಭಾರತದ ಪ್ರಾಚೀನತ್ವದ ವಿಷಯವಾಗಿ ಅಭಿ- ಮಾನವುಳ್ಳವರಿಗೆ ವಿಚಿತ್ರವೆನಿಸಬಹುದು. ಆರ್ಯರ ಮೂಲಸ್ಥಾನವು ಭಾರತವೇ! ಋಗ್ವೇದವು ಕ್ರಿ. ಪೂ. ೧೫ ಸಾವಿರ-೨೦೦೦೦ ವರ್ಷಪೂರ್ವ ದಲ್ಲಿಯೇ ಬರೆಯಲ್ಪಟ್ಟಿದೆಯೆಂದು ಪ್ರತಿಪಾದಿಸುವ ಪ್ರೊ. ಅವಿನಾಶಚಂದ್ರ ದಾಸರಂಥ ಅನೇಕ ವಿದ್ವಾಂಸರೂ ನಮ್ಮಲ್ಲಿದ್ದಾರೆ. ಈ ಎರಡೂ ಸಿದ್ಧಾಂತಗಳಲ್ಲಿ ಅಶಕ್ಯವಾದುದು ಯಾವುದೂ ಇಲ್ಲ. ಆದರೆ ಭಾರತವೇ ಆರ್ಯರ ಮೂಲಸ್ಥಾನವೆನ್ನಲು ಪ್ರಬಲವಾದ ಆಧಾರಗಳು ಬೇಕು. ಅವರು ಹೊರನಾಡುಗಳಲ್ಲಿ ಹೇಗೆ ಪಸರಿಸಿದರೆಂಬುದಕ್ಕೆ ಸಾಧಾರವಾದ ಸಾಧನಗಳು ಬೇಕು. ಆದರೆ ಈಗ ದೊರೆತಿರುವ ಅವಶೇಷಗಳು ಈ ಮಾತನ್ನು ಸಾಕಷ್ಟು ಸಮರ್ಥಿಸುವದಿಲ್ಲ. ಆದರೆ ನಾವು ವಿವೇಚಿಸಿದ ವಿವೇಚನೆಯು ಮಾತ್ರ ಸದ್ಯಕ್ಕಂತೂ ಸಮರ್ಥನೀಯವಿದೆ.

ಈ ವಿಷಯದಲ್ಲಿ ಇನ್ನೊಂದು ಮಹತ್ವದ ಸಂಗತಿಯು ವಿಚಾರ ಣೀಯವಿದೆ. ಅತ್ಯಂತ ಪ್ರಾಚೀನಭಾರತದ ಜ್ಞಾನದ ಹಾಗು ಸುಧಾ

ರಣೆಯು ವಿಚಾರವನ್ನು ಆರ್ಯೇತರರು ಮಾಡಿದರೇ ವಿನಃ ಆರ್ಯರಲ್ಲ ವೆಂಬುದು. ಮಿಸರಿ, ಕ್ರೀಟ್, ಪಾಲಿಸ್ತಾಯಿನ, ಫಿನಿಸಿಯಾ, ಸುಮೇರಿಯಾ, ಆಶಿಯಾ ಮೊದಲಾದ ಪ್ರಾಚೀನ ರಾಷ್ಟ್ರಗಳೆಲ್ಲವೂ, ಆರ್ಯೇತರ ಸುಧಾರಣೆಯ ಕ್ಷೇತ್ರದಲ್ಲಿ ಜರ್ಮನ್ನರೂ, ಗ್ರೀಕರೂ ಹಿಂದುಗಡೆಗೆ ಬಂದಂತೆ ಆರ್ಯರೂ ಇತ್ತೀಚಿನವರೇ! ಮಾನವ ಜನಾಂಗದ ವಿಕಾಸಕ್ಕೆ ಆರ್ಯರ ಕಾಣಿಕೆಗಳೆಂದರೆ, ಹಸುಗಳ ಹಾಲನ್ನು ಉಪಯೋಗಿಸುವುದು, ಹಾಗು ವಾಹನಗಳಿಗೆ ಕುದುರೆಗಳನ್ನು ಹೂಡುವುದು. ಉಳಿದೆಲ್ಲ ಭೌತಿಕ ಜ್ಞಾನವನ್ನು ಅವರು ಆರ್ಯೇತರರಿಂದಲೇ ತೆಗೆದುಕೊಂಡರು.

ತೀರ ಇತ್ತೀಚಿನ ಸಿಂಧೂತೀರದ ಮೊಹೆಂಜೋದಾರೋ ಹಾಗು ಪಂಜಾಬದಲ್ಲಿಯ ಹರಪ್ಪಾಗಳ ಸಂಶೋಧನೆಯಿಂದ ಆರ್ಯರ ಭಾರತ ಪ್ರವೇಶಕಾಲದ ಮೇಲೆ, ಒಳ್ಳೇ ಬೆಳಕು ಬೀಳುವ ಸಂಭವವಿದೆ. ಈ ಎರಡೂ ಸ್ಥಳಗಳಲ್ಲಿ ಭೂಗತವಾದ ಅವಶೇಷಗಳನ್ನು ಸರಕಾರದ ಪುರಾಣ ವಸ್ತುಸಂಶೋಧನ ಖಾತೆಯವರು ಅಗಿದು ತೆಗೆದಿದ್ದು ಪ್ರಾಚೀನ ಕಾಲದಲ್ಲಿ ಸಿಂಧುತೀರದಲ್ಲಿ ಅತ್ಯಂತ ವೈಭವಶಾಲಿಯಾದ ಸಂಸ್ಕೃತಿಯಿತ್ತೆಂದು ಸಿದ್ಧಮಾಡಿದ್ದಾರೆ. ಪುರಾಣವಸ್ತುಸಂಶೋಧನ ಖಾತೆಯಲ್ಲಿ ಆ ಕಾಲಕ್ಕೆ ಕಾರ್ಯಮಾಡುತ್ತಿದ್ದ ಮೈ. ವಾ. ಆರ್. ಡಿ. ಬಾನರ್ಜಿಯವರು, ಮೊದಲು ಇದನ್ನು ಕಂಡುಹಿಡಿದರು. ೧೯೨೨ರಲ್ಲಿ ಇದನ್ನು ಅಗಿಯುವ ಕಾರ್ಯಕ್ಕೆ ಪ್ರಾರಂಭವಾಯಿತು. ಮುಂದೆ ಶ್ರೀ. ದೀಕ್ಷಿತ ಇವರ ಕಡೆಗೆ ಈ ಕಾರ್ಯವು ಬಂದಿತು. ಕೆಲಕಾಲದ ನಂತರ ಈ ಖಾತೆಯ ಮುಖ್ಯಾಧಿಕಾರಿಗಳಾದ ಸರ ಜಾನ್‌ಮಾರ್ಶಲ್‌ರು ಮುಖ್ಯ ಕಚೇರಿಯ ನೇತೃತ್ವದಲ್ಲಿಯೇ ಈ ಕಾರ್ಯವು ಸಾಗಬೇಕೆಂದು ನಿರ್ಣಯಿಸಿ ರಾಯ ಬಹಾದುರ ದಯಾರಾಮಸಾಹಾಜಿಯವರನ್ನು ಈ ಕಾರ್ಯಕ್ಕೆ ನಿಯಮಿಸಿದರು. ಆ ಕಾರ್ಯವು ಇನ್ನೂ ನಡೆದಿದೆ

ಮೊಹೆಂಜೋದಾರೋದಲ್ಲಿ ಭೂಗತವಾದ ೧೩ ಮೈಲು ವಿಸ್ತೀರ್ಣವುಳ್ಳ ಒಂದು ದೊಡ್ಡ ಪಟ್ಟಣವೇ ಹೊರಬಿದ್ದಿದೆ. ಅಲ್ಲಿ ಒಂದರ ಕೆಳಗೊಂದರಂತೆ ೫-೬ ಪಟ್ಟಣಗಳಿದ್ದು ಅವುಗಳಲ್ಲಿ ಮೂರು ಈಗ ಅಗಿಯಲ್ಪಟ್ಟಿವೆ. ಈ ಮೂರರಲ್ಲಿ ಎಲ್ಲಕ್ಕೂ ಕೆಳಗಿನದು ಅತ್ಯಂತ ಉತ್ಕೃಷ್ಟವಿದೆ.

ಈ ಮೂರೂ ಪಟ್ಟಣಗಳಲ್ಲಿ ಸುಟ್ಟ ಇಟ್ಟಿಗೆಗಳಿಂದ ಕಟ್ಟಿದ ಸುಂದರವಾದ ಕಟ್ಟಡಗಳೂ, ದೇವಾಲಯಗಳೂ, ಅಂಗಡಿಗಳೂ, ಸ್ನಾನಗೃಹಗಳೂ ಇರುವವಲ್ಲದೆ, ದೊಡ್ಡ ದೊಡ್ಡ ರಾಜಮಾರ್ಗಗಳೂ ಬೀದಿಗಳೂ, ಚಿಕ್ಕ ಪುಟ್ಟ ಓಣಿಗಳೂ ಇವೆ. ಇದಲ್ಲದೆ, ಮಣ್ಣು, ತಾಮ್ರ, ಹಾಗು ಕಂಚಿನ ಪಾತ್ರೆಗಳೂ, ಬೆಳ್ಳಿ ಬಂಗಾರಗಳ ಹಾಗೂ ಮುತ್ತು ರತ್ನಗಳ ಆಭರಣ ಗಳೂ, ಮೂರ್ತಿಗಳೂ ಪ್ರತಿಮೆಗಳೂ ಮನುಷ್ಯ ಹಾಗು ಪ್ರಾಣಿಗಳ ಎಲುವಿನ ಹಂದರಗಳು, ನೂರಾರು ಹೊಸ ಹೊಸ ಒಡವೆಗಳೂ ಸಂಶೋ ಧಕರಿಗೆ ದೊರೆತಿವೆ. ಇದಲ್ಲದೆ ತಾಮ್ರದ ಕತ್ತಿಗಳೂ ಅನೇಕ ಚಿತ್ರಗಳುಳ್ಳ ಪದಕಗಳೂ ಸಿಕ್ಕಿವೆ. ಅನೇಕ ಸಮಾಧಿಗಳು ಹರಪ್ಪಾದಲ್ಲಿ ಕಂಡಿವೆ. ಹೀಗೆ ಭೂಗತವಾದ ಒಂದು ಪ್ರಾಚೀನಕಾಲದ ಸುಧಾರಿಸಿದ ಸಮಾಜದ ಆಶ್ಚರ್ಯಕಾರಕ ಅವಶೇಷಗಳ ಸಂಕ್ಷಿಪ್ತ ವರ್ಣನೆಯಿದೆ.

ಮೊಹೆಂಜೋದಾರೋ ಹಾಗು ಹರಪ್ಪಗಳಲ್ಲಿಯ ಅವಶೇಷಗಳು ಒಂದೇ ಸಂಸ್ಕೃತಿಯುವೆಂದು ಸಂಶೋಧಕರ ಮತವಿದೆ. ಈ ಎರಡೂ ಪಟ್ಟಣಗಳಲ್ಲಿಯ ಅಂತರವು ೪೫೦ ಮೈಲು ಇದ್ದು, ಸಿಂಧೂತೀರದಲ್ಲಿ ಉದಯವಾದ ಈ ರಾಷ್ಟ್ರವು ವಿಸ್ತಾರವಾದದ್ದಿರಬೇಕು. ಈ ಸಂಸ್ಕೃ ತಿಯು ಸುಮೇರಿ,ಬಾಬಿಲೋನ ಸಂಸ್ಕೃತಿಯನ್ನು ಬಹುಮಟ್ಟಿಗೆ ಹೋಲು ತ್ತದೆ. ಇದನ್ನು ಕಂಡು ಸರ್ ಜಾನ್‌ಮಾರ್ಶಲರು ಸುಮೇರಿ ಸಂಸ್ಕೃತಿಯ ಶಾಖೆಯೋ ಈ ಸಂಸ್ಕೃತಿಯು ಇರಬಹುದೆಂದು ತರ್ಕಿಸಿದ್ದರು. ಆದರೆ ಹೋಲಿಕೆಯಂತೆ ವಿಷಮತೆಯೂ ಹೆಚ್ಚಾಗಿ ಸಿಗಹತ್ತಿದ್ದನ್ನು ಕಂಡು ಇದು ಸ್ವತಂತ್ರ ಸಂಸ್ಕೃತಿ ಎಂಬ ನಿರ್ಣಯಕ್ಕೆ ಬಂದು, ಅದಕ್ಕೆ ಸಿಂಧೂ ಸಂಸ್ಕೃತಿ (Indus culture)ಎಂದು ಹೆಸರಿಟ್ಟರು. ಸುಮೇರಿ ಸಂಸ್ಕೃ ತಿಗೂ ಸಿಂಧೂಸಂಸ್ಕೃತಿಗೂ ವಿಶೇಷ ಬಳಿಕೆ ಇರಬೇಕೆಂದು ಸಿದ್ಧಾಂತ ಮಾಡಿದರು. ಮೊಹೆಂಜೋದಾರೋದಲ್ಲಿ ಸಿಕ್ಕ ಗೋದಿಯು ಪಂಜಾಬದಲ್ಲಿ ಈಗ ಬೆಳೆಯುವ ಗೋದಿಯಂತೆಯೇ ಇದೆ. ಗೋದಿಯನ್ನು ಆಹಾರಕ್ಕೆ ಉಪಯೋಗಿಸುತ್ತಿದ್ದರಲ್ಲದೆ ದನಗಳ, ಕುರಿಗಳ ಮಾಂಸವನ್ನೂ ಅವರು ತಿನ್ನುತ್ತಿರಬೇಕು. ಹಾಗೂ ಅವರು ಮಚ್ಛಾಹಾರಿಗಳೂ ಇರಬೇಕು. ಎತ್ತು, ಆಕಳು, ಕುರಿ, ನಾಯಿ, ಕುದುರೆ, ಆನೆಗಳನ್ನು ಅವರು ಸಾಕುತ್ತಿರ

ಬೇಕು. ಬೆಳ್ಳಿ-ಬಂಗಾರ ತಾಮ್ರ-ಕಂಚುಗಳನ್ನು ಅವರು ಅರಿತಿದ್ದರು. ನೂಲುವ ಕಲೆಯೂ ಅವರಿಗೆ ಗೊತ್ತಿದ್ದಿತು. ಚಿತ್ರಗಳುಳ್ಳ ಅನೇಕ ಪದಕಗಳು ದೊರೆತುದರಿಂದ ಒಂದು ಬಗೆಯ ಚಿತ್ರಲಿಪಿಯು ಅಲ್ಲಿ ಪ್ರಚಾರದಲ್ಲಿತ್ತೆಂದು ಊಹಿಸುತ್ತಾರೆ. ಆದರೆ ಈ ಲಿಪಿಯು ಇನ್ನೂ ಓದಲ್ಪಟ್ಟಿಲ್ಲ. ಈ ಜನರ ಧರ್ಮ ಹಾಗು ದೇವತೆಗಳು ದ್ರಾವಿಡರಂತೆಯೂ ಸುಮೇರಿಯರಂತೆಯೂ ಇರುವುವೆಂದು ಮಾರ್ಶಲರು ತಮ್ಮ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಆರ್ಯರ ಯಜ್ಞಸಂಸ್ಥೆ ಹಾಗೂ ಇಂದ್ರಾದಿದೇವತೆಗಳ ಸುಳುವು ಕೂಡ ಈ ಸಂಸ್ಕೃತಿಯಲ್ಲಿ ಕಂಡುಬರುವುದಿಲ್ಲ. ಅಂದಮೇಲೆ ಈ ಸಂಸ್ಕೃತಿಯು ಆರ್ಯರದಂತೂ ಅಲ್ಲವೇ ಅಲ್ಲ. ಆರ್ಯರು ಭಾರತಕ್ಕೆ ಬರುವುದಕ್ಕಿಂತ ಮೊದಲಿಗಿರಬೇಕೆಂದು ಮೇಲೆಯೇ ಕಾಣುತ್ತದೆ. ಆರ್ಯರು ಭಾರತಕ್ಕೆ ಬಂದನಂತರದ ಸಂಸ್ಕೃತಿಯು ಇದಾಗಿದ್ದರೆ, ಅವರ ಸಂಸ್ಕೃತಿಯ ಪ್ರಭಾವವು ಇದರಲ್ಲಿ ಕಂಡುಬರಲೇಬೇಕಿತ್ತು.

ಬಾಬಿಲೋನ ಸಂಸ್ಕೃತಿಯ ವಿಶಿಷ್ಟ ಕಾಲದ ಕುರುಹುಗಳನ್ನು ಸಿಂಧೂಸಂಸ್ಕೃತಿಯ ಕುರುಹುಗಳು ಹೆಚ್ಚಾಗಿ ಹೋಲುವುದರಿಂದ ಈ ಸಂಸ್ಕೃತಿಯು ಕ್ರಿ. ಪೂ. ೨೭೦೦ರದಿರಬೇಕೆಂದು ಮಾರ್ಶಲರು ಗೊತ್ತುಮಾಡಿದ್ದಾರೆ. ಈ ಸಿದ್ಧಾಂತವು ಸತ್ಯವಾದರೆ ಆರ್ಯರು ಕ್ರಿ. ಪೂ. ೨೭೦೦ರಕ್ಕಿಂತ ಮೊದಲು ಭಾರತಕ್ಕೆ ಬಂದಿರಲಿಲ್ಲವೆಂಬ ಅನುಮಾನವು ಹೊರಡುವುದು. ಈ ಮಾತು ನಮ್ಮ ಸಿದ್ಧಾಂತಕ್ಕೆ ಬಲವನ್ನೀಯುವುದು. ಆರ್ಯರು ಮತ್ತೊಂದು ದಿಕ್ಕಿನಿಂದ ಭಾರತಕ್ಕೆ ಬಂದಿರುವರೆಂದು ಎಲ್ಲಿಯ ವರೆಗೆ ಸಿದ್ಧವಾಗಿಲ್ಲವೋ ಅಲ್ಲಿಯ ವರೆಗೆ, ಸಿಂಧೂತೀರಕ್ಕೆ ಕ್ರಿ. ಪೂ. ೨೭೦೦ರ ವರೆಗೆ ಆರ್ಯರು ಬಂದಿರಲಿಲ್ಲವೆಂಬ ಮಾತನ್ನು ನಾವು ಒಪ್ಪಲೇಬೇಕು.

ಒಂದು ವೇಳೆ ಈ ಸಂಸ್ಕೃತಿಯು ಆರ್ಯರಿಂದಲೇ ನಾಶವಾಗಿರಬೇಕು. ಯಾಕಂದರೆ, ಅದು ಸೈನ್ಯವನ್ನು ಆಶ್ರಯಿಸಿರಲಿಲ್ಲವೆಂದು ಮಾರ್ಶಲರು ತರ್ಕಿಸುತ್ತಾರೆ.

ಭಾರತದಲ್ಲಿ ವಾಸಿಸುತ್ತಿದ್ದ ಆರ್ಯಪ್ರಾಚೀನ ದ್ರಾವಿಡ ಸಂಸ್ಕೃತಿಯೂ ಸಿಂಧೂಸಂಸ್ಕೃತಿಯೂ ಒಂದೆಯೇ ? ಅಥವಾ ಬೇರೆಯೇ ? ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟುವುದು. ಈ ವಿಷಯವಾಗಿ ನಿಶ್ಚಿತ ಮತ

ವನ್ನು ಈಗ ಹೇಳಲು ಶಕ್ಯವಿಲ್ಲ. ಸಿಂಧೂಸಂಸ್ಕೃತಿಯ ಅಭ್ಯಾಸ ಮಾಡುತ್ತಿರುವ ಸರ್ ಜಾನ್ ಮಾರ್ಶಲರ ಪುಸ್ತಕವು ಹೊರಬಿದ್ದ ಮೇಲೆಯೇ ಈ ಪ್ರಶ್ನೆಯ ಮೇಲೆ ಬೆಳಕು ಬೀಳುವುದು *

ನಿಜವಾದ ಜ್ಞಾನವಾಗಬೇಕೆಂಬುದೇ ನಮ್ಮ ಬರೆವಣಿಗೆಯ ಉದ್ದೇಶವು. ಪ್ರಾಚೀನತ್ವದ ಕೇವಲ ಜೊಳ್ಳು ಅಭಿಮಾನವು ಒಳಿತಲ್ಲ. ಕೇವಲ ಹಿರಿಯ ರಿರುವರೆಂದು ಯಾರೂ ವ್ಯವಹಾರದಲ್ಲಿ ವ್ಯಕ್ತಿಯನ್ನು ಪೂಜಿಸುವುದಿಲ್ಲ. ಆ ವ್ಯಕ್ತಿಯಲ್ಲಿಯ ಗುಣಗಳೇ ಪೂಜ್ಯತೆಗೆ, ಅಭಿಮಾನಕ್ಕೆ ಕಾರಣ. ವ್ಯಕ್ತಿ ಜೀವನದಲ್ಲಿಯ ಈ ಸಿದ್ಧಾಂತವೇ ರಾಷ್ಟ್ರಕ್ಕೂ ಹತ್ತುವುದು. ಆದುದ ರಿಂದ ನಮ್ಮ ರಾಷ್ಟ್ರದ ಪ್ರಾಚೀನತ್ವದ ವಿಷಯವಾಗಿ ಮರಗುವ ಕಾರಣ ವಿಲ್ಲ. ಬುದ್ಧಿವಂತಿಕೆಯು ವಯಸ್ಸನ್ನು ಅವಲಂಬಿಸಿಲ್ಲವೆಂಬುದನ್ನು ಮರೆಯಲಾಗದು. ಆದುದರಿಂದ ನಮ್ಮ ರಾಷ್ಟ್ರದ ಜ್ಞಾನವೂ ಕರ್ತೃತ್ವ ಶಕ್ತಿಯೂ ಬೆಳೆಯುವಂತೆ ಮಾಡುವುದರಲ್ಲಿಯೇ ನಮ್ಮ ಬೆಳವಣಿಗೆಯಿದೆ.

ಮೇಲಿನ ವಿವರಣೆಯಿಂದ ಭಾರತದ ಪ್ರಾಚೀನತ್ವಕ್ಕೇನು ಭಂಗ ಬರುವುದಿಲ್ಲ. ಅತ್ಯಂತ ಪ್ರಾಚೀನಕಾಲದಲ್ಲಿಯೇ ಭಾರತವು ಸುಸಂಸ್ಕೃತ ವಿತ್ತೆಂದು ಮೊಹೆಂಜೋದಾರೋವು ಸಾರುತ್ತಲಿದೆ. ಆದರೆ ಇದರಿಂದ ಆರ್ಯರ ಪ್ರಾಚೀನತ್ವದ ಕಲ್ಪನೆಯು ಮಾತ್ರ ಕುಸಿದುಬೀಳುವುದು. ಇದರಿಂದ ಆರ್ಯರ ಬೆಲೆಯೂ ಕಡಿಮೆಯಾಗುವುದಿಲ್ಲ. ಅವರು ಭಾರತಕ್ಕೆ ಬಂದಮೇಲೆ, ಆ ಕಾಲಕ್ಕೆ ಜಗತ್ತನ್ನೇ ಬೆರಗುಗೊಳಿಸುವಂಥ ಶೋಧ ಗಳನ್ನು ಮಾಡಿ ಸಮಾಜವು ಸರ್ವಾಂಗಸುಂದರವಾಗುವಂತೆ ಮಾಡಿದರು. ಅನೇಕ ಅಪೂರ್ವ ಶಾಸ್ತ್ರಗಳಿಗೆ, ತಾತ್ವಿಕ ವಿಚಾರಗಳಿಗೆ ಜನ್ಮಕೊಟ್ಟರು. ಅವರ ವಿಚಾರಗಳನ್ನು ಶಾಸ್ತ್ರಗಳನ್ನು ತಿಳಿದುಕೊಳ್ಳುವ ಯೋಗ್ಯತೆಯು ಕೂಡ ಪಾಶ್ಚಾತ್ಯರಿಗೆ ೧೫೦ ವರ್ಷಗಳ ಹಿಂದೆ ಇರಲಿಲ್ಲ. ಅಂತಹ ಶಾಸ್ತ್ರ ಗಳಲ್ಲಿ ಭಾಷಾಶಾಸ್ತ್ರವೂ ಒಂದು. ಆದರ ಇತಿಹಾಸವನ್ನು ಹಿಂದೆಯೇ

* ಡಾ. ಹಾಲ್, ಫಾದರ ಹೀರಾಸ ಮೊದಲಾದವರು ಈ ಸಂಸ್ಕೃತಿಯು ದ್ರಾವಿಡ ಸಂಸ್ಕೃತಿಯದೇ ಎಂಬ ನಿಶ್ಚಯಕ್ಕೆ ಬಂದಿದ್ದಾರೆ. ಮಾರ್ಶಲರ ಒಲವೂ ಕೂಡ ಈ ಕಡೆಗೇ ಇದೆ.

ಹೇಳಿದ್ದೇವೆ. ತತ್ವಜ್ಞಾನದಲ್ಲಿ ಅವರು ಮಾಡಿದ ಪ್ರಚಂಡವಾದ ಪ್ರಗತಿಯು ಈಗಿನಕಾಲದ ಪಾಶ್ಚಾತ್ಯ ತತ್ವಜ್ಞಾನಿಗಳಿಗೆ ಕೂಡ ಆಶ್ಚರ್ಯವನ್ನುಂಟುಮಾಡುತ್ತಲಿದೆ. ಜ್ಯೋತಿಷ, ಗಣಿತ, ವೈದ್ಯಕಿಶಾಸ್ತ್ರಗಳಲ್ಲಿಯೂ ಕೂಡ ಆರ್ಯರು ವಿಲಕ್ಷಣವಾದ ಪ್ರಗತಿಯನ್ನು ಮಾಡಿದ್ದರು. ಆರ್ಯರು ನಿರ್ಮಿಸಿದ ಚಾತುರ್ವರ್ಣ್ಯವ್ಯವಸ್ಥೆ ಹಾಗು ಜಾತಿ ಸಂಸ್ಥೆಗಳು ಅಪೂರ್ವವಾದವುಗಳು. ಆ ಕಾಲಕ್ಕೆ ಅವು ರಾಷ್ಟ್ರದ ಪ್ರಗತಿಯ ಸಾಧನಗಳಾಗಿದ್ದವೆಂದು ಖಂಡಿತವಾಗಿ ಹೇಳಬಹುದು.

ಭಾರತಿಯ ಆರ್ಯರ ಸಂಸ್ಕೃತಿಯನ್ನು ವಿಚಾರಮಾಡುವ ಮುಂದೆ, ಒಂದು ಕೊರತೆಯು ಎದ್ದುಕಾಣುತ್ತದೆ. ಅದೆಂದರೆ ಆ ಸಂಸ್ಕೃತಿಯ ಕುರುಹುಗಳು ದೊರೆಯದಿರುವದು. ಇತರ ದೇಶಗಳಲ್ಲಿ ಪ್ರಾಚೀನ ಕಾಲದ ದೇವಾಲಯಗಳು, ಅರಮನೆಗಳು, ಶಸ್ತ್ರಾಸ್ತ್ರಗಳು ಮೊದಲಾದ ಅವಶೇಷಗಳು ದೊರೆಯುವಂತೆ, ಕ್ರಿ. ಪೂ. ೫೦೦ ರ ಮುಂಚಿನ ಅವಶೇಷಗಳು ಇಲ್ಲಿ ದೊರೆಯುವದಿಲ್ಲ. ದೊರೆತ ಮೊಹೆಂಜೋದಾರೋ ಮೊದಲಾದವು ಆರ್ಯೇತರ ಸಂಸ್ಕೃತಿಯ ಕುರುಹುಗಳೆಂದು ಗೊತ್ತಾಗಿದೆ. ಇದರಿಂದ ಆರ್ಯಸಂಸ್ಕೃತಿಯ ಕೊರತೆಯು ಹಾಗೆಯೇ ಉಳಿದಿದೆ. ಇಷ್ಟರಿಂದಲೇ ಕೆಲವರು ಆರ್ಯರ ಪ್ರಾಚೀನತ್ವವನ್ನು ಒಪ್ಪುವದಿಲ್ಲ. ಹಲವರು ಆರ್ಯರ ಕಟ್ಟಡಗಳೆಲ್ಲ ಕಟ್ಟಿಗೆಯವಿರಬೇಕು, ಅವು ನಾಶವಾಗಿರಬೇಕು ಎಂದು ತರ್ಕಿಸುವರು. ಇನ್ನೂ ಕೆಲವರು ಅವರಿಗೆ ವ್ಯಾವಹಾರಿಕ ಜ್ಞಾನವು ಇತರರಿಗಿಂತ ಕಡಿಮೆ ಇರಬೇಕೆಂದು ಊಹಿಸುವರು. ಆದರೆ, ಆ ಆರ್ಯಸಂಸ್ಕೃತಿಯ ಕುರುಹುಗಳು ದೊರೆಯದೆ ಸಂಶೋಧಕರ ಕಣ್ಣಿಗೆ ಇಂಗುಹಚ್ಚಿ ಭೂಗರ್ಭದಲ್ಲಿಯೇ ಏಕೆ ಇರಬಾರದು ? ಇದನ್ನು ಯಾರು ಹೇಳಬಲ್ಲರು !

ಒಟ್ಟಿನಲ್ಲಿ ಆರ್ಯರ ಮನೋವೃತ್ತಿಯನ್ನು ನೋಡಿದರೆ, ವಿಶಾಲ ದೃಷ್ಟಿಯಿಂದ ತಾತ್ವಿಕ ಹಾಗು ಶಾಸ್ತ್ರೀಯ ರೀತಿಯಿಂದ ವಿಚಾರ ಮಾಡುವದರ ಕಡೆಗೇ ಅವರ ಒಲವಿತ್ತೆಂದು ಹೇಳಬಹುದು. ಈ ಯೋಗ್ಯತೆಯನ್ನು ಮಾನವ ಜನಾಂಗದ ಯಾವ ರಾಷ್ಟ್ರವೂ ಇನ್ನೂ ಪ್ರಕಟಿಸಿಲ್ಲ.

ಚೀನದಲ್ಲಿಯೂ ವಿಶಾಲದೃಷ್ಟಿ ಹಾಗು ಶಾಸ್ತ್ರೀಯ ಬುದ್ಧಿಯು ಪ್ರಾಚೀನಕಾಲದಲ್ಲಿಯೇ ಉದಯವಾಗಿತ್ತೆಂದು ಹೇಳುವರು. ಆದರೆ ಈ ಬಗ್ಗೆ ವಿದ್ವಾಂಸರಲ್ಲಿಯೇ ಭಿನ್ನಾಭಿಪ್ರಾಯಗಳಿವೆ. ಮಿಸರ, ಕ್ರೀಟ್ ಮೊದಲಾದ ಪ್ರಾಚೀನ ರಾಷ್ಟ್ರಗಳ ಸಂಸ್ಕೃತಿಗೂ ಆರ್ಯಸಂಸ್ಕೃತಿಗೂ ಇರುವ ಮಹತ್ವವಾದ ಅಂತರವೇ ಇದು. ಆರ್ಯೇತರ ರಾಷ್ಟ್ರಗಳು ಕೈಗಾರಿಕೆಗಳಲ್ಲಿಯೂ, ಜೀವನೋಪಯುಕ್ತ ಸಾಧನಗಳನ್ನು ನಿರ್ಮಿಸುವ ಕಲೆಯಲ್ಲಿಯೂ ಮುಂದುವರಿದಿದ್ದವೆಂದು ಹಿಂದೆಯೇ ಹೇಳಿದ್ದೇನೆ. ಆದರೆ, ಈ ದೃಷ್ಟಿಯ ಮೂಲವೇನು? ಇಲ್ಲಿ ನಡೆಯುವ ಘಟನೆಗಳ ಕಾರಣವು ಯಾವುದು? ಕರ್ತೃವು ಯಾರು? ಎಂಬ ಮೂಲ ಸಿದ್ಧಾಂತಗಳ ಕಡೆಗೆ ಅವರ ದೃಷ್ಟಿಯು ಹರಿದಿತ್ತೆಂದು ಹೇಳಲು ಆಧಾರಗಳಿಲ್ಲ. ಸೃಷ್ಟವಸ್ತುಗಳ ಏಕೀಕರಣ, ಅವುಗಳ ವ್ಯಾಖ್ಯೆಗಳನ್ನು ನಿರ್ಮಿಸೋಣ, ಅನೇಕ ಸಂಗತಿಗಳಿಂದ ಸಾಮಾನ್ಯ ಸಿದ್ಧಾಂತಗಳನ್ನು ಕಟ್ಟೋಣ ಇವೇ ಮೊದಲಾದ ಶಾಸ್ತ್ರೀಯ ಕ್ರಿಯೆಯು ಆರ್ಯೇತರರಿಗೆ ಗೊತ್ತಿದ್ದಂತೆ ತೋರುವದಿಲ್ಲ. ಪ್ರತಿಯೊಂದು ವಸ್ತುವಿನ ಕಾರ್ಯ ಕಾರಣ ಸಂಬಂಧವನ್ನು ಅರಿಯುವ. ಇದು ಹೀಗೇಕೆ? ಈ ಕ್ರಿಯೆಯ ಕಾರಣವೇನು? ಎಂಬ ಚಿಕಿತ್ಸಕ-ಬುದ್ಧಿಯು ಗ್ರೀಕರಲ್ಲಿಯೂ ಹೆಚ್ಚಾಗಿ ಭಾರತೀಯ ಆರ್ಯರಲ್ಲಿಯೂ ಮಾತ್ರ ಕಂಡುಬರುತ್ತದೆ. ಇಜಿಪ್ತ ಮೊದಲಾದ ದೇಶಗಳಲ್ಲಿ ಕಾಣುವದಿಲ್ಲ. ಇದಕ್ಕೆ ಒಂದು ಸಣ್ಣ ಉದಾಹರಣವೇ ಸಾಕು. ಮಿಸರ ಬಾಬಿಲೋನ ರಾಷ್ಟ್ರಗಳು ಸಾವಿರಾರು ವರ್ಷ ರಾಜ್ಯವಾಳಿದವು, ಸಾಮ್ರಾಜ್ಯವನ್ನು ಕಟ್ಟಿದವು. ಅಂದಮೇಲೆ ರಾಜ್ಯಭಾರ ಮಾಡುವ ಕಲೆಯು ಅವರಿಗೆ ಗೊತ್ತಿಲ್ಲವೆಂದು ಹೇಗನ್ನಬೇಕು? ಸಾವಿರಾರು ವರ್ಷರಾಜ್ಯವಾಳಿದರೂ, ರಾಜ್ಯಶಾಸ್ತ್ರ ನಿರ್ಮಾಣಮಾಡಲು ಅವರು ಸಮರ್ಥರಾಗಲಿಲ್ಲ. ಆದರೆ ಅದೇ ಚಿಕಿತ್ಸಕ-ಬುದ್ಧಿಯ ಗ್ರೀಕರು ೨೦೦ ವರ್ಷಗಳಲ್ಲಿಯೇ ರಾಜ್ಯಶಾಸ್ತ್ರವನ್ನು ನಿರ್ಮಿಸಿದರು. ಅದರಂತೆಯೇ ಸಾವಿರಾರು ವರ್ಷಗಳವರೆಗೆ ಬಾಬಿಲೋನ ಮೊದಲಾದ ರಾಷ್ಟ್ರಗಳಲ್ಲಿ ಧರ್ಮವು ಮೂಢನಂಬಿಕೆ, ಶಕುನ ಮೊದಲಾದವುಗಳಿಂದಲೇ ಸಾಗಿತ್ತು. ಆದರೆ ಆರ್ಯರು ತಮ್ಮ ಯಜ್ಞಸಂಸ್ಥೆಯಲ್ಲಿ ತೀವ್ರವೇ ಉತ್ಕ್ರಾಂತಿ

ಯನ್ನು ಮಾಡಿ ಉಪನಿಷತ್ತುಗಳಂತಹ ಉದಾತ್ತ ತತ್ವಜ್ಞಾನವನ್ನು ನಿರ್ಮಿ ಸಿದರು. ನಿರ್ಹೇತುಕ ರೀತಿಯಿಂದ ಜ್ಞಾನಕ್ಕಾಗಿ ಜ್ಞಾನವನ್ನು ಸಂಪಾ ದಿಸುವ ಕಲ್ಪನೆಯು ಕೂಡ ಆರ್ಯೇತರರಿಗೆ ಹೊಳೆದಿತ್ತೆಂದು ಹೇಳಲಿಕ್ಕೆ ಬರುವುದಿಲ್ಲ. ಈ ಜೀವಿಸಕ್ಕಿಂತ ಭಿನ್ನವಾದ, ವಿಶಾಲವಾದ, ಪವಿತ್ರ ವಾದ ತಾತ್ವಿಕ ಜ್ಞಾನವೊಂದಿದೆ ಎಂಬ ಅರಿವು ಕೂಡ ಈ ರಾಷ್ಟ್ರಗಳಿಗೆ ಇದ್ದಂತೆ ತೋರುವುದಿಲ್ಲ. ಯಾಕಂದರೆ ಇದ್ದ ಬಗ್ಗೆ ಎಲ್ಲಿಯೂ ಇತಿಹಾಸ ದಲ್ಲಿ ಉಲ್ಲೇಖವಿಲ್ಲ.

ಆದುದರಿಂದಲೇ ಪಾಶ್ಚಾತ್ಯ ರಾಷ್ಟ್ರಗಳು ತಮ್ಮ ಎಲ್ಲ ಜ್ಞಾನದ ಹಾಗು ಶಾಸ್ತ್ರೀಯ ವಿಚಾರಗಳ ಜನನಿಯು ಗ್ರೀಸವೆಂದು ತಿಳಿಯುತ್ತಾರೆ. ತಮ್ಮ ಸುಧಾರಣೆಯು ಇಜಿಪ್ತದಿಂದಲೂ, ಶಾಸ್ತ್ರೀಯ ಜ್ಞಾನವು ಗ್ರೀಸ ದಿಂದಲೂ ಪ್ರಾರಂಭವಾದವೆಂದು ಪಾಶ್ಚಾತ್ಯರು ನಂಬುತ್ತಾರೆ. ಭಾರ ತೀಯ ಸಂಸ್ಕೃತಿಯೊಡನೆ ಅವರ ಸಂಬಂಧವು ಬರದಿರುವುದೇ ನಮ್ಮ ಸಂಬಂಧವನ್ನು ಹೇಳದಿರಲು ಕಾರಣವು.

# ನಾಲ್ಕನೆಯ ಮೆಟ್ಟಿಲು



## ಜ್ಞಾನಮಾರ್ಗದಲ್ಲಿ ಮಾನವ ಮುನ್ನಡೆ.

### ಐತಿಹಾಸಿಕ ಕಾಲ

ಜಗತ್ತಿನ ಪ್ರಗತಿಯ ಇತಿಹಾಸವನ್ನು ನೋಡನೋಡುತ್ತ ನಾವು ಕ್ರಿ. ಪೂ. ೬೦೦ರ ವರೆಗೆ ಬಂದಿದ್ದೇವೆ. ಅಂದರೆ ಪಾಶ್ಚಾತ್ಯರ ದೃಷ್ಟಿಯಿಂದ ಅಶಾಸ್ತ್ರೀಯ ಹಾಗು ಅವ್ಯವಸ್ಥಿತ ಜೀವನದ ಯುಗವು ಮುಗಿದು ಸುವ್ಯವಸ್ಥಿತ ಜೀವನವು ಪ್ರಾರಂಭವಾಗುವ ಸಂಧಿಕಾಲವನ್ನು ತಾವು ಸಂಧಿಸಿದಂತಾಯಿತು. ಗ್ರೀಕರು ಸುಧಾರಣೆಯ ಸಾರಥ್ಯವನ್ನು ವಹಿಸಿ ಇಲ್ಲಿಂದ ಮುಂದೆ ಜ್ಞಾನಮಾರ್ಗದಿಂದ ಪ್ರಗತಿಯಲ್ಲಿ ಅಗ್ರೇಸರರಾದರು. ಈ ಜ್ಞಾನವಿಕಾಸದ ಇತಿಹಾಸವನ್ನು ಸಾದ್ಯಂತವಾಗಿ ವಿಚಾರಿಸುವದಕ್ಕಿಂತ, ಜೀವುಗಾಲುಗಳನ್ನಿಕ್ಕುತ್ತ ಮುಖ್ಯ ಸಂಗತಿಗಳನ್ನಷ್ಟೇ ನೋಡುತ್ತ ನಾವು ಮುಂದೆ ಸಾಗಬೇಕಾಗಿದೆ.

### ಗ್ರೀಕರ ಕಾಣಿಕೆ

ಎಲ್ಲಕ್ಕೂ ಮೊದಲು ಗ್ರೀಕ ಇತಿಹಾಸದಲ್ಲಿ ನಡೆದ ಮಹತ್ವದ ಘಟನೆಗಳ ಕಾಲವನ್ನು ಲಕ್ಷ್ಯದಲ್ಲಿಡುವುದು ಅವಶ್ಯವಿದೆ. ಗ್ರೀಕರು ಪ್ರಾಚೀನ ಪರ್ಶಿಯನ್ನರೊಡನೆ ಹೋರಾಡಿ ಕ್ರಿ. ಪೂ. ೪೭೯ರಲ್ಲಿ ಸ್ವತಂತ್ರರಾದರು. ಮುಂದೆ ಗ್ರೀಸದಲ್ಲಿ ೫೦–೬೦ ವರ್ಷಗಳ ವರೆ ಅಥೆನ್ಸ ಪಟ್ಟಣವು ಗ್ರೀಸದಲ್ಲಿ ತನ್ನ ಪ್ರಭುತ್ವವನ್ನು ನಡೆಯಿಸಿತು. ಆಮೇಲೆ ಕೆಲವು ವರ್ಷಗಳ ವರೆಗೆ, ಸ್ಪಾರ್ಟಾ ಹಾಗು ಥೀಬ್ಸ ಪಟ್ಟಣಗಳು ಗ್ರೀಸವನ್ನು ಆಳಿದವು. ಮುಂದೆ ಅಂತಃಕಲಹದಿಂದ ನಿರ್ವೀರ್ಯವಾದ ಈ ಪಟ್ಟಣಗಳು ಕ್ರಿ. ಪೂ. ೩೩೮ರಲ್ಲಿ ಮ್ಯಾಸಿಡೋನಿಯಾದ ರಾಜನಾದ ಫಿಲಿಪನ ತುತ್ತಾ

ದನು. ಇವನ ಮಗನಾದ ಅಲೆಕ್ಸಾಂಡರನು ಪೂರ್ವದಿಕ್ಕಿನಲ್ಲಿ ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಅವನು ಕ್ರಿ. ಪೂ. ೩೨೩ರಲ್ಲಿ ಮರಣ ಹೊಂದಿದನು. ಮುಂದೆ ನೂರು ನೂರಾಐವತ್ತು ವರ್ಷಗಳ ನಂತರ ಗ್ರೀಸವು ರೋಮುಸಾಮ್ರಾಜ್ಯಕ್ಕೆ ಸೇರಿತು.

ಮೊದಮೊದಲು ಅಥೆನ್ಸ ಪಟ್ಟಣಕ್ಕೆ ಅಷ್ಟು ಮಹತ್ವವಿರಲಿಲ್ಲ. ಸದ್ಯಕ್ಕೆ ಯುರೋಪದಲ್ಲಿರುವ ಗ್ರೀಸದಷ್ಟೇ ಆಗಿನ ಕಾಲಕ್ಕೆ ಗ್ರೀಸದ ಕ್ಷೇತ್ರವಿರಲಿಲ್ಲ. ಗ್ರೀಕರು ಆಶಿಯಾಮೈನರದ ದಂಡೆಯ ಪ್ರದೇಶ ವನ್ನೆಲ್ಲ ವ್ಯಾಪಿಸಿದ್ದರಲ್ಲದೆ ಅಲ್ಲಿ ಅವರ ಮಹತ್ವವಾದ ಪಟ್ಟಣಗಳೂ ಇದ್ದುವು. ಏಜಿಯನ್ ಸಮುದ್ರದಲ್ಲಿರುವ ದ್ವೀಪಗಳು ಕೂಡ ಗ್ರೀಕ ರವು ಇದ್ದುವು. ಈ ಪೂರ್ವದಿಕ್ಕಿನ ಗ್ರೀಕರಿಗೆಲ್ಲ 'ಅಯೋನಿಯನ್' ಎಂದು ಅನ್ನುತ್ತಿದ್ದರು ಇವರಿಗೂ ಭಾರತೀಯರಿಗೂ ಕ್ರಿ.ಪೂ. ೧ಸಾವಿರ ವರ್ಷದಿಂದಲೂ ವ್ಯಾಪಾರದ ಸಂಬಂಧವಿರಬೇಕು. ಇದರಿಂದಲೇ 'ಯವನ' ಶಬ್ದವು ನಮ್ಮಲ್ಲಿ ರೂಢವಾಯಿತು. ಪೂರ್ವಕ್ಕಿರುವ ಬಾಬಿಲೋನ, ಹಾಗು ಫಿನಿಸಿಯಾಗಳ ಸಂಸರ್ಗದಿಂದ ವಿದ್ಯೆ ಹಾಗು ಕಲೆಗಳ ಪ್ರಾದು ರ್ಭಾವವು ಮೊದಲು ಈ ಆಶಿಯಾಮೈನರದಲ್ಲಿದ್ದ ಗ್ರೀಕರಲ್ಲಿ ಆಯಿತು. ಗ್ರೀಕರಲ್ಲಿ ಮೊದಲನೆಯ ಶಾಸ್ತ್ರಜ್ಞನಾದ **ಥೇಲ್ಸನು** (ಕ್ರಿ. ಪೂ. ೬೪೦-೫೪೬) ಆಶಿಯಾಮೈನರದಲ್ಲಿಯೇ ಹುಟ್ಟಿದನು. ಇವನು ಜ್ಯೋತಿಷ ಹಾಗು ಭೂಮಿತಿ ಶಾಸ್ತ್ರಗಳಲ್ಲಿ ವಿಶೇಷವಾಗಿ ಪ್ರಗತಿಯನ್ನು ಮಾಡಿದ ನೆಂದು ಅನ್ನುತ್ತಾರೆ. ಆ ಕಾಲಕ್ಕೆ ಭೂಮಿತಿಯ ವ್ಯಾವಹಾರಿಕ ಜ್ಞಾನವು ಇಜಿಪ್ತ ಜನರಿಗೆ, ಹಾಗು ಜ್ಯೋತಿಷದ ಜ್ಞಾನವು ಬಾಬಿಲೋನ ಜನರಿಗೆ ಇದ್ದಿತು. ಅವರಿಂದ ಆ ಜ್ಞಾನಪಡೆದು, ಅವುಗಳಿಗೆ ಶಾಸ್ತ್ರೀಯ ಸ್ವರೂಪ ವನ್ನು ಕೊಟ್ಟು ಥೇಲ್ಸನು ಶಾಸ್ತ್ರಗಳನ್ನು ನಿರ್ಮಿಸಿರಬೇಕು. ಇದಲ್ಲದೆ ಸೂರ್ಯಸಂಪಾತ(equinoxes)ಹಾಗೂ ಸಂಕ್ರಮಣ(Solsitices) ಗಳ ಶೋಧವನ್ನೂ ಇವನು ಮಾಡಿದನೆಂದು ಪ್ರಸಿದ್ಧಿಯಿದೆ.

ಇತ್ತ ಆಶಿಯಾಮೈನರದಲ್ಲಿ ಗ್ರೀಕರು ಹಬ್ಬಿದಂತೆ, ಅತ್ತ ಇಟಲಿ,

ಹಾಗು ಸಿಸಲೀ ದ್ವೀಪಗಳಲ್ಲಿ ಕೂಡ ವ್ಯಾಪಾರದ ನಿಮಿತ್ತವಾಗಿ ಕ್ರಿ. ಪೂ. ೭೦೦ರ ಸುಮಾರಕ್ಕೆ ವಸಹಾತುಗಳನ್ನು ಮಾಡಿಕೊಂಡರು. ಪ್ರಖ್ಯಾತ ಗ್ರೀಕ ತತ್ವಜ್ಞಾನಿಯೆಂದು ಹೆಸರಾದ 'ಪಾಯಥಗೋರಾಸನು' ಈ ಪ್ರದೇಶದವನೇ. 'ಕಾಟಕೋನದ ಎರಡೂ ಮಗ್ಗಲಲ್ಲಿರುವ ಚೌರಸಗಳು ಕಾಟಕೋನದ ಎದುರಿಗಿರುವ ಮೂರನೆ ಮಗ್ಗಲಿನ ಚೌರಸಿಗೆ ಸರಿ ಇರುತ್ತದೆ' ಎಂಬ ಸಿದ್ಧಾಂತವು ಇವನ ಹೆಸರಿನಿಂದಲೇ ಭೂಮಿತಿಯಲ್ಲಿ ಪ್ರಸಿದ್ಧವಿದೆ. ಆದರೆ ಇದೇನೂ ಅವನ ಅಂತಹ ಮಹತ್ವದ ಕಾರ್ಯವಲ್ಲ. ಅಂಕಗಣಿತದಲ್ಲಿ ಅವನು ತಜ್ಞನಿದ್ದು, ಪೃಥ್ವಿಯು ದುಂಡಗಿದ್ದು ಸೂರ್ಯನ ಸುತ್ತಲೂ ತಿರುಗುತ್ತದೆಂದು ಜ್ಯೋತಿಷದಲ್ಲಿ ಎಲ್ಲಕ್ಕೂ ಮೊದಲು ಪ್ರತಿಪಾದಿಸಿದವನು ಇವನೇ ಎನ್ನುವರು. ಈ ಸಜೀವಸೃಷ್ಟಿಯು ಪೃಥ್ವಿ, ಆಪ್, ವಾಯು, ತೇಜ, ಈ ನಾಲ್ಕರಿಂದಲೇ ಉಂಟಾಗಿದೆ ಎಂಬ ತನ್ನ ಮತವನ್ನು ವ್ಯಕ್ತಮಾಡಿದನು. ಇದಲ್ಲದೆ ಆತ್ಮನಿಗೆ ಪುನರ್ಜನ್ಮವುಂಟೆಂಬ ಸಿದ್ಧಾಂತವನ್ನೂ ಅವನು ಸಾರಿದನು. ಅವನು ಶಾಖಾಹಾರದ ಪುರಸ್ಕರ್ತನಾಗಿದ್ದನು ಎಂದು ಅನ್ನುವರು.

ಎಂಪಿ ಡಾಕ್ಲಿಝ, ಅನಕ್ಷ್ಮಗೋರಾಸ ಮತ್ತು ಡಿಮಾಕ್ರೀಟಸ ಈ ಮೂವರೂ ತತ್ವಜ್ಞಾನಿಗಳು ಅನಂತರದವರು. ಎಂಪಿಡಾಕ್ಲೀಝನು ವಿಕಾಸವಾದವನ್ನು ಮುಂದಿಟ್ಟನು. ಅನಕ್ಷ್ಮಗೋರಾಸ ಮತ್ತು ಡಿಮಾಕ್ರೀಟ್ಸರು ಸೃಷ್ಟಿಯಲ್ಲಿಯ ಎಲ್ಲ ಪದಾರ್ಥಗಳು ಚಲಸಶಕ್ತಿಯುಳ್ಳ ಪರಮಾಣುಗಳಿಂದ ಹುಟ್ಟಿವೆ ಎಂಬ ಸಿದ್ಧಾಂತವನ್ನು ಸಾರಿದರು. ಸೂರ್ಯನು ಸರ್ವಸ್ವವನ್ನೂ ದಹಿಸುವ ಶಕ್ತಿಯುಳ್ಳ ಪ್ರಚಂಡ ಗೋಲವೆಂದು ಹೇಳಿದ ಪಾಖಂಡಿ ಮತವನ್ನು ವ್ಯಕ್ತಮಾಡಿದ್ದಕ್ಕಾಗಿ ಅನಕ್ಷ್ಮಗೋರಾಸನು ದೇಶತ್ಯಾಗ ಮಾಡಬೇಕಾಯಿತು. ವೈದ್ಯಶಾಸ್ತ್ರದ ಜನಕನಾದ ಹಿಪೋಕ್ರೆಟಿಝನು ಇದೇ ಸುಮಾರಕ್ಕೆ ಆಗಿಹೋದನು (ಕ್ರಿ. ಪೂ. ೪೬೦). ಅವನು ಮಂತ್ರ-ತಂತ್ರಗಳ ಬಂಡನ್ನು ಅಡಗಿಸಿ, ಶಾಸ್ತ್ರೀಯ ದೃಷ್ಟಿಯಿಂದ ವೈದ್ಯಶಾಸ್ತ್ರವನ್ನು ರಚಿಸಿದನು.

ಮೇಲೆ ಹೇಳಿದ ಶಾಸ್ತ್ರಜ್ಞರು ಆಧುನಿಕ ಶೋಧಗಳನ್ನು ಬಹು

ಮಟ್ಟಿಗೆ ಸರಿಗಟ್ಟುವ ಕಲ್ಪನೆಗಳನ್ನು ಇಷ್ಟು ಪ್ರಾಚೀನಕಾಲದಲ್ಲಿಯೇ ವ್ಯಕ್ತಮಾಡಿದರು. ಅವರೇನು ಈಗಿನಂತೆ ಪ್ರತ್ಯಕ್ಷ ಪ್ರಯೋಗದಿಂದಲೇ ಕಂಡುಹಿಡಿದರೆಂದು ಹೇಳಲು ಬರುವುದಿಲ್ಲ. ಅವರ ವಿಲಕ್ಷಣ ಕಲ್ಪನಾ ಶಕ್ತಿ, ಕಾರ್ಯಕಾರಣ ಸಂಬಂಧವನ್ನರಿಯುವ ಅವರ ಮಹತ್ವಾಕಾಂಕ್ಷೆ, ತರ್ಕಶುದ್ಧವಾದ ವಿಚಾರದ ರೀತಿ, ಇವುಗಳಿಂದಲೇ ಅವರಿಗೆ ಆ ಸಿದ್ಧಾಂತ ಗಳು ಹೊಳೆದಿರಬೇಕು.

ಇದಕ್ಕೂ ಮುಂದೆ ಬಂದರೆ, ಸುವಿಖ್ಯಾತರಾದ ಸಾಕ್ರೇಟೀಸ, ಪ್ಲೇಟೋ ಹಾಗು ಅರಿಸ್ಟಾಟಲರ ಗುಂಪು ಕಣ್ಣಿಗೆ ಕಾಣುವುದು. ಸಾಕ್ರೇ ಟೀಸನು ಸಂದೇಹರಾಯನು. ಭೌತಿಕಜ್ಞಾನವು ನಿಜವಾದ ಜ್ಞಾನವಲ್ಲ ಎಂದು ಅವನ ನಂಬಿಗೆ. ಅವನ ಸಮಯವೆಲ್ಲವು ಎರಡನೆಯವರೊಡನೆ ವಾದಿಸುವುದರಲ್ಲಿಯೂ ಎರಡನೆಯವರ ಮತಗಳು ತಪ್ಪು ಎಂದು ತೋರಿ ಸುವಲ್ಲಿಯೂ ಹೋಗುತ್ತಿದ್ದಿತು. ಶಾಸ್ತ್ರೀಯ ಜ್ಞಾನಕ್ಕೆ ಇವನಿಂದ ಹೆಚ್ಚು ಉಪಯೋಗವಾಗಲಿಲ್ಲ. ಪ್ಲೇಟೋನು ಸಾಕ್ರೇಟೀಸನ ಶಿಷ್ಯನು. ಸಾಕ್ರೇಟೀಸನ ಸಂವಾದವನ್ನು ಇವನು ಬರೆದನು. ಇವನ ಮನೋ ವೃತ್ತಿಯು ಸಾಮಾನ್ಯರಿಂದ ತೀರ ಭಿನ್ನವಿದ್ದಿತು. ಇವನು ಧ್ಯೇಯ ವಾದಿಯು. ಯಾವಾಗಲೂ ಕಲ್ಪನಾಸಾಮ್ರಾಜ್ಯದಲ್ಲಿಯೇ ಹಾರಾಡುತ್ತಿ ದ್ದನು. ಭೌತಿಕಜ್ಞಾನದ ವಿಷಯದಲ್ಲಿ ಇವನಿಗೆ ಅನಾದರವಿದ್ದಿತು. ಸೃಷ್ಟಿ ಯಲ್ಲಿಯ ಪ್ರತಿಯೊಂದು ಕಾರ್ಯದ ಬುಡಕ್ಕೆ ನಿತ್ಯ, ಸನಾತನ, ಸ್ವಯಂ ಪೂರ್ಣವಾದ ತತ್ವವಿರುವುದೆಂದು ಅವನು ತಿಳಿಯುತ್ತಿದ್ದನು. ಹೀಗೆ ಸೃಷ್ಟಿಯ ಮೂಲತತ್ವ ಹುಡುಕುವುದರ ಕಡೆಗೆಯೇ ಅವನ ಒಲವು ಇದ್ದುದರಿಂದ ಭೌತಿಕಶಾಸ್ತ್ರದ ವಿಷಯಕ್ಕೆ ಇವನ ವಿಚಾರಗಳು ಅಷ್ಟು ಮಹತ್ವವಾದುವಲ್ಲ. ಅವನು ಧ್ಯೇಯವಾದಿ ಇದ್ದು, ಕಲ್ಪನಾಶಾಲಿಯೂ, ಸಮಾಜಶಾಸ್ತ್ರಜ್ಞನೂ ಇದ್ದನು. "ಮಾನವನು ಪರಿಪೂರ್ಣನಾಗ ಬೇಕಾದರೆ ಅವನ ಜೀವನವು ಚಿಕಿತ್ಸವೂ ಸುಂದರವೂ ಆಗಬೇಕು. ಆದರೆ ಈ ಬಗೆಯಾಗಿ ಎಲ್ಲರಿಗೂ ಜೀವನವನ್ನು ಸಾಗಿಸಲು ಸಾಧ್ಯವಿಲ್ಲದ್ದರಿಂದ ಮಾನವ ಜನಾಂಗದ ಹಿತವೇ ತನ್ನ ಧ್ಯೇಯವಾಗಿರುವ ಸರಕಾರದ ಅವಶ್ಯ

ಕತೆಯಿದೆ. ಸರಕಾರವು ಹೀಗೆ ಆದರ್ಶಪ್ರಾಯವಾಗಬೇಕಾದರೆ, ರಾಜ್ಯ ಸೂತ್ರಗಳನ್ನು ವಹಿಸುವ ಜನರು ವಿದ್ವಾಂಸರೂ, ಸತ್ಕಾರ್ಯತತ್ಪರರೂ, ಸ್ವಾರ್ಥತ್ಯಾಗಿಗಳೂ ಇರಬೇಕು. ಶರೀರದಿಂದಲೂ, ಬುದ್ಧಿಯಿಂದಲೂ, ಮನಸ್ಸಿನಿಂದಲೂ ಧೀರರಾದ ಚಿಕ್ಕಮಕ್ಕಳನ್ನು ಚಿಕ್ಕಂದಿನಲ್ಲಿಯೇ ಆರಿಸಿ ಅವರಿಗೆ ಸರ್ವ ವಿದ್ಯೆಗಳ, ಕಲೆಯ ಹಾಗು ನೈತಿಕ ಶಿಕ್ಷಣವನ್ನು ಕೊಟ್ಟು ಅವರ ಕೈಯಲ್ಲಿ ಎಲ್ಲ ರಾಜ್ಯಸೂತ್ರಗಳನ್ನು ಕೊಡಬೇಕು. ಅವರು ಪೂರ್ಣ ಆಶಾರಹಿತರಾಗಿ ಕಾರ್ಯಮಾಡಬೇಕಾದುದರಿಂದ ಅವರು ಸರ್ವ ಪರಿವಾರತ್ಯಾಗಿಗಳಾಗಿರಬೇಕು. ಈ ಬಗೆಯಾಗಿ ಯಾವ ಪಟ್ಟಣದ ರಾಜ್ಯಸೂತ್ರಗಳಿರುವವೋ ಆ ಪಟ್ಟಣದ ನಾಗರಿಕರ ಉನ್ನತಿಯಾಗುವುದು '' ಎಂದು ಪ್ಲೇಟೋನ ಅಭಿಪ್ರಾಯ.

ಪ್ಲೇಟೋನ ವಿಚಾರಗಳು ಕೇವಲ ಆದರ್ಶವಿದ್ದು, ಸತ್ಯಸೃಷ್ಟಿಯಲ್ಲಿ ಬರಲು ಕಠಿಣವಿದ್ದರೂ ಕೂಡ ಆ ಕಾಲಕ್ಕೆ ಜನರ ಮನಸ್ಸಿನಲ್ಲಿ ಒಳ್ಳೇ ಕ್ರಾಂತಿಯನ್ನುಂಟುಮಾಡಿದವು. ತಮ್ಮ ಜೀವಿತದಲ್ಲಿ ಸುಧಾರಣೆಯನ್ನು ಮಾಡಬಹುದೆಂಬ ಕಲ್ಪನೆಯು ಕೂಡ ಪ್ಲೇಟೋನ ಕಾಲದವರೆಗೆ, ಜನರಿಗೆ ಹೊಳೆದಿರಲಿಲ್ಲ. ಸಮಾಜದಲ್ಲಿಯೂ ರಾಜ್ಯವ್ಯವಸ್ಥೆಯಲ್ಲಿಯೂ ವಿಚಾರ ಪೂರ್ವಕವಾಗಿ ಸುಧಾರಣೆಗಳನ್ನು ಮಾಡಲು ಶಕ್ಯವಿದೆ ಎಂಬುದನ್ನು ಪ್ಲೇಟೋನು ತೋರಿಸಿಕೊಟ್ಟನು. ಅವನ ಈ ವಿಚಾರಗಳು ಇಡೀ ಯುರೋಪಖಂಡಕ್ಕೆ ಬೆಳಕನ್ನು ಕೊಟ್ಟವು.

ಪ್ಲೇಟೋನ ಶಿಷ್ಯನಾದ ಅರಿಸ್ಟಾಟಲನು ಗುರುವಿಗಿಂತಲೂ ಪ್ರಸಿದ್ಧನಾದನು (ಕ್ರಿ. ಪೂ. ೩೮೪–೩೨೨). ಅರಿಸ್ಟಾಟಲನ ಬುದ್ಧಿಯು ಎಲ್ಲ ವಿಷಯಗಳಲ್ಲಿ ಹರಿಯುತ್ತಿದ್ದಿತು. ಪ್ಲೇಟೋನ ವಿದ್ಯಾಲಯದ ಹೆಸರು 'ಅಕ್ಯಾಡಮಿ' ಎಂದು. ಅರಿಸ್ಟಾಟಲನ ವಿದ್ಯಾನಿಯವು 'ಲಾಯಸಿಯಾಮ' ಎಂದು ಪ್ರಸಿದ್ಧವಿದೆ. ಅಥೆನ್ಸದಲ್ಲಿ ವಿದ್ಯಾಲಯವನ್ನು ಸ್ಥಾಪಿಸುವ ಮೊದಲು ಅರಿಸ್ಟಾಟಲನು ಸುಪ್ರಸಿದ್ಧ ಸಾಮ್ರಾಟನಾದ ಅಲೆಕ್ಝಾಂಡರನ ಗುರುವಾಗಿದ್ದನು. ಇದರಿಂದ ವಿದ್ಯಾಲಯಕ್ಕೆ ರಾಜಾಶ್ರಯ

ದೊರೆತು, ಅರಿಸ್ಟಾಟಲನಿಂದ ಮಹತ್ವವಾದ ಸಂಶೋಧನಗಳೂ, ಲೇಖನಗಳೂ ಪ್ರಕಟವಾದವು. ರಾಜಾಶ್ರಯದಿಂದ ವಿದ್ಯೆಯು ಹೇಗೆ ಬಹು ಬೇಗ ಬೆಳೆಯುವುದೆಂಬುದಕ್ಕೆ ಇದು ಒಳ್ಳೇ ಉದಾಹರಣೆಯಾಗಿದೆ.

ಅರಿಸ್ಟಾಟಲನ ಕಾರ್ಯದ ಮಹತ್ವವು ನಮಗೆ ತಿಳಿಯಬೇಕಾದರೆ, ಆ ಕಾಲದ ಜ್ಞಾನದ ಸ್ಥಿತಿಯು ಏನಿದ್ದಿತು ಎಂಬುದು ನಮಗೆ ಮೊದಲು ಗೊತ್ತಾಗಬೇಕು. ಪ್ರಾಚೀನಕಾಲದಲ್ಲಿ ಜ್ಞಾನದಲ್ಲಿ ಇನ್ನೂ ವರ್ಗೀಕರಣವಾಗಿರಲಿಲ್ಲ. ಭಿನ್ನಭಿನ್ನ ಶಾಖೆಗಳ ಸ್ಪಷ್ಟವಾದ ಕಲ್ಪನೆಯಿರಲಿಲ್ಲ. ಜ್ಞಾನನಿಧಿಯೇ ತೀರ ಚಿಕ್ಕದಿದ್ದುದರಿಂದ ಎಲ್ಲವೂ ಕೂಡಿಯೇ ಸಾಗಿತ್ತು. ಭೂಮಿತಿ, ಜ್ಯೋತಿಷ್ಯ, ಪದಾರ್ಥವಿಜ್ಞಾನ, ಸಮಾಜಶಾಸ್ತ್ರ ಹಾಗು ತತ್ವಜ್ಞಾನ ಇವುಗಳು ಭಿನ್ನಭಿನ್ನವೆಂಬುದು ತಿಳಿಯದೆ ತತ್ವಜ್ಞರು ಎಲ್ಲವುಗಳ ಕಲಸಮೇಲೋಗರ ಮಾಡುತ್ತಿದ್ದರು. ಆದುದರಿಂದಲೇ ಪಾಯಥಗೋರಸನಂಥವನು, ಭೂಮಿತಿ, ಪುನರ್ಜನ್ಮ, ಆಹಾರಶಾಸ್ತ್ರಗಳಂಥ ಭಿನ್ನ ಭಿನ್ನ ಶಾಸ್ತ್ರಗಳಲ್ಲಿ ಹೊಸ ಹೊಸ ವಿಚಾರಗಳನ್ನು ಮಾಡಿದ್ದು ಕಂಡುಬರುತ್ತದೆ. ಅರಿಸ್ಟಾಟಲನು ಇದೆಲ್ಲವನ್ನೂ ಬೇರ್ಪಡಿಸಿ, ಜ್ಞಾನದ ವರ್ಗೀಕರಣ ಮಾಡಿದನು. ಅವನ ಮಹತ್ವದ ಕಾರ್ಯವೇ ಇದು. ಇದರಿಂದ ಜ್ಞಾನದ ಬೆಳೆವಣಿಗೆಗೆ ಒಳ್ಳೇ ಕಸುವು ಬಂದಿತು. ಯಾಕೆಂದರೆ ಪ್ರತಿಯೊಬ್ಬ ಶಾಸ್ತ್ರಜ್ಞನಿಗೆ, ತನ್ನ ಕ್ಷೇತ್ರವು ನಿಶ್ಚಿತವಾದುದರಿಂದ ಅದರಲ್ಲಿಯೇ ತನ್ನ ಶಕ್ತಿಸರ್ವಸ್ವವನ್ನು ಉಪಯೋಗಿಸಲು ಅನುಕೂಲವಾಯಿತು. ಅದರಂತೆಯೇ ಪ್ರತಿಯೊಂದು ಕ್ಷೇತ್ರದಲ್ಲಿಯ ಅಸ್ಪಷ್ಟ ಕಲ್ಪನೆಗಳಿಗೆ ಸ್ಪಷ್ಟತೆಯು ಬರಹತ್ತಿತು. ಹೀಗೆ ಶಾಸ್ತ್ರಗಳಲ್ಲಿ ವಿಚಾರಗಳ ಸಂಕಲನಕ್ಕೆ ಹಾಗು ಏಕೀಕರಣಕ್ಕೆ ಅನುವು ದೊರೆಯಿತು.

ಅರಿಸ್ಟಾಟಲನು ತನ್ನ ಗುರುವಿನಂತೆ, ಕೇವಲ ಧ್ಯೇಯವಾದಿಯೂ ಕಲ್ಪನಾಶಾಲಿಯೂ ಇರದೆ, ಅತ್ಯಂತ ಶೋಧಕಬುದ್ಧಿಯವನೂ ವ್ಯವಹಾರಜ್ಞನೂ ಇದ್ದನೆಂಬುದನ್ನು ನಾವು ಮರೆಯಲಾಗದು. ಸೃಷ್ಟಿಯ ಸ್ವಭಾವವೇನು? ಮಾನವನ ಸ್ವಭಾವವೆಂತಹದು? ಈ ಪರಿಸ್ಥಿತಿಯಲ್ಲಿ

ಯಾವ ಯಾವ ಸಂಗತಿಗಳು ಜೀವನದಲ್ಲಿ ಬರುವುದು ಶಕ್ಯ? ಎಂಬುದನ್ನು ವಿಚಾರಿಸಿಯೇ ಅವನು ತನ್ನ ಸಿದ್ಧಾಂತಗಳನ್ನು ಮಂಡಿಸುತ್ತಿದ್ದನು. ಆಧುನಿಕರ ದೃಷ್ಟಿಯಿಂದ ಇವನೇ ನಿಜವಾದ ಶಾಸ್ತ್ರಜ್ಞನು. ಪ್ರಾಣಿಶಾಸ್ತ್ರ ಗ್ರಂಥವನ್ನು ಬರೆಯುವ ಮೊದಲು ಬೇರೆ ಬೇರೆ ದೇಶಗಳಿಗೆ ಸಾವಿರ ಜನ ತನ್ನ ಶಿಷ್ಯರನ್ನು ಕಳಿಸಿ ಪ್ರಾಣಿಗಳನ್ನು ಸಂಗ್ರಹಿಸಿ ಪ್ರತ್ಯಕ್ಷವಾಗಿ ಅವುಗಳನ್ನು ನಿರೀಕ್ಷಿಸಿದನು. ಶಾಸ್ತ್ರಜ್ಞನು ಶ್ರೇಷ್ಠ ನಿರೀಕ್ಷಕನೂ ಅನುಭವಿಯೂ ಇರುವಂತೆ, ಕಲ್ಪನಾಶಕ್ತಿಯುಳ್ಳವನೂ ಇರಬೇಕಾಗುವುದು. ಅರಿಸ್ಟಾಟಲನಲ್ಲಿ ಅಂತಹ ವಿಲಕ್ಷಣ ಕಲ್ಪನಾಶಕ್ತಿ ಇಲ್ಲದ್ದರಿಂದ ಅನೇಕ ತಪ್ಪು ಸಿದ್ಧಾಂತಗಳನ್ನು ಮಾಡಿದ್ದಾನೆ. ಮುಂದೆ ಇವನ ಗ್ರಂಥಗಳು ವೇದದಂತೆ ಪ್ರಾಮಾಣ್ಯಗ್ರಂಥಗಳಾದುದರಿಂದ ಈ ತಪ್ಪುಗಳು ಕೂಡ ಪ್ರಾಮಾಣ್ಯವನ್ನು ಪಡೆದುವು. ಇದರಿಂದ ಶಾಸ್ತ್ರದ ಬೆಳೆವಣಿಗೆಗೆ ಸ್ವಲ್ಪ ತಡೆಯಾಯಿತು. ಇದಕ್ಕೆ ಉದಾಹರಣವೆಂದರೆ, ಪೃಥ್ವಿಯ ಭ್ರಮಣನೆ. ನಿರೀಕ್ಷಣದಿಂದ ಪೃಥ್ವಿಯು ದುಂಡಗಿದೆ ಎಂದು ಇವನೂ ಸರಿಯಾಗಿಯೇ ಕಂಡುಹಿಡಿದನು. ಆದರೆ ಮೊದಲಿನ ತತ್ವಜ್ಞಾನಿಗಳು ಪೃಥ್ವಿಯು ಸೂರ್ಯನ ಸುತ್ತಲೂ ತಿರುಗುವುದೆಂದು ಕಂಡುಹಿಡಿದದ್ದನ್ನು ಪ್ರತ್ಯಕ್ಷ ಆಧಾರಗಳು ದೊರೆಯದ್ದರಿಂದ ಅರಿಸ್ಟಾಟಲನು ಆ ಸಿದ್ಧಾಂತವನ್ನು ಮಾನ್ಯಮಾಡಲಿಲ್ಲ.

ಅರಿಸ್ಟಾಟಲನು ಸರ್ವ ವಿಷಯಗಳ ಮೇಲೆ ಗ್ರಂಥಗಳನ್ನು ಬರೆದಿದ್ದಾನೆ. ಅವನ ಗ್ರಂಥರಾಸಿಯನ್ನು ನೋಡಿದರೆ ಅದೊಂದು ಜ್ಞಾನಕೋಶವೇ ಎನಿಸುತ್ತದೆ. ತರ್ಕಶಾಸ್ತ್ರ, ಮಾನಸಶಾಸ್ತ್ರ, ನೀತಿಶಾಸ್ತ್ರ ಹಾಗು ರಾಜ್ಯಶಾಸ್ತ್ರಗಳ ಮೇಲೆ ಅವನ ಗ್ರಂಥಗಳಿವೆ. ಅರ್ಥಶಾಸ್ತ್ರದ ವಿಷಯವಾಗಿಯೂ ಅವನು ಬರೆದಿದ್ದಾನೆ. ಅವನ ವಕ್ತೃತ್ವಶಾಸ್ತ್ರ (Rhetroric), ಸಾಹಿತ್ಯಶಾಸ್ತ್ರ (Poetics) ಗಳಂತೂ ವಿಖ್ಯಾತವಿವೆ. ಭೌತಿಕಶಾಸ್ತ್ರಗಳಲ್ಲಿ ಜ್ಯೋತಿಷ್ಯ, ಪದಾರ್ಥವಿಜ್ಞಾನ ಹಾಗು ಪ್ರಾಣಿಶಾಸ್ತ್ರಗಳ ಮೇಲೆ ಅವನ ಗ್ರಂಥಗಳಿವೆ. ಇದಲ್ಲದೆ 'ಮೇಟಾಫಿಜಿಕ್ಸ' ಅಂದರೆ ತತ್ವಜ್ಞಾನವನ್ನೂ ಕೂಡ ಅವನು ಬಿಟ್ಟಿಲ್ಲವೆಂಬುದನ್ನು ನೆನಪಿಸಲ್ಲಿಡಬೇಕು.

ಅವನ ಮತಗಳನ್ನೂ ಪ್ರತಿಪಾದನವನ್ನೂ ಇಲ್ಲಿ ವಿಚಾರಿಸಲು ಶಕ್ಯ ವಿಲ್ಲ. ಜಗತ್ತಿನ ಜ್ಞಾನದ ಇತಿಹಾಸದಲ್ಲಿ ಅರಿಸ್ಟಾಟಲನ ಸ್ಥಾನವು ಬಹು ದೊಡ್ಡದಿದೆ. ತರ್ಕಶಾಸ್ತ್ರ, ಮಾನಸಶಾಸ್ತ್ರ ಹಾಗು ಅರ್ಥಶಾಸ್ತ್ರಗಳ ಜನಕನು ಇವನೇ. ಸಾಹಿತ್ಯದಲ್ಲಿ ಕೂಡ ಶಾಸ್ತ್ರೀಯ ದೃಷ್ಟಿಯಿಂದ ವಿಚಾರ ಮಾಡಿದವರಲ್ಲಿ ಇವನೇ ಮೊದಲಿಗನು. ಪ್ರಾಣಿಶಾಸ್ತ್ರದ ತಂದೆ ಯೆಂದು ಇವನ ಪ್ರಸಿದ್ಧಿಯಿದೆ. ಇಲ್ಲಿಯವರೆಗೆ ಜ್ಞಾನಕ್ಷೇತ್ರದಲ್ಲಿ ಯಾರೂ ಪಡೆಯದ ಪ್ರಭುತ್ವವನ್ನು ಅರಿಸ್ಟಾಟಲನು ಪಡೆದನು. ಯುರೋಪದೊಳಗೆ ಮಧ್ಯಕಾಲದಲ್ಲಿ ಇವನ ಗ್ರಂಥಗಳೇ ವೇದತುಲ್ಯವಾಗಿದ್ದವು. ಈ ನಂಬಿಗೆ ಯಿಂದ ಪರಾವಲಂಬನವುಂಟಾಗಿ ಹಾನಿಯಾಯಿತು. ಯಾಕೆಂದರೆ, ಅರಿ ಸ್ಟಾಟಲನು ಹೇಳಿದುದಕ್ಕಿಂತ ಮುಂದೆ ಹೋಗುವ ಸ್ವತಂತ್ರ ರೀತಿ ಯಿಂದ ವಿಚಾರಮಾಡಿ ಅವನ ಮತಗಳನ್ನು ವಿಮರ್ಶಿಸಿ ನೋಡುವ ಬುದ್ಧಿಯೇ ನಾಶವಾಯಿತು. ಆದರೆ ಇದಕ್ಕೆ ಹೊಣೆಗಾರನು ಅರಿ ಸ್ಟಾಟಲನು ಅಲ್ಲವೆಂಬುದು ಮೇಲೆಯೇ ಇದೆ.

ಅರಿಸ್ಟಾಟಲನ ಸರ್ವ ಗ್ರಂಥಗಳ ಜ್ಞಾನಕ್ಕೂ ಆ ಕಾಲದ ಭಾರ ತೀಯ ಶಾಸ್ತ್ರಜ್ಞಾನಕ್ಕೂ ಹೋಲಿಸಿ ನೋಡುವುದು ಒಂದು ಮನರಂಜ ನೆಯ ವಿಷಯವೇ ಆಗಬಹುದು. ನಿಷ್ಪಕ್ಷಪಾತದೃಷ್ಟಿಯಿಂದ ವಿಚಾರಿಸಿ ದರೆ, ಗ್ರೀಕರ ತಕ್ಕಡಿಯು ಭಾರವಾಗುವುದೆಂಬುದನ್ನು ನಾವು ಒಪ್ಪ ಬೇಕಾಗುವುದು. ಕ್ರಿ. ಪೂ. ೪ನೆಯ ಶತಮಾನದಲ್ಲಿ ಭಾರತದಲ್ಲಿ ಪ್ರಾಣಿ ಶಾಸ್ತ್ರ ಹಾಗು ಪದಾರ್ಥವಿಜ್ಞಾನಶಾಸ್ತ್ರಗಳ ಸುಳುವು ಕೂಡ ಇರಲಿಲ್ಲ. ವಕ್ತೃತ್ವಶಾಸ್ತ್ರವಂತೂ ನಮ್ಮಲ್ಲಿ ಹುಟ್ಟಲೇ ಇಲ್ಲ. ಸಾಹಿತ್ಯಶಾಸ್ತ್ರವು ಅರಿಸ್ಟಾಟಲನ ನಂತರ ಎಷ್ಟೋ ಕಾಲದ ಮೇಲೆ ನಮ್ಮಲ್ಲಿ ಹುಟ್ಟಿತು. ರಾಜಕಾರಣದಲ್ಲಿ ಕೌಟಿಲೀಯ ಅರ್ಥಶಾಸ್ತ್ರವೂ ಶಾಂತಿಪರ್ವದಲ್ಲಿಯ ರಾಜನೀತಿಯೂ ಎದುರು ನಿಲ್ಲುವವು. ನೀತಿಶಾಸ್ತ್ರದಲ್ಲಿ ಸ್ಪರ್ಧಿಸಲು ಭಗವದ್ಗೀತೆಯಿದೆ. ಆದರೆ ಅರಿಸ್ಟಾಟಲನಲ್ಲಿಯ ವಿವೇಚಕ ಹಾಗು ಚಿಕಿತ್ಸಕ ಬುದ್ಧಿಯು ನಮ್ಮಲ್ಲಿ ಉದಯವಾಗಿತ್ತೇ ಎಂಬುದೇ ಮುಖ್ಯ ಪ್ರಶ್ನೆ. ಆದರಂತೆಯೇ ಇತಿಹಾಸದ ಜನಕನಾದ ಹಿರಾಡೋಟಸನು ಅರಿಸ್ಟಾಟಲ

ನಿಗಿಂತ ಮೊದಲು ಆಗಿಹೋದನು. ಗ್ರೀಕರ ಅಂತಃಕಲಹಗಳ ಇತಿಹಾಸ ವನ್ನು ಬರೆದ ಥ್ಯುಸಿಡಾಯಡೀಸನು ಮುಂದೆ ಸ್ವಲ್ಪ ಕಾಲದಲ್ಲಿಯೇ ಆಗಿ ಹೋದನಲ್ಲದೆ ಅವನು ಪ್ರಮಾಣಭೂತ ಇತಿಹಾಸಕಾರನೆಂದು ತಿಳಿಯಲ್ಪ ಡುತ್ತಾನೆ. ನಮ್ಮಲ್ಲಿ ಇತಿಹಾಸವನ್ನು ಬರೆಯುವ ಕಲೆಯೇ ಹುಟ್ಟಿಲ್ಲ ವೆಂದರೆ ಅತಿಶಯೋಕ್ತಿಯಾಗಲಾರದು.

ಅರಿಸ್ಟಾಟಲನ ನಂತರ ಗ್ರೀಕರ ಜ್ಞಾನರವಿಯು ಅಸ್ತಂಗತನಾದನು. ಬುದ್ಧಿಬಲದಿಂದ ತೌಡುಕುಟ್ಟುವದರಲ್ಲಿಯೇ ಕೆಲ ಕಾಲ ಕಳೆಯಿತು. ಅದಕ್ಕೆ ಐತಿಹಾಸಿಕ ಮಹತ್ವವಿಲ್ಲ. ರಾಜಕೀಯ ದೃಷ್ಟಿಯಿಂದ ೨೦೦ ವರ್ಷಗಳ ವರೆಗೆ, ಅತ್ಯಂತ ತೇಜಸ್ವಿತೆಯಿಂದ ಮೆರೆದ ರಾಷ್ಟ್ರವು ಮತ್ತೆ ಕತ್ತಲೆ ಯಲ್ಲಿ ಕಾಲಿಟ್ಟಿತು. ಇಂತಹ ಬುದ್ಧಿಶಾಲಿ, ಪರಾಕ್ರಮಿ, ಕಲಾಸಂಪತ್ತಿ ಯುಳ್ಳ ರಾಷ್ಟ್ರವು ಇಷ್ಟುಬೇಗನೆ ಕೆಳಗಿಳಿಯುವುದು ಆಶ್ಚರ್ಯದ ಸಂಗತಿಯೇ ಸರಿ. ಅಷ್ಟೇಕೆ ನಮ್ಮ ವಿಜಯನಗರ, ಮಹಾರಾಷ್ಟ್ರಗಳನ್ನೇ ನೋಡಿದರೆ ಸಾಕು. ಈ ರಾಷ್ಟ್ರಗಳು ೨-೩ ಶತಮಾನಗಳಲ್ಲಿಯೇ ಲಯ ವನ್ನು ಹೊಂದಲಿಲ್ಲವೆ? ಈ ರಾಷ್ಟ್ರಗಳ ಅವನತಿಯ ಕಾರಣಗಳೇ ಗ್ರೀಸಕ್ಕೂ ಇರಲು ಸಾಕು. ಹೊಟ್ಟೆಯಕಿಚ್ಚು, ಪರಸ್ಪರರಲ್ಲಿ ಅವಿ ಶ್ವಾಸ, ನಾನೇ ದೊಡ್ಡವನೆಂಬ ಭಾವನೆ, ವ್ಯಾಪಕದೃಷ್ಟಿಯ ಅಭಾವ ಗಳೇ ಈ ಎರಡೂ ರಾಜ್ಯಗಳ ನಾಶಕ್ಕೆ ಕಾರಣವಿದ್ದಂತೆ ಗ್ರೀಕಕ್ಕೂ ಇವೆ. ವೈಯಕ್ತಿಕ ಬುದ್ಧಿ, ಪರಾಕ್ರಮಗಳು ಈ ರಾಷ್ಟ್ರಗಳಲ್ಲಿದ್ದಂತೆ ಗ್ರೀಕರಲ್ಲಿಯೂ ಕಾಣುತ್ತವೆ. ಆದರೆ ಈ ಎಲ್ಲ ರಾಷ್ಟ್ರಗಳಲ್ಲಿ ಸಂಘ ಟನೆ ಹಾಗು ಶಿಸ್ತು, ವ್ಯಾಪಕವಾದ ದೇಶಾಭಿಮಾನಗಳ ಅಭಾವವಿದ್ದಿತು. ಆದುದರಿಂದ ಈ ರಾಷ್ಟ್ರಗಳಲ್ಲಿ ಮೇಲಿಂದ ಮೇಲೆ ದೇಶಘಾತಕರು ಹೊರಟರು. ಈ ಸಾಮ್ಯವು ಒಳ್ಳೇ ಚಮತ್ಕಾರವಿದೆ.

ಈ ಸಾಮ್ಯದಿಂದ ನಾವು ಉಬ್ಬಬಾರದು. ಗ್ರೀಕರಂತೆಯೇ ಸರ್ವ ಗುಣಸಂಪನ್ನರೆಂದು ನಾವು ತಿಳಿಯಕೂಡದು. ಗ್ರೀಕರ ಕೆಲವು ಗುಣ ಗಳು ಕನ್ನಡಿಗರಲ್ಲಿದ್ದವೆಂಬುದೇನೋ ನಿಜ; ಆದರೆ ಅವರ ಚಿಕಿತ್ಸಕ

ಬುದ್ಧಿಯೂ, ಶೋಧಕ ಬುದ್ಧಿಯೂ ನಮ್ಮಲ್ಲಿ ಕಡಿಮೆ ಇದ್ದಿತೆಂಬುದನ್ನು ನಾವು ಮರೆಯಲಾಗದು. ಗ್ರೀಕರು ದೊಡ್ಡ ವ್ಯಾಪಾರಿಗಳಿದ್ದರು. ನಾವಿಕ ವಿದ್ಯೆಯಲ್ಲಿ ಪ್ರವೀಣರಿದ್ದರು. ಸೌಂದರ್ಯ ಹಾಗು ಕಲೋಪಾಸಕರಿದ್ದರು. ಶಾಸ್ತ್ರಗಳ ಜನಕರಿದ್ದರು. ಅತ್ಯಂತ ಶ್ರೇಷ್ಠ ಸಾಹಿತ್ಯಿಕರಿದ್ದರು. ಸಾರಾಂಶ ಅವರು ಮಾನವತ್ವದ ಪರಿಪೂರ್ಣಸ್ಥಿತಿಯ ಸಮೀಪಕ್ಕೆ ಮುಟ್ಟಿದ್ದರು. ಮೇಲಿನ ಸ್ವಭಾವ ದೋಷಗಳು ಅವರಲ್ಲಿಲ್ಲದಿದ್ದರೆ ಅವರು ಪೂರ್ಣ ಮಾನವರಾಗುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಇರಲಿ.

## ಅಲೇಕ್ಝಾಂಡ್ರಿಯಾದ ಉದಯ

ಗ್ರೀಕ ರಾಷ್ಟ್ರವು ನಷ್ಟವಾದರೂ ಅವರ ಜ್ಞಾನದ ಪರಂಪರೆಯು ನಷ್ಟವಾಗಲಿಲ್ಲ. ಗ್ರೀಕರಲ್ಲಿಯ ಬುದ್ಧಿಮತ್ತೆಯೂ ವಿದ್ಯೆಯೂ ಅಲೇಕ್ಝಾಂಡ್ರಿಯಾ ಪಟ್ಟಣದಲ್ಲಿ ಒಟ್ಟುಗೂಡಿದವು. ಜ್ಞಾನದ ಪ್ರಗತಿಯು ಅತ್ಯಂತ ಭರದಿಂದ ಆಯಿತು. ಈ ಪಟ್ಟಣವು ಅಲೇಕ್ಝಾಂಡರನಿಂದ ಇಜಿಪ್ತದ ಉತ್ತರ ದಂಡೆಯಲ್ಲಿ ಕ್ರಿ. ಪೂ. ೩೩೨ ರಲ್ಲಿ ಸ್ಥಾಪಿಸಲ್ಪಟ್ಟಿತ್ತು. ಅಲೇಕ್ಝಾಂಡರನ ಮರಣದನಂತರ ಟಾಲೇಮಿಯೆಂಬ ಅವನ ಸರದಾರನು ಇಜಿಪ್ತವನ್ನುಗೆದ್ದು ಸ್ವತಂತ್ರ ರಾಜ್ಯವನ್ನುಸ್ಥಾಪಿಸಿದನು. ಇವನೂ, ಇವನ ನಂತರ ಬಂದ ಎರಡನೆಯ ಟಾಲೇಮಿಯಾನೂ, ವಿದ್ಯಾಪಕ್ಷಪಾತಿಗಳಿದ್ದುದರಿಂದ ಅನೇಕ ಗ್ರೀಕ ವಿದ್ವಾಂಸರು ಬಂದು ಅಲೇಕ್ಝಾಂಡ್ರಿಯಾದಲ್ಲಿ ನೆಲೆಸಿದರು. ಈ ಪಟ್ಟಣವು ವಿದ್ಯೆಯ, ಶಾಸ್ತ್ರಜ್ಞಾನದ, ತತ್ವಜ್ಞಾನದ ನೆಲೆವೀಡೇ ಆಯಿತು. ಮುಂದೆ ಕ್ರಿ. ಪೂ. ೪೮ ರಲ್ಲಿ ರೋಮನ್ನರು ಇಜಿಪ್ತವನ್ನು ಗೆದ್ದರೂ ಮುಂದೆ ೩-೪ ನೂರು ವರ್ಷಗಳ ವರೆಗೆ ವಿದ್ಯಾಕೇಂದ್ರವೆಂದೇ ಈ ಪಟ್ಟಣವು ಹೆಸರುವಾಸಿಯಾಗಿತ್ತು.

ಮೊದಲನೆಯ ಟಾಲೇಮಿಯು ಅಲೇಕ್ಝಾಂಡ್ರಿಯಾದಲ್ಲಿ ವಿದ್ಯಾಪೀಠ, (Museum) ಗ್ರಂಥಾಲಯ (Library) ಹೀಗೆ ಎರಡು ಸಂಸ್ಥೆಗಳನ್ನು ಸ್ಥಾಪಿಸಿದನು. ವಿದ್ಯಾಪೀಠದಲ್ಲಿ ಅನೇಕ ವಿಷಯಗಳ ಸಂಶೋಧನೆಗಳು ನಡೆಯುತ್ತಿದ್ದವು. ಅನೇಕ ವಿದ್ಯಾರ್ಥಿಗಳು

ಅಲ್ಲಿ ಅಭ್ಯಾಸವನ್ನು ಮಾಡುತ್ತಿದ್ದು ಅವರೆಲ್ಲರ ವೆಚ್ಚವು ಸರಕಾರದಿಂದಲೇ ನಡೆಯುತ್ತಿದ್ದಿತು. ಈ ವಿದ್ಯಾಪೀಠವು ಈಗಿನ ದೊಡ್ಡ ಯುನಿವ್ಹರ್ಸಿಟಿ ಯೆಂದೇ ಹೇಳಬಹುದು. ಗ್ರಂಥಾಲಯವೂ ಪ್ರಚಂಡವಾಗಿದ್ದಿತು. ಈ ರಾಜ್ಯದಲ್ಲಿ ಗ್ರಂಥಗಳನ್ನು ತೆಗೆದುಕೊಂಡು ಯಾರೇ ಬರಲಿ, ಆ ಗ್ರಂಥದ ಪ್ರತಿಯು ಮಾಡಲ್ಪಟ್ಟು ವಾಚನಾಲಯದಲ್ಲಿ ಇಡಲ್ಪಡುತ್ತಿದ್ದಿತು. ಹೀಗೆ ವಿದ್ಯಾಭ್ಯಾಸಕ್ಕೆ ಅನೇಕ ಬಗೆಯ ಅನುಕೂಲತೆಗಳಿದ್ದುದರಿಂದ ಅನೇಕ ದೇಶದ ವಿದ್ಯಾರ್ಥಿಗಳು ಅಭ್ಯಾಸಕ್ಕೆ ಬರುತ್ತಿದ್ದರು. ಅವರ ಮುಖಾಂತರ ಜ್ಞಾನವು ಜಗತ್ತಿನಲ್ಲೆಲ್ಲ ಹರಡುತ್ತಿತ್ತು. ಅಲೇಕ್ಝಾಂಡ್ರಿಯಾವು ವ್ಯಾಪಾರದ ಮುಖ್ಯಕೇಂದ್ರವಿದ್ದುದರಿಂದ ಇತರ ಸರ್ವ ದೇಶಗಳ ಜನರು ಬರುವಂತೆ ಭಾರತೀಯರೂ ಹೋಗುತ್ತಿದ್ದರು. ಅನೇಕ ಹಿಂದೀಯರು ಅಲ್ಲಿ ವ್ಯಾಪಾರಕ್ಕಾಗಿ ನೆಲಸಿದ ಉಲ್ಲೇಖಗಳು ದೊರೆಯುತ್ತವೆ.

ಹೀಗೆ ಅದ್ಭುತ ಜ್ಞಾನಮಯ ವಾತಾವರಣದಲ್ಲಿ ಕೆಲಕಾಲ ಜ್ಞಾನದ ಪ್ರಗತಿಯು ಒಳ್ಳೇ ಭರದಿಂದಾಯಿತು. ವಿಖ್ಯಾತ ಭೂಮಿತಿ ಶಾಸ್ತ್ರಜ್ಞನಾದ ಯುಕ್ಲೀಡನು ತನ್ನ ಗ್ರಂಥವನ್ನು ಬರೆದುದು ಇದೇ ಕಾಲ. ಅವನ ಶಿಷ್ಯನಾದ ಅಪೋಲೋನಿಯಸ್‌ನು ಶಂಕುಚ್ಛೇದದ ಮೇಲೆ ಗ್ರಂಥಬರೆದನು. ತ್ರಿಕೋಣ ಮಿತಿಯ ಶಾಸ್ತ್ರವೂ ಕೂಡ ಹುಟ್ಟಿದ್ದು ಇದೇ ಕಾಲದಲ್ಲಿ. ಎರಾಟಿಓಸ್ಥೇನೀಸನು ಪೃಥ್ವಿಯ ಪರೀಘವನ್ನು ಅಳೆದನು. ಹಿಪಾರ್ಕಸನೆಂಬ ಜ್ಯೋತಿಷಿಯು ಕೂಡ ಇದೇ ಕಾಲದಲ್ಲಿ ನಕ್ಷತ್ರಗಳ ಸ್ಥಿತಿಯನ್ನವಲೋಕಿಸುತ್ತಿದ್ದನು. ಹೀಗೆ ಜ್ಯೋತಿಷ, ಗಣಿತ, ಭೂಮಿತಿ ಶಾಸ್ತ್ರಗಳು ಮುಂದಡಿ ಇಟ್ಟವು. ಇದಲ್ಲದೆ ಯಂತ್ರಶಾಸ್ತ್ರ, ಗತಿಶಾಸ್ತ್ರಗಳ ಸಿದ್ಧಾಂತಗಳಲ್ಲಿ ವಿದ್ವಾಂಸರು ಮಗ್ನರಾಗಿ ನಾನಾಬಗೆಯ ಯಂತ್ರಗಳನ್ನು ಶೋಧಿಸುವುದರಲ್ಲಿ ತಲ್ಲೀನರಾಗಿದ್ದರು. ಸಿಸಿಲೀ ದ್ವೀಪದಲ್ಲಿದ್ದ ಸಾಯರಾಕ್ಯೂಝುಪಟ್ಟಣದಲ್ಲಿ ವಾಸಮಾಡುತ್ತಿದ್ದ ಅರ್ಕೀಮಿಡೀಸನು ಅನೇಕ ಬಗೆಯ ಯಂತ್ರಗಳನ್ನು ಸಿದ್ಧಪಡಿಸುವುದರಲ್ಲಿ ಮುಂದಾಳಾಗಿದ್ದನು. ಇವನು ಅಲೇಕ್ಝಾಂಡ್ರಿಯಾ ವಿದ್ಯಾಪೀಠದ ವಿದ್ಯಾರ್ಥಿಯು. ಇವನು ಭೂಮಿತಿ, ಪದಾರ್ಥ ವಿಜ್ಞಾನ, ಜಲಸ್ಥಿತಿ ಶಾಸ್ತ್ರಗಳಲ್ಲಿ ಅನೇಕ ಹೊಸ ಶೋಧಗಳನ್ನು ಮಾಡಿ

ಗಡಗಡೆ, ಅಚ್ಚು, ಸ್ಕೊನ್ನಿ (ಕೋಲು)ಗಳ ಒಗ್ಗೆ ಸಿದ್ಧಾಂತಗಳನ್ನು ಕಟ್ಟಿದನು. ಈ ಸಿದ್ಧಾಂತಗಳನ್ನು ಉಪಯೋಗಿಸಿ ಸಾಯರಾಕ್ಯೂಝದ ರಾಜನಿಗೆ ಅನೇಕ ಯಂತ್ರಗಳನ್ನು ಮಾಡಿಕೊಟ್ಟನು. ಹೀರೋನೆಂಬುವನು ಉಗಿಯ ಶಕ್ತಿಯಿಂದ ನಡೆಯುವ ಯಂತ್ರವನ್ನು ನಿರ್ಮಿಸಿದನು. ವೈದ್ಯಶಾಸ್ತ್ರದಲ್ಲಿಯೂ ಪ್ರಗತಿಯಾಯಿತು. ಶವಚ್ಛೇದಮಾಡಿ ಮನುಷ್ಯನ ಅಂತರ್ಗತಶರೀರಜ್ಞಾನಮಾಡಿಕೊಳ್ಳುವ ಪರಿಪಾಠವು ಇದೇ ಕಾಲಕ್ಕೆ ಬಂದಿತು. ಇದರಿಂದ ವೈದ್ಯಶಾಸ್ತ್ರದಲ್ಲಿ ಕ್ರಾಂತಿಯಾಗಿ ಶಸ್ತ್ರಕ್ರಿಯೆಯು ಸುಧಾರಿಸಿತು. ಶಸ್ತ್ರಕ್ರಿಯೆಯ ವಿರುದ್ಧವಿದ್ದವರು ಅನೇಕ ಔಷಧಿಗಳ ಗುಣಧರ್ಮಗಳನ್ನು ಕಂಡುಹಿಡಿದರು.

ಅಲೇಕ್ಝಾಂಡ್ರಿಯಾದ ಜ್ಞಾನದ ಈ ವೈಭವವು ೧೦೦-೧೫೦ ವರ್ಷ ಬಾಳಿತು. ರೋಮನುಸಾಮ್ರಾಜ್ಯವು ಬೆಳೆದಂತೆ, ಟಾಲೇಮಿಯ ತೇಜವೂ ವೈಭವವೂ ಕಡಿಮೆಯಾಯಿತು. ಅದರೊಡನೆ ವಿದ್ಯಾಪ್ರಿಯತೆಯೂ ಕಡಿಮೆಯಾಗಹತ್ತಿತು. ಕ್ರಿ. ಪೂ. ೧೫೦ರ ನಂತರ ಮೊದಲನೆಯ ತರಗತಿಯ ಶೋಧಕರಾರೂ ಹುಟ್ಟಲಿಲ್ಲವೆಂದು ಹೇಳಬಹುದು. ಟೀಕೆ, ಪ್ರತಿಟೀಕೆಗಳನ್ನು ಮಾಡುವುದರಲ್ಲಿಯೇ ಕಾಲ ಕಳೆಯುವ ಗೊಳ್ಳು ಪಂಡಿತರ ಕಾಲವು ಬಂದಿತು. ಆದರೆ, ಕೆಲ ವಿದ್ವಾಂಸರಿಂದ ಜ್ಞಾನಸಂಕಲನದ ಕಾರ್ಯವು ಮಾತ್ರ ಆಯಿತು. ಎರಡು ನೂರು ವರ್ಷಗಳಲ್ಲಿ ಆದ ಉಪಯುಕ್ತ ಕಾರ್ಯವೆಂದರೆ ಇದಷ್ಟೆ! ಇದ್ದ ಜ್ಞಾನವನ್ನೆಲ್ಲ ಸಂಗ್ರಹಿಸಿ ಸ್ಟ್ರಾಬೋ ಎಂಬವನು ಭೂಗೋಲದ ವಿಷಯವಾಗಿ ಒಂದು ದೊಡ್ಡ ಗ್ರಂಥವನ್ನು ಬರೆದನು. ಅದರಂತೆ ಪ್ಲೀನೀ (ದೊಡ್ಡ) ಎಂಬ ರೋಮನ್ ವಿದ್ವಾಂಸನು ಪ್ರಾಣಿಶಾಸ್ತ್ರ ಹಾಗು ವನಸ್ಪತಿಶಾಸ್ತ್ರಗಳ ವಿಷಯಗಳನ್ನು ಸಂಗ್ರಹಿಸಿ ಪ್ರಚಂಡ ಗ್ರಂಥವನ್ನು ರಚಿಸಿದನು. ಕ್ರಿ. ಶ. ಎರಡನೆಯ ಶತಮಾನದಲ್ಲಿ ಟಾಲೇಮಿ ಎಂಬವನು ಇದೇ ಬಗೆಯಾಗಿ ಜ್ಯೋತಿಷಶಾಸ್ತ್ರವನ್ನು ಬರೆದನು. ಗ್ಯಾಲೇನನೆಂಬ ವೈದ್ಯಶಾಸ್ತ್ರಜ್ಞನು ಎಲ್ಲವನ್ನೂ ಸಂಗ್ರಹಿಸಿ ಶರೀರಶಾಸ್ತ್ರವನ್ನು ರಚಿಸಿದನು.

ಮುಂದೆ ಸುಮಾರು ೮೦೦ ವರ್ಷಗಳು ಕತ್ತಲೆಯಲ್ಲಿಯೇ ಕಳೆದವು.

ಈ ಕಾಲದಲ್ಲಿ ಯುರೋಪದಲ್ಲಿ ಯಾರೂ ಹೆಸರುವಾಸಿಯಾಗಲಿಲ್ಲವಷ್ಟೇ ಅಲ್ಲ ಪೂರ್ವಜರು ಸಂಪಾದಿಸಿದ ಜ್ಞಾನವನ್ನು ಕೂಡ ಉಳಿಸಿಕೊಳ್ಳು ವದು ಇವರಿಂದಾಗಲಿಲ್ಲ. ಮೊದಲಿನ ಜನರಂತೆ ಕಾಡುತನವು ಬಂದಿತು. ಇದಕ್ಕೆ ಒಂದೇ ಉದಾಹರಣೆ ಸಾಕು. ಗ್ರೀಕಯುಗದಲ್ಲಿ ಪೃಥ್ವಿಯು ಗೋಲಾಕಾರವೆಂಬುದು ಮನೆಯ ಮಾತಾಗಿತ್ತು. ಆದರೆ ಈ ಕತ್ತಲೆಯ ಯುಗದಲ್ಲಿ ಯುರೋಪಿಯನ್ನರು ಇದನ್ನು ಮರೆತು, ಪೃಥ್ವಿಯು ಸಪಾಟ ವೆಂದು ತಿಳಿಯಹತ್ತಿದರು. ಯಾವನಾದರೂ ಪೃಥ್ವಿಯು ಗೋಲಾಕಾರ ವಿದೆ ಎಂದು ಹೇಳಿದರೆ, ಅವನು ನಾಸ್ತಿಕನೆಂದು ಸಿದ್ಧವಾಗುತ್ತಿದ್ದಿತು.

## ರೋಮಸಾಮ್ರಾಜ್ಯ

ಕ್ರಿ. ಶ. ಪ್ರಾರಂಭದಿಂದ ಸುಮಾರು ನಾಲ್ಕುನೂರು ವರ್ಷಗಳ ವರೆಗೆ ರೋಮಸಾಮ್ರಾಜ್ಯವು ಯುರೋಪದ ಸರ್ವ ದಕ್ಷಿಣ ಪಶ್ಚಿಮ ಭಾಗಗಳನ್ನೂ, ಆಫ್ರಿಕಾದ ಉತ್ತರಭಾಗವನ್ನೂ, ಏಶಿಯಾಮೈನರ, ಸಿರಿಯಾ, ಪಾಲಿಸ್ತಾಯಿನ, ಆರ್ಮಿನಿಯಾ ಮೊದಲಾದ ಏಸಿಯಾದ ದೇಶಗಳನ್ನೂ ಏಕಛತ್ರಾಧಿಪತ್ಯದಿಂದ ಆಳಿತು. ಇಷ್ಟು ವಿಸ್ತೀರ್ಣವಾದ ಪ್ರದೇಶವನ್ನು ಪಾದಾಕ್ರಾಂತಮಾಡಿ ೩-೪ ನೂರು ವರ್ಷ ಅಪ್ರತಿಹತವಾಗಿ ಆಳುವ ಕತೃತ್ವಶಕ್ತಿಯನ್ನು ರೋಮನ್ನರು ಚನ್ನಾಗಿಯೇ ತೋರಿಸಿದರು. ರಾಜ್ಯ ಸಂಘಟನೆಯನ್ನು ಚನ್ನಾಗಿ ಮಾಡಿ ಒಂದು ಬಗೆಯಿಂದ ಆಳರಸರ ಮುಖಾಂತರ ರಾಜಭಾರ ಮಾಡುವ ಪದ್ಧತಿಯನ್ನೇ ನಿರ್ಮಿಸಿದರು. ಈ ಪದ್ಧತಿಯಿಂದ ರಾಜ್ಯವು ಬಾಳಿದ್ದಲ್ಲದೆ ಅದರಲ್ಲಿಯ ವತನದಾರರೂ, ಅಧಿ ಕಾರಿಗಳೂ, ಸಾಹುಕಾರರೂ, ಪುಷ್ಟರಾದರು. ಆದರೆ ಇದರಿಂದ ಯಾವ ಸುಪರಿಣಾಮಗಳೂ ಉಂಟಾಗಲಿಲ್ಲ. ರೋಮನ್ನರು ಜ್ಞಾನದ ಬೆಳೆವಣಿಗೆ ಗಾಗಿ ಏನೂ ಮಾಡಲಿಲ್ಲ. ಆದರೆ ಈ ದೀರ್ಘಕಾಲಾವಧಿಯಲ್ಲಿ ಅವ ರಿಂದ ಜ್ಞಾನನಿಧಿಗೆ ಎರಡು ಕಾಣಿಕೆಗಳು ಮಾತ್ರ ಅರ್ಪಿಸಲ್ಪಟ್ಟವು. ಕಟ್ಟಳೆಗಳ ವಿಷಯವಾಗಿ ಅನೇಕ ಬಗೆಯಿಂದ ವಿಚಾರಮಾಡಿ ಶಾಸನ ಶಾಸ್ತ್ರವನ್ನು ನಿರ್ಮಿಸಿದರು. ಪ್ರವಾಸದ ಅನುಕೂಲತೆಗಾಗಿ ಸಾಮ್ರಾ ಜ್ಯದಲ್ಲೆಲ್ಲ ರಾಜಬೀದಿಗಳನ್ನು ಮಾಡಿದರು. ಇದರಿಂದ ವಾಸ್ತು (ಇಂಜ

ನೀಯರಿಂಗ)ಶಾಸ್ತ್ರವು ಮುಂದರಿಯಿತು. ಉಳಿದ ಶಾಸ್ತ್ರಗಳ ಬೆಳೆವಣಿಗೆಗೆ ಅವರು ಏನೂ ಪ್ರಯತ್ನಿಸಲಿಲ್ಲ. ಅವರ ರಾಜ್ಯಪದ್ಧತಿಯಿಂದ ನಿರ್ಮಾಣ ರಾದ ಸೆಟ್ಟಿ ಸಾವುಕಾರರೂ ಈ ಕಡೆಗೆ ಲಕ್ಷ್ಯವೀಯಲಿಲ್ಲ. ಇವರ ಸಮಯವೆಲ್ಲವೂ ಸುಖೋಪಭೋಗದಲ್ಲಿಯೇ ಕಳೆಯುತ್ತಿದ್ದಿತು. ಇನ್ನು ಬಡವರಿಗಂತೂ ತಮ್ಮ ಹೊಟ್ಟೆಯ ಹೋರೆಯ ಹೊರ್ತು ಮತ್ತೊಂದನ್ನು ನೋಡಲು ಕೂಡ ಸಮಯ ಸಿಗುತ್ತಿದ್ದಿಲ್ಲ. ಹೀಗೆ ಎಲ್ಲ ವರ್ಗಗಳಿಂದ ಜ್ಞಾನೋಪಾಸನೆಯು ಸಾಗಲಿಲ್ಲ; ಇಷ್ಟೇ ಅಲ್ಲ, ಹಿಂದಿನ ಜ್ಞಾನವನ್ನು ಉಳಿಸಿಕೊಳ್ಳುವುದಕ್ಕೂ ಕೂಡ ರೋಮನ್ನರಿಗೆ ಆಗಲಿಲ್ಲ.

### ತಮೋಯುಗ

ಸುಧಾರಿಸಿದ ರೋಮ ಸಾಮ್ರಾಜ್ಯದ ಸ್ಥಿತಿಯೇ ಹೀಗಾದ ಮೇಲೆ ಅದನ್ನು ಮಣ್ಣುಗೂಡಿಸಿದ ಕಾಡುಜನರ ತಂಡದ ಬಗ್ಗೆ ವಿಚಾರಮಾಡುವದೇನು? ಈ ಕಾಡುಜನರ ಗೊಂದಲದಿಂದ ಇಡೀ ಯುರೋಪಖಂಡದ ಸಮಾಜರಚನೆಯಲ್ಲ ಬುಡಮೇಲಾಯಿತು. ಎಲ್ಲಕಡೆಗೂ ಅರಾಜಕತೆಯು ಉಂಟಾಯಿತು. ಇಂತಹ ಪರಿಸ್ಥಿತಿಯಲ್ಲಿ ಎಲ್ಲಿಯ ವಿದ್ಯೆ, ಎಲ್ಲಿಯ ಜ್ಞಾನ! ಈ ಪರಿಸ್ಥಿತಿಯು ಬದಲಾಗಿ ಸಮಾಜವು ಸ್ಥಿರಸ್ವರೂಪವನ್ನು ತಾಳಲು ೩೦೦ ವರ್ಷಗಳು ಹಿಡಿದವು. ಈ ದೀರ್ಘ ಕಾಲಾವಧಿಯನಂತರ ತಿಳಿಗೆಟ್ಟ ಭಿನ್ನರೀತಿಯಿಂದಲೇ ಆಗಲೊಲ್ಲದೇಕೆ ಸಮಾಜಕ್ಕೆ ಸ್ಥಿರಸ್ವರೂಪ ಬಂದಿತು. ಕ್ರಿ.ಶ. ೭-೮ನೇ ಶತಮಾನದ ಮಧ್ಯಕಾಲದಲ್ಲಿ ಯುರೋಪದ ಈಗಿನ ಸಮಾಜವು ರೂಪುಗೊಂಡಿತು. ಈ ಗೊಂದಲದಲ್ಲಿ ಗ್ರೀಕಜ್ಞಾನದ, ಹಾಗೂ ಸಂಸ್ಕೃತಿಯ ಪರಂಪರೆಯು ನಷ್ಟವಾಯಿತು. ಅದರ ನೆನಪುಕೂಡ ಉಳಿಯಲಿಲ್ಲ.

ಈ ಕಾಲದಲ್ಲಿ ಜ್ಞಾನದ ಕಲ್ಪನೆಯೇ ಇಲ್ಲದ್ದರಿಂದ ಎಲ್ಲರೂ ಹುಂಬರೂ ಅಕ್ಷರಶತ್ರುಗಳೂ ಆದರು. ಇದ್ದ ಅಲ್ಪಸ್ವಲ್ಪ ವಿದ್ಯೆಯು ಧರ್ಮಗುರುಗಳ ಕೈಸೇರಿತು. ವಿದ್ಯೆಯು ಧರ್ಮಪುರೋಹಿತರ ವಶವಾಗುವುದಕ್ಕಿಂತ ಅನಿಷ್ಟವು ಜಗತ್ತಿನಲ್ಲಿ ಮತ್ತೊಂದಿಲ್ಲ. ಅವು ಅವರ ಕೈಸೇರಿದೊಡನೆಯೇ ಅವುಗಳ ಇತಿಶ್ರೀಯಾಯಿತೆಂದು ತಿಳಿಯಬೇಕು.

ಜಾಗತ್ತಿನಲ್ಲಿ ಎಲ್ಲ ಕಡೆಗೂ ಇದೇ ಅನುಭವವಿದೆ. ಜನರ ಅಂಧಶ್ರದ್ಧೆಯ ಮೇಲೆಯೇ ಇವರ ಹೊಟ್ಟೆಯು ಅವಲಂಬಿಸಿರುವುದರಿಂದ ಈ ಶ್ರದ್ಧೆಯು ಬೆಳೆಯುವಂತೆಯೇ ಎಲ್ಲ ಬಗೆಯಿಂದಲೂ ಅವರು ಪ್ರಯತ್ನಿಸುವರು. ಅಂಧಶ್ರದ್ಧೆಯನ್ನು ಹೆಚ್ಚಿಸಿ, ಜನರಿಂದ ಹಣವನ್ನು ಹೆಚ್ಚೆಚ್ಚು ಸೆಳೆಯುವುದೇ ಅವರ ಮುಖ್ಯಕಾರ್ಯವಾದುದರಿಂದ ನಿಜವಾದ ಜ್ಞಾನವು ಉಂಟಾಗಬೇಕೆಂದು ಅವರು ಬಯಸುವುದಿಲ್ಲ. ಮೆಲ್ಲಮೆಲ್ಲನೆ ತಾವು ಅಭ್ಯಾಸಮಾಡುವುದನ್ನೂ ಬಿಟ್ಟುಬಿಟ್ಟು ಜ್ಞಾನವನ್ನೇ ಮುಳುಗಿಸಿ, ಸಮಾಜವನ್ನೇ ಕೆಳಕ್ಕೆ ತಳ್ಳುವರು. ಹೀಗೆ ಯುರೋಪದ ಕ್ರಿಸ್ತಿ ಭಟ್ಟರು ಇಡಿ ಯುರೋಪಖಂಡವನ್ನೇ ಅಜ್ಞಾನದಲ್ಲಿ ನೂಕಿದರಲ್ಲದೆ ತಾವೂ ಅಜ್ಞಾನಿಗಳೂ ದುರಾಗ್ರಹಿಗಳೂ ಆದರು. ನಿಜವಾಗಿ ಕಳಕಳಿಯಿಂದ ಜ್ಞಾನದ ಪ್ರಸಾರ ಮಾಡುವ ಕ್ಯಾಸಿಯೋಡೋರಸ್‌ರಂಥ ಜನರು ಇರುವುದಿಲ್ಲೆಂದಲ್ಲ; ಅಂಥವರು ಕಡಿಮೆ. ಇದ್ದರೂ ಅವರ ಆಟವು ಆ ಕಾಲಕ್ಕೆ ಸಾಗುವುದಿಲ್ಲ.

ಹೀಗೆ ಅನೇಕ ಕಾರಣಗಳಿಂದ ಯುರೋಪಖಂಡವು ಕ್ರಿ. ಶ. ೪೦೦ ರಿಂದ ೧೦೦೦ ವರೆಗೆ ಅಜ್ಞಾನಾಂಧಕಾರದಲ್ಲಿ ಕಳೆಯಿತು. ಇದಕ್ಕೆ ತಮೋಯುಗವೆನ್ನುವರು. ಆದರೆ ಈ ಕತ್ತಲೆಯೊಳಗಿಂದ ಗ್ರೀಕಜ್ಞಾನದ ಬಲದಿಂದಲೇ ಯುರೋಪವು ಮತ್ತೆ ಬೆಳಕಿಗೆ ಬಂದಿತು. ಅದು ಹೇಗೆ ಎಂಬುದನ್ನೇ ನಾವು ನೋಡುವುದಿದೆ.

### ಅರಬರ ಉತ್ಕರ್ಷ

ಗ್ರೀಸವು ನಷ್ಟವಾಗುವ ಮುಂದೆ ತನ್ನ ಜ್ಞಾನನಿಧಿಯನ್ನು ಅಲೇಕ್ಝಾಂಡ್ರಿಯಕ್ಕೆ ಒಪ್ಪಿಸಿತು. ಅಲೇಕ್ಝಾಂಡ್ರಿಯದಿಂದ ಈ ಜ್ಞಾನಗಂಗೆಯು ಬಹುಮುಖವಾಗಿ ದಿಕ್ಕುದಿಕ್ಕಿಗೆ ಹರಿಯಿತು. ಮುಂದೆ ಅಲೇಕ್ಝಾಂಡ್ರಿಯಾವು ಮುಸಲ್ಮಾನರ ವಶವಾಯಿತು. ಆ ಕಾಲಕ್ಕೆ ಗ್ರಂಥಾಲಯವು ನಾಶವಾಗಿ ಎಷ್ಟೋ ಜ್ಞಾನವು ನಷ್ಟವಾಯಿತು. ಇದಕ್ಕಿಂತ ಮೊದಲೇ ಎಷ್ಟೋ ವಿದ್ವಾಂಸರು ರಾಜಾಶ್ರಯವನ್ನು ಪಡೆಯುವುದಕ್ಕಾಗಿ

ಬಾಯುರ್ಘೂನ್ನಿಯುವು ಪಟ್ಟಣಕ್ಕೆ ಹೋಗಿದ್ದರು. ಹೋಗುವ ಮುಂದೆ ಶಕ್ಯವಿದ್ದಷ್ಟು ಗ್ರಂಥಾಲಯ ಭಾಗವನ್ನೂ ಒಯ್ದಿದ್ದರು. ಆದರೆ ಈ ವಿದ್ಯಾಪೀಠದ ಜ್ಞಾನವನ್ನು ಸಂಪಾದಿಸಿದ ಗುಂಪು ಇನ್ನೊಂದೆಡೆಗೆ ಇದ್ದಿತು. ಸಿರಿಯಾದಲ್ಲಿ ನೆಸ್ಟೋರಿಯನ್-ಕ್ರಿಸ್ತಿ ಎಂಬ ಸಂಪ್ರದಾಯದ ಒಂದು ಪಂಗಡವಿದ್ದಿತು. ಅವರು ಜ್ಞಾನೋಪಾಸಕರು. ಅವರು ಗ್ರೀಕರ ವಿದ್ಯೆಯಲ್ಲಿ ಪಾರಂಗತರಾಗಿ ಅದನ್ನು ಕಾದಿದ್ದರು. ಮುಂದೆ ೭ನೆಯ ಶತಮಾನದಲ್ಲಿ ಮುಹಮ್ಮದನು ಮುಸಲ್ಮಾನಧರ್ಮವನ್ನು ಸ್ಥಾಪಿಸಿದನು. ಅರಬರ ರಾಷ್ಟ್ರವು ಉದಯವಾಯಿತು. ೭ ನೆಯ ಶತಮಾನದಲ್ಲಿ ಅರಬರು ಸಿರಿಯಾ ಪ್ರಾಂತದ ದಮಾಸ್ಕಸದಲ್ಲಿ ಖಿಲಾಪತ್‌ವನ್ನು ಸ್ಥಾಪಿಸಿದರು. ಹೊಸ ಹುರುಪಿನ ಈ ಅರಬರು ನೆಸ್ಟೋರಿಯನ್ ಜನರಿಂದ ಗ್ರೀಕರ ವಿದ್ಯೆಯನ್ನು ಸಂಪಾದಿಸಿದರು. ಮುಂದೆ ಅರಬರು ಪ್ರಬಲರಾದ ನಂತರ ಬಾಯುರ್ಘೂನ್ನಿಯುಮದಲ್ಲಿಯ ಗ್ರೀಕ ಗ್ರಂಥಗಳ ಭಾಷಾಂತರವನ್ನು ಮಾಡಿಕೊಂಡರು. ಮತ್ತು ಅಲೇಕ್ಸಾಂಡ್ರಿಯಾದಲ್ಲಿಯ ಗ್ರಂಥಸಂಗ್ರಹದ ಉಪಯೋಗವನ್ನು ಮಾಡಿಕೊಂಡರು. ಹೀಗೆ ಅರಬರು ಗ್ರೀಕರ ವಿದ್ಯೆಯ ಹಕ್ಕುದಾರರಾದರು.

ಅರಬರ ರಾಜ್ಯವು ಒಂದು ಕಾಲಕ್ಕೆ ಸ್ಪೇನದಿಂದ ಪೂರ್ವಕ್ಕೆ ಸಿಂಧೂ ನದಿಯ ವರೆಗೆ ಹಬ್ಬಿತ್ತು. ಇಂತಹ ಏರಿಕೆಯ ಕಾಲದಲ್ಲಿಯೂ ಕೂಡ ಅವರು ಜ್ಞಾನೋಪಾಸನೆಯನ್ನು ಬಿಡಲಿಲ್ಲ. ಇದು ಮಾನವ ಜನಾಂಗಕ್ಕೆ ಅವರು ಮಾಡಿದ ಉಪಕಾರವೆಂದೇ ಹೇಳಬಹುದು. ಅವರು ಗ್ರೀಕ ವಿದ್ಯೆಯನ್ನು ಕಾದರಲ್ಲದೆ ಅನೇಕ ವಿಧವಾಗಿ ಅದನ್ನು ಬೆಳೆಸಿದರು. ಅವರ ರಾಜ್ಯದಲ್ಲಿ ಅನೇಕ ವಿದ್ಯಾಪೀಠಗಳಿದ್ದು ಅವೆಲ್ಲವೂ ಸರಕಾರದಿಂದಲೇ ನಡೆಸಲ್ಪಡುತ್ತಿದ್ದವು. ಅಲ್ಲಿ ಸಾವಿರಾರು ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಸ್ಪೇನದಲ್ಲಿಯ ಕಾಡೋರ್ವಾ ವಿದ್ಯಾಪೀಠವು ಅರಬರದೇ. ಇಲ್ಲಿ ಕೇವಲ ಮುಸಲ್ಮಾನರಷ್ಟೇ ಅಲ್ಲ-ಫ್ರಾನ್ಸದ ಕ್ರಿಸ್ತಿ ವಿದ್ಯಾರ್ಥಿಗಳು ಕೂಡ ಬಂದು ಸರ್ವಶಾಸ್ತ್ರಗಳ ಅಧ್ಯಯನ ಮಾಡಿಕೊಂಡು ಹೋಗುತ್ತಿದ್ದರು. ಈ ವಿದ್ಯಾಪೀಠದಲ್ಲಿ ಸುಪ್ರಸಿದ್ಧ ಶಾಸ್ತ್ರಜ್ಞನಾದ ಅವ್ಹರೋಜಸು (೧೧೨೬-೧೯೯೮) ಅರಿಸ್ಟಾಟಲನ ಶಾಸ್ತ್ರೀಯ ಪದ್ಧತಿಯ

ಅಭಿಮಾನಿಯಾಗಿದ್ದನು. ಧರ್ಮ ಹಾಗು ಶಾಸ್ತ್ರಜ್ಞಾನಗಳು ಬೇರೆ ಬೇರೆಯಾಗಿರಬೇಕೆಂದೇ ಅವನು ಪ್ರತಿಪಾದಿಸುತ್ತಿದ್ದನು.

ಅರಬರು ಸರ್ವ ಶಾಸ್ತ್ರಗಳ ಅಭ್ಯಾಸವನ್ನು ಬೆಳೆಸಿದರು. ಅವರ ರಾಜ್ಯವಿಸ್ತಾರದಿಂದ ಇನ್ನೊಂದು ಮಹತ್ವವಾದ ಸಂಗತಿಯನ್ನು ಸಾಧಿಸಲು ಅವರಿಗೆ ಅನುಕೂಲವಾಯಿತು. ಪೂರ್ವ ಪಶ್ಚಿಮಗಳ ವಿದ್ಯೆಯ ಸಮ್ಮೇಲನವೇ ಆ ಮಹತ್ಕಾರ್ಯವು. ಪೂರ್ವ ರಾಷ್ಟ್ರಗಳಾದ ಚೀನ, ಹಿಂದುಸ್ತಾನಗಳ ಸಂಬಂಧವು ಅವರಿಗೆ ಇದ್ದುದರಿಂದ ಇಲ್ಲಿರುವ ಉಪಯುಕ್ತ ಜ್ಞಾನವನ್ನು ಕಲಿತು ಅದನ್ನು ಯುರೋಪಿಯನ್ನರಿಗೆ ಕಲಿಸಿದರು. ಅದರಂತೆಯೇ ಗ್ರೀಕರ ಜ್ಞಾನನಿಧಿಯನ್ನೂ ತಾವು ಶೋಧಿಸಿದ ಶೋಧಗಳನ್ನೂ ಕೂಡಿಸಿ, ಒಟ್ಟಿನಲ್ಲಿ ಜಗತ್ತಿನ ಜ್ಞಾನನಿಧಿಯನ್ನು ಹೆಚ್ಚಾಗಿ ಬೆಳೆಸಿದರು. ಈ ಕೀರ್ತಿಯು ಅರಬರಿಗೆ ಇದೆ. ಅದಕ್ಕಾಗಿ ಮಾನವ ಜನಾಂಗವು ಅವರಿಗೆ ಧನ್ಯವಾದಗಳನ್ನು ಅರ್ಪಿಸುವುದು ಅವಶ್ಯವಿದೆ.

ಪಾಶ್ಚಾತ್ಯ ಹಾಗು ಭಾರತೀಯ ಜ್ಯೋತಿಷ್ಯಶಾಸ್ತ್ರಗಳನ್ನು ಅರಬರು ಚೆನ್ನಾಗಿ ಅಭ್ಯಾಸಮಾಡಿದ್ದಲ್ಲದೆ ತಮ್ಮದನ್ನೂ ಅದರಲ್ಲಿ ಸೇರಿಸಿದರು. ಅಂಕಗಣಿತವನ್ನು ಭಾರತೀಯರಿಂದಲೇ ಕಲಿತರು. ಸಂಖ್ಯಾಲೇಖನ, ದಶಾಂಶ ಅಪೂರ್ಣಾಂಕಗಳನ್ನು ಭಾರತೀಯರಿಂದಲೇ ಕಲಿತು ಪಾಶ್ಚಾತ್ಯರಿಗೆ ಕಲಿಸಿದರೆಂದು ತರ್ಕವಿದೆ. ಶೂನ್ಯಕ್ಕೆ ಪೂಜಿ ಕೊಡುವುದನ್ನು ಭಾರತೀಯರಿಂದಲೇ ಕಲಿತು ಯುರೋಪದಲ್ಲಿ ಅದನ್ನು ಪ್ರಸಾರಮಾಡಿದರು. ಬೀಜಗಣಿತವನ್ನು ಮಾತ್ರ ಅವರು ಸ್ವತಃ ಸಿದ್ಧಪಡಿಸಿದರೆಂದು ಪಾಶ್ಚಾತ್ಯರೂ, ಅದರ ಮೂಲತತ್ವಗಳನ್ನು ಭಾರತೀಯರಿಂದಲೇ ಕಲಿತರೆಂದು ಭಾರತೀಯರೂ ಅನ್ನುವರು. ಹೇಗಿದ್ದರೂ ಬೀಜಗಣಿತವನ್ನು ಪಾಶ್ಚಾತ್ಯರು ಕಲಿತದ್ದು ಅರಬರಿಂದ ಎಂಬುದು 'ಅಲ್‌ಜಿಬ್ರಾ' ಎಂಬ ಅರಬೀ ಹೆಸರೇ ಹೇಳುತ್ತದೆ. ರಸಾಯನಶಾಸ್ತ್ರದ ಅಭ್ಯಾಸವನ್ನೂ ಅವರು ಮಾಡಿದ್ದರು. ಈ ಶಾಸ್ತ್ರವು ಕಿಮಿಯಾದಿಂದ ಹುಟ್ಟಿತು. ಅರಬಿಯಲ್ಲಿಯ alchemy ಎಂಬ ಶಬ್ದವೇ ಹೇಳುತ್ತದೆ. ಇದರಿಂದಲೇ ಪಾಶ್ಚಾತ್ಯರು Chemistry ಎಂದು

ಹೆಸರಿಟ್ಟರು. ಅರಬರ **ಗೀಬರನೆಂಬುವವನು** (ಸು. ಕ್ರಿ. ಶ. ೮೦೦) **ಈ** ರಸಾಯನಶಾಸ್ತ್ರದ ಜನಕನು. ಅವನು ಉಷ್ಣತೆಯಿಂದಲೂ, **ಊರ್ಧ್ವ** ಪಾತನದಿಂದಲೂ ಮಿಶ್ರದ್ರವಗಳ ವಿಭಜನೆ ಮಾಡುವುದನ್ನು ಹುಡುಕಿದನು. ಅನೇಕ ಆಮ್ಲಗಳನ್ನು ಕಂಡುಹಿಡಿದನು.

ಅರಬರು ಎಲ್ಲಕ್ಕೂ ಹೆಚ್ಚು ಪ್ರಾವೀಣ್ಯವನ್ನು ತೋರಿಸಿದ್ದು ವೈದ್ಯಕದಲ್ಲಿ. ಇದನ್ನು ಕೂಡ ಭಾರತೀಯರಿಂದಲೇ ಕಲಿತರೆಂದು ಅನೇಕ ಭಾರತೀಯ ವಿದ್ವಾಂಸರ ತರ್ಕ. ಸ್ವತಃ ಅರಬರೂ ಇದನ್ನು ಒಪ್ಪುತ್ತಾರೆ. ಚರಕ, ಶುಶ್ರುತಗಳು ಅರಬೀಭಾಷೆಯಲ್ಲಿ ಭಾಷಾಂತರಿಸಲ್ಪಟ್ಟಿದ್ದವು. ಇದಲ್ಲದೆ ಅಲೇಕ್ಝಾಂಡ್ರಿಯಾದಲ್ಲಿಯ ವೈದ್ಯಕದ ಅಭ್ಯಾಸವನ್ನು ಅವರು ಚೆನ್ನಾಗಿ ಮಾಡಿದ್ದರು. ಇದಲ್ಲದೆ ಅವರು ಈ ಶಾಸ್ತ್ರದಲ್ಲಿ ಮಾಡಿದ ಪ್ರಗತಿಯು ಅಭಿನಂದನೀಯವಿದೆ. ಶಸ್ತ್ರಕ್ರಿಯೆ, ಔಷಧೋಪಚಾರಗಳಲ್ಲಿ ಅವರು ಪ್ರಾವೀಣ್ಯವನ್ನು ಸಂಪಾದಿಸಿದ್ದರು. ಅನೇಕ ಹೊಸ ಶೋಧಗಳನ್ನು ಮಾಡಿದ್ದರು. ಅತ್ಯಂತ ಗಂಡಾಂತರದ ಶಸ್ತ್ರಕ್ರಿಯೆಯನ್ನು ಕೂಡ ಮಾಡುವ ಶೋಧವನ್ನು ಮಾಡಿದ್ದರು. ಅವರು ಮಾಡಿದ ಔಷಧಗಳ ಶೋಧದ ನಂತರ ಹೆಚ್ಚಿಗೆ ಏನೂ ವೈದ್ಯಕದಲ್ಲಿ ಇನ್ನೂ ಪ್ರಗತಿಯಾಗಿಲ್ಲ. ಅವರು ಅಲೇಕ್ಝಾಂಡ್ರಿಯಾದಲ್ಲಿಯ ಶಾಸ್ತ್ರಜ್ಞರು ಉಪೇಕ್ಷಿಸಿದ ಶರೀರ ವ್ಯಾಪಾರಶಾಸ್ತ್ರವನ್ನೂ ಅಭ್ಯಾಸಮಾಡಿದರು.

### ಜ್ಞಾನದರ್ಶನ

ಪಾಶ್ಚಾತ್ಯರಿಗೆ ಗ್ರೀಕವಿದ್ಯೆಯ ನಿಧಿಯ ದರ್ಶನವು ಪುನಃ ಹೇಗಾಯಿತೆಂಬುದು ವಾಚಕರಿಗೆ ಹೊಳೆದಿರಬಹುದು. ಅರಬರಿಂದ **ಪೋಷಿಸಿ** ಬೆಳೆಸಲ್ಪಟ್ಟ ಗ್ರೀಕವಿದ್ಯಾನಿಧಿಯು ಅರಬರ ಮುಖಾಂತರವಾಗಿ ಯುರೋಪಿಯನ್ನರಿಗೆ ಮತ್ತೆ ದೊರೆಯಿತು. ಅಂದಿನಿಂದ ಅಂದರೆ ಕ್ರಿ. ಶ. ೯೦೦ ರಿಂದ ಸಾವಿರದ ವರೆಗೆ ಯುರೋಪದ ಕತ್ತಲೆಯ ಯುಗವು ಮುಗಿದು ಮಧ್ಯಯುಗವು ಪ್ರಾರಂಭವಾಯಿತು. ಮುಂದೆ ಧರ್ಮ ಯುದ್ಧದ ( Crusades ) ಕಾಲದಲ್ಲಿ ಮುಸಲ್ಮಾನ ಸಂಸ್ಕೃತಿಯ ಸಂಬಂಧವು ಮತ್ತೆ ಬಂದುದರಿಂದ ಅವರ ದೃಷ್ಟಿಯು ಹೆಚ್ಚು ವಿಸ್ತೃತ

ವಾಯಿತು. ಹೀಗೆ ಒಂದೊಂದೇ ಕಾರಣದಿಂದ ಯುರೋಪದ ಸುಪ್ತಾ ವಸ್ಥೆಯಲ್ಲಿದ್ದ ವಿವೇಚಕಬುದ್ಧಿಯು ಜಾಗೃತವಾಗಿ ಮತ್ತೆ ಮೆಲ್ಲಮೆಲ್ಲಗೆ ವಿದ್ಯೆಯ ಅಭ್ಯಾಸಕ್ಕೆ ಪ್ರಾರಂಭವಾಯಿತು.

ಅರಬರ ಅನುಕರಣದಿಂದಲೂ ಜೀವನದ ಆವಶ್ಯಕತೆಯಿಂದಲೂ ವೈದ್ಯಶಾಸ್ತ್ರದ ಅಭ್ಯಾಸವು ಮೊದಲು ಪ್ರಾರಂಭವಾಯಿತು. ಇದರೊ ಡನೆಯೇ ಉಳಿದ ಶಾಸ್ತ್ರಗಳ ಅಧ್ಯಯನಕ್ಕೂ ಚಲನೆ ದೊರೆಯಿತು. ರಾಜರ್ ಬೇಕನ್ನನು (ಕ್ರಿ. ಶ. ೧೨೧೦-೧೨೯೪) ಈ ಮಧ್ಯಯುಗದ ಕಲ್ಪಕನೂ ಧೈರ್ಯಶಾಲಿಯೂ ಆದ ಮಹಾಪುರುಷನು. ಇವನು ಪ್ರತ್ಯಕ್ಷ ಪ್ರಮಾಣವನ್ನು ನಂಬುವವನು. ಅವನು ತನ್ನ ಗ್ರಂಥದಲ್ಲಿ ಅನೇಕ ಬಗೆಯ ಪ್ರಯೋಗಗಳನ್ನೂ ಶೋಧಗಳನ್ನೂ ಬರೆದಿಟ್ಟಿದ್ದಾನೆ. ಬಂದೂಕು ಹಾಗು ಮದ್ದುಗುಂಡುಗಳ ಕೃತಿಯ ಉಲ್ಲೇಖವೂ ಇವನ ಗ್ರಂಥದಲ್ಲಿದೆ. ಶಬ್ದಪ್ರಮಾಣವನ್ನು ಅವಲಂಬಿಸಬೇಡ. ಧರ್ಮಕ್ಕೂ ಶಾಸ್ತ್ರಜ್ಞಾನಕ್ಕೂ ಏನೂ ಸಂಬಂಧವಿಲ್ಲ. ಸ್ವತಃ ವಿಚಾರ ಮಾಡಿರಿ. ಜ್ಞಾನ ಸಂಪಾದಿಸಿರಿ ಎಂಬುದೇ ಇವನ ಮಹಾಮಂತ್ರ.

ಶಾಸ್ತ್ರಜ್ಞಾನವನ್ನು ಹೆಚ್ಚಿಸಬೇಕೆಂದು ಹಾತೊರೆಯುವ ಪುರು ಷರು ಹುಟ್ಟುವ ಸಮಯದಲ್ಲಿಯೇ ಜೀವನೋಪಯುಕ್ತ ಕಲೆಗಳ ಉದ ಯವೂ ಯುರೋಪದಲ್ಲಿ ಪ್ರಾರಂಭವಾಯಿತು. ಜ್ಞಾನಪ್ರಸಾರಕ್ಕೆ ಅತ್ಯಂತ ಸಹಾಯಕವಾದ ಕಾಗದವನ್ನು ಸಿದ್ಧಪಡಿಸುವ ಕಲೆಯನ್ನು ಅರಬರು ಚೀನೀಯರಿಂದ ಕ್ರಿ. ಶ. ೭೫೦ರಲ್ಲಿ ಕಲಿತರು. ಅವರು ಪಾಶ್ಚಾತ್ಯ ರಿಗೆ ಕಲಿಸಿದರು. ಮುಂದೆ ಯುರೋಪಿಯರಿಂದ ಹದಿಮೂರನೆಯ ಶತ ಮಾನದಲ್ಲಿ ಅನೇಕ ಸುಧಾರಣೆಗಳನ್ನು ಹೊಂದಿ ಕಾಗದವು ವಿಪುಲವಾಗಿ ದೊರೆಯಹತ್ತಿತು. ಆದರೆ ಮುದ್ರಣಕಲೆಯು ಶೋಧವಾಗಿ ರೂಢಿಯಲ್ಲಿ ಬರಲು ೩೫೦ ವರ್ಷಗಳು ಹಿಡಿದವು. ೧೪೫೦ರಲ್ಲಿ ಈ ಕಲೆಯ ಶೋಧ ವಾಯಿತು. ಬಹಿರ್ಗೋಲ ಹಾಗು ಅಂತರ್ಗೋಲ ಕಾಚುಗಳನ್ನು ನಿರ್ಮಿಸುವುದು ಮೊದಲೆ ಗೊತ್ತಿದ್ದಿತು. ಅದರಿಂದ ಚಾಳೀಸಗಳು ಮಾಡ ಲ್ಪಟ್ಟವು. ಗಡಿಯಾರಗಳು ೧೪ನೆಯ ಶತಮಾನದಲ್ಲಿ ಪ್ರಚಾರಕ್ಕೆ ಬಂದವು. ಬಂದೂಕು ಹಾಗು ಮದ್ದುಗುಂಡುಗಳು ಚೀನ ಅಥವಾ ಭಾರತದಿಂದ

ಯುರೋಪಕ್ಕೆ ಹೋದವು. ಆದರೆ ಯುರೋಪಿಯರು ಅವುಗಳಲ್ಲಿ ಸುಧಾರಣೆಗಳನ್ನು ಮಾಡಿ ತೀಕ್ಷ್ಣಸಂಹಾರಕ ಶಸ್ತ್ರಗಳನ್ನು ನಿರ್ಮಿಸಿದಂತೆ, ಪೌರ್ವಾತ್ಯರಿಗೆ ಸಾಧಿಸಲಿಲ್ಲ. ಯುದ್ಧಗಳಲ್ಲಿ ಯುರೋಪಿಯನ್ ರಾಷ್ಟ್ರಗಳು ಬಂದೂಕು ಹಾಗು ತೋಫುಗಳ ಉಪಯೋಗವನ್ನು ೧೪ನೆಯ ಶತಮಾನದಿಂದಲೇ ಮಾಡುತ್ತಿದ್ದಾರೆ. ೧೪-೧೫ನೆಯ ಶತಮಾನಗಳಲ್ಲಿ ಯುರೋಪದಲ್ಲಿ ಜೀವನಕ್ಕೆ ಸಂಬಂಧಿಸಿದ ಮಹತ್ವದ ೩-೪ ಸಂಗತಿಗಳ ಶೋಧವಾಯಿತು. ಮೊದಲನೆಯದು ಮುದ್ರಣವು. ಇದರಿಂದ ಜ್ಞಾನಪ್ರಸಾರದ ಕಾರ್ಯವು ಎಷ್ಟು ಸುಲಭವಾಯಿತೆಂಬುದನ್ನು ಹೇಳಲಿಕ್ಕೇಬೇಡ. ಬಂದೂಕು ಹಾಗು ತೋಫುಗಳಂಥ ಸಂಹಾರಕ ಶಸ್ತ್ರಗಳಿಂದ ಜಗತ್ತಿನ ಇತಿಹಾಸದ ಗತಿಯೇ ಹೇಗೆ ಬದಲಾಯಿತೆಂಬುದು ಎಲ್ಲರ ಅನುಭವದ ಮಾತು. ಭಾರತವನ್ನು ಬ್ರಿಟಿಶರು ಗೆದ್ದುದು ಈ ಸುಧಾರಿಸಿದ ಸಂಹಾರಕಗಳಿಂದಲೇ ಎಂಬುದು ಎಲ್ಲ ಇತಿಹಾಸಜ್ಞರಿಗೆ ಮಾನ್ಯವಿದೆ. ಜಗತ್ತಿನಲ್ಲೆಲ್ಲ ವ್ಯಾಪಿಸಿದ ಪಾಶ್ಚಾತ್ಯರ ಪ್ರಭುತ್ವಕ್ಕೆ ಅತ್ಯಂತ ಘಾತುಕವಾದ ಈ ಸಂಹಾರಕ ಸಾಧನಗಳೇ ಮುಖ್ಯ ಕಾರಣ.

೧೫ನೆಯ ಶತಮಾನದಲ್ಲಿಯೇ ಯುರೋಪದಲ್ಲಿ ಮಧ್ಯಯುಗವು ಮುಗಿದು ನವಯುಗವು ಪ್ರಾರಂಭವಾಯಿತು. ಕ್ರಿ. ಶ. ೧೪೫೩ರಲ್ಲಿ ತುರ್ಕರು ಬಾಯಝಾನ್ಸಿಯಮ್ (ಕಾನ್‌ಸ್ಟಾಂಟಿನೋಪಲ) ವನ್ನು ಗೆದ್ದುದರಿಂದ ಅಲ್ಲಿಯ ಗ್ರೀಕ ಪಂಡಿತರೆಲ್ಲ ಗುಡಚಾಪಿಯನ್ನು ಕಟ್ಟಿದರು. ಇಟಲೀ ದೇಶದಲ್ಲಿಯ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಆಶ್ರಯ ಪಡೆದರು. ಕೂಡಲೇ ಗ್ರೀಕ ವಿದ್ಯಾಭ್ಯಾಸಕ್ಕೆ ಪ್ರಾರಂಭವಾಯಿತು. ತಮ್ಮ ಧರ್ಮಗುರುಗಳು ಹೇಳುವ ಗುಬ್ಬಿ-ಕಾಗೆಯ ಕಥೆಗಳಿಗಿಂತ ಗ್ರೀಕರ ವಿದ್ಯೆಯು ಎಷ್ಟೋ ಪಟ್ಟು ಚೆನ್ನಾಗಿರುವುದೆಂದೂ ಉಪಯುಕ್ತವಿರುವುದೆಂದೂ ಜನರಲ್ಲಿ ಜಾಗ್ರುತಿಯಾಯಿತು. ಇದರಿಂದ ಕ್ರಿಸ್ತಭಟ್ಟರ ಮೇಲಿನ ವಿಶ್ವಾಸವು ಮೆಲ್ಲನೆ ಹಾರಹತ್ತಿತು ಅರಿಸ್ಟಾಟಲನ ಶಾಸ್ತ್ರಗಳ ಅಭ್ಯಾಸವು ಭರದಿಂದ ಸಾಗಿ ಜನರಲ್ಲಿ ಚಿಕಿತ್ಸಕ ಬುದ್ಧಿಯು ಬೆಳೆಯಿತು. ಎದುರಿಗೆ ಮಾತಾಡುವ ಧೈರ್ಯವು ಯಾರಿಗೂ ಇದ್ದಿಲ್ಲ. ಆದರೆ ಎಷ್ಟೋ ವಿದ್ವಾಂಸರು ಧರ್ಮಗುರುಗಳ ಭೀತಿಯನ್ನು ಬದಿಗಿರಿಸಿ, ಶಾಸ್ತ್ರ

ಗಳ ಅಭ್ಯಾಸವನ್ನು ಮಾಡಿಸಲು ಮತ್ತು ಧರ್ಮವಿರೋಧವಾದ ಸಿದ್ಧಾಂತಗಳನ್ನು ಮಂಡಿಸಲು ಪ್ರಾರಂಭಿಸಿದರು. ಕೋಲಂಬಸ, ಮ್ಯಾಜಿಲನ ಮೊದಲಾದವರ ಸಾಹಸದ ಪ್ರವಾಸದಿಂದ ಜನರು ಎಚ್ಚತ್ತರು. ಪೋಪನ ಹಾಗು ರೋಮರಾಜ್ಯಬಿಟ್ಟು ಜಗತ್ತು ಇನ್ನೂ ವಿಸ್ತೀರ್ಣ ವಿದೆಯೆಂಬುದನ್ನು ಅರಿತರು. ಜಗತ್ತಿನ ದೃಷ್ಟಿಯಿಂದ ಇವರ ಅಧಿಕಾರವು ಎಷ್ಟು ಸಂಕುಚಿತ ಹಾಗು ಕ್ಷುದ್ರವಿರುವುದೆಂಬ ಕಲ್ಪನೆಯು ಹೊಳೆದು ಪೋಪರ ಅಧಿಕಾರದ ಮೇಲಿನ ವಿಶ್ವಾಸವು ಹಾರಿಹೋಯಿತು.

## ಉದ್ಯೋಗಕ ತುಲನೆ

೧೫ನೆಯ ಶತಮಾನದ ಭಾರತ ಹಾಗು ಯುರೋಪದ ಪರಿಸ್ಥಿತಿಯನ್ನು ತುಲನೆಮಾಡಿದರೆ ನಮಗೆ ಏನು ಕಾಣುವುದು? ಪಾಶ್ಚಾತ್ಯರು ಆ ಕಾಲಕ್ಕೆ ಹೋಕಾಯಂತ್ರ, ಗಡಿಯಾರ, ಚಾಳೀಸಗಳನ್ನು ಉಪಯೋಗಿಸುತ್ತಿದ್ದರು. ಭಾರತದಲ್ಲಿ ಅವುಗಳ ಸುಳುವು ಕೂಡ ಇರಲಿಲ್ಲ. ಇಷ್ಟೇ ಅಲ್ಲ–೨೦ ನೇ ಶತಮಾನದಲ್ಲಿ ಕೂಡ ನಮಗೆ ಅವುಗಳನ್ನು ಮಾಡಲು ಬರುವದಿಲ್ಲ. ಯುರೋಪದಲ್ಲಿ ಮುದ್ರಣಕಲೆಯು ಪ್ರಾರಂಭವಾಗಿ ೫೦ ವರ್ಷಗಳಾಗಿದ್ದವು. ಇಲ್ಲಿ ಅದರ ಗಂಧಕೂಡ ಇರಲಿಲ್ಲ. ಭಾರತೀಯ ವ್ಯಾಪಾರಸ್ಥರು ಅನೇಕ ದೇಶಗಳೊಡನೆ ವ್ಯಾಪಾರವನ್ನು ಮಾಡುತ್ತಿದ್ದರು. ಆದರೆ ಯುರೋಪದ ವ್ಯಾಪಾರಿಗಳಲ್ಲಿದ್ದ ಸಾಹಸ, ಧೈರ್ಯಗಳು ನಮ್ಮವರಲ್ಲಿ ಕಾಣುವದಿಲ್ಲ. ವಾಸ್ತುವಿದ್ಯೆ, ಶಿಲ್ಪಕಲಾ, ಉದ್ಯೋಗ ಮೊದಲಾದವುಗಳಲ್ಲಿ ಅವರ ಸರಿಸಮಾನವಿರಬೇಕು ಇಲ್ಲವೆ ಭಾರತೀಯರು ಸ್ವಲ್ಪ ಮುಂದೆ ಇರಬೇಕು. ನೆಯ್ಗೆ, ಸೂಕ್ಷ್ಮ ಅರಿವೆಗಳನ್ನು ನಿರ್ಮಿಸುವ ಕಲೆ, ಅದರಂತೆ ಧಾತುಗಳ ಕೆಲಸ, ಕುಂದಣದ ಕೈಗಾರಿಕೆ ಮೊದಲಾದವುಗಳಲ್ಲಿ ಪಾಶ್ಚ್ಯಾತ್ಯರಿಗಿಂತ ಭಾರತೀಯರು ಬಹಳ ಮುಂದುವರಿದಿದ್ದರು. ಭಾರತೀಯರಂಥ ಸೂಕ್ಷ್ಮವಸ್ತುಗಳನ್ನು ನಿರ್ಮಿಸಲು ಪಾಶ್ಚಾತ್ಯರಿಗೆ ಸಾಧಿಸಲೇ ಇಲ್ಲ. ಇರಲಿ.

## ಆಧುನಿಕಶಾಸ್ತ್ರೀಯ ಯುಗ

ಇಟಲಿಯಲ್ಲಿಯ ಫ್ಲಾರೆನ್ಸ ಪಟ್ಟಣದಲ್ಲಿ ಲಿಯೊನಾರ್ಡೊ ಡ ವ್ಹಿನ್ಸಿ

ಎಂಬ ಶಾಸ್ತ್ರಜ್ಞನು (೧೪೫೨-೧೫೧೯) ಆಗಿಹೋದನು. ಇವನು ದೊಡ್ಡ ಪ್ರಾಣಿಶಾಸ್ತ್ರಜ್ಞನೂ ಹಾಗೂ ಶರೀರಶಾಸ್ತ್ರಜ್ಞನೂ ಇದ್ದು ಭೂಗರ್ಭದಲ್ಲಿಯ ಅವಶೇಷಗಳ ಸೂಕ್ಷ್ಮ ಅಭ್ಯಾಸವನ್ನು ಮಾಡಿದ್ದನು. ವಿಶಿಷ್ಟ ರೀತಿಯಿಂದ ಯಂತ್ರವನ್ನು ನಿರ್ಮಿಸಿದರೆ ಮನುಷ್ಯನು ಆಕಾಶದಲ್ಲಿ ಹಾರಾಡಬಲ್ಲನೆಂದು ಅವನು ಅನ್ನುತ್ತಿದ್ದನು. ಮುಂದೆ ಕೆಲಕಾಲದಲ್ಲಿಯೇ ಕೋಪರ್ನಿಕಸ, ಗ್ಯಾಲಿಲಿವೋ, ಕೆಪ್ಲರ ಮೊದಲಾದ ಘನವಿದ್ವಾಂಸರು ಹುಟ್ಟಿದರು. ಅವರು ಪೋಪನ ಹಾಗು ಬಾಯಬಲ್ಲಿನ ಮತಕ್ಕೆ ಹೊಂದದ ಹೊಸ ಸಿದ್ಧಾಂತಗಳನ್ನು ಮಂಡಿಸಿದ್ದರಿಂದ ಜನರಲ್ಲಿ ವಿಲಕ್ಷಣವಾದ ಚಳವಳಿಯುಂಟಾಗಿ ವಿಚಾರಕ್ರಾಂತಿಯಾಯಿತು.

೧೭ನೆಯ ಶತಮಾನದ ಪ್ರಾರಂಭಕ್ಕೆ ಲಾರ್ಡ ಬೇಕನ್ (ಕ್ರಿ. ಶ. ೧೫೬೧-೧೬೨೬) ಎಂಬವನು ಮುಂದೆ ಬಂದನು. ಅವನು ಹಿಂದಿನ ಜ್ಞಾನದ ಪ್ರಗತಿಯನ್ನು ಅಳೆದು ಮುಂದಿನ ಜ್ಞಾನದ ದಾರಿಯನ್ನು ತೋರಿಸಿದನು. ಗಣಿತಜ್ಞ, ಹಾಗು ತತ್ವಜ್ಞಾನಿಯೆಂದು ಹೆಸರಾದ ಫ್ರಾನ್ಸದ ಡೇಕಾರ್ಟನು (ಕ್ರಿ. ಶ. ೧೫೯೬—೧೬೫೦) ಇದೇ ಸಮಯದವನು. ಇವನು ಬೀಜಭೂಮಿತಿಯನ್ನು ಹುಡುಕಿದ್ದಲ್ಲದೆ, ತತ್ವಜ್ಞಾನವನ್ನು ಧರ್ಮದಿಂದ ಬೇರ್ಪಡಿಸಿ, ಜಗತ್ತಿನ ಉತ್ಪತ್ತಿ ಹಾಗು ಅನೇಕ ತತ್ವಗಳ ಮೂಲವನ್ನು ಸ್ವತಂತ್ರರೀತಿಯಿಂದ ಗೊತ್ತುಹಚ್ಚಲು ಯತ್ನಿಸಿದನು. ಇವನು ಬುದ್ಧಿ ಪ್ರಾಮಾಣ್ಯವಾದಿಯಿದ್ದು ಯುರೋಪದ ಅರ್ವಾಚೀನ ಶಾಸ್ತ್ರವಿಚಾರದ ಜನಕನೆಂದು ಪ್ರಸಿದ್ಧಿಯಿದೆ. ಗುರುತ್ವಾಕರ್ಷಣದ ಶೋಧವನ್ನು ಮಾಡಿದ ಸರ ಐಝಾಕ ನ್ಯೂಟನ್ನನ (ಕ್ರಿ. ಶ. ೧೬೪೨-೧೭೨೭) ಹೆಸರನ್ನು ಎಲ್ಲರೂ ಬಲ್ಲರು. ಕೋಪರ್ನಿಕಸ, ಕೆಪ್ಲರ ಮೊದಲಾದವರ ಸಿದ್ಧಾಂತಗಳಿಂದ ವಿಶ್ವದ ಅಪಾರತ್ವದ ಕಲ್ಪನೆಯು ಹೊಳೆಯಿತು. ಇಂತಹ ವಿಶ್ವದ ಶಕ್ತಿಯನ್ನು ಅಳೆಯಬಹುದೆಂಬ ನ್ಯೂಟನ್ನನ ಸಿದ್ಧಾಂತದಿಂದ ಜನರಲ್ಲಿ ವಿಶ್ವಾಸ ಉಂಟಾಯಿತು. ಮುಂದೆ ೧೮ನೆಯ ಶತಮಾನದ ಉತ್ತರಾರ್ಧದಲ್ಲಿ ಸರ್ವ ಶಾಸ್ತ್ರಗಳ ಬೆಳವಣಿಗೆಗೆ ಪ್ರಾರಂಭವಾಯಿತು. ಇಲ್ಲಿಯ ವರೆಗೆ ನಾವು ಬರಿಯ ಭೌತಿಕಶಾಸ್ತ್ರದ ಬೆಳವಣಿಗೆಯನ್ನೇ ನೋಡಿದ್ದೇವೆ. ಮುಂದೆ ಇದರೊಡನೆ ಮಾನವೀಯ

ಶಾಸ್ತ್ರದ ಬೆಳೆವಣಿಗೆಯೂ ಕಾಣುತ್ತದೆ. ಫ್ರಾನ್ಸದಲ್ಲಿ ರೂಸೋ (ಕ್ರಿ.ಶ. ೧೭೧೨-೧೭೭೮) ವ್ಹಾಲ್ಟೇಅರ (೧೬೯೪-೧೭೭೮) ರಂಥ ನಾಸ್ತಿಕ ನವ ವಿಚಾರಗಳ ಪ್ರವರ್ತಕರು ಹುಟ್ಟಿದರು. ಇಂಗ್ಲಂಡದಲ್ಲಿ ಅರ್ಥಶಾಸ್ತ್ರದ ಪ್ರಣೇತನಾದ ಆಡ್ಯಾಮ ಸ್ಮಿಥನೂ, ರಾಜನೀತಿಜ್ಞನಾದ ಎಡಮಂಡ ಬರ್ಕನೂ, ಉಪಯುಕ್ತತಾವಾದಿಯಾದ ಜೆರೇಮಿ ಬೇಂಥ್ಯಾಮನಂಥ ವಿದ್ವಾಂಸರೂ ಇದೇ ಸಮಯಕ್ಕೆ ಉದಯವಾದರು. ಮಾನವೀಯ ಶಾಸ್ತ್ರವು ಅಂದಿನಿಂದ ಮುಂದುವರಿಯುತ್ತಲಿದೆ.

ಜ್ಞಾನದ ಇತಿಹಾಸವನ್ನು ಇಲ್ಲಿಗೆ ನಿಲ್ಲಿಸುವದೊಳಿತು. ಯಾಕಂದರೆ ಈ ಮುಂದಣ ಕಾಲದಲ್ಲಿ ಶಾಸ್ತ್ರಗಳ ಬೆಳವಣಿಗೆಯು ಅದ್ಭುತವಾಗಿದ್ದು ಅದನ್ನು ಸ್ವಲ್ಪದರಲ್ಲಿ ಹೇಳುವದೇ ಶಕ್ಯವಿಲ್ಲ. ಆದರೂ ಮಹತ್ವದ ಶಾಸ್ತ್ರಗಳ ಪೂರ್ವ ವೃತ್ತಾಂತವನ್ನು ಶಾಸ್ತ್ರಗಳನ್ನು ವಿವೇಚಿಸುವಾಗ ಮುಂದೆ ನಾವು ಹೇಳುವೆವು. ಆದರೆ ಜಿಜ್ಞಾಸುಗಳು ಪ್ರತಿಯೊಂದು ಶಾಸ್ತ್ರದ ಬೆಳೆವಣಿಗೆಯ ಅಭ್ಯಾಸವನ್ನು ಸ್ವತಂತ್ರ ರೀತಿಯಿಂದ ಮಾಡುವದು ಅವಶ್ಯವಿದೆ.

ಈ ಜ್ಞಾನದ ಇತಿಹಾಸವನ್ನು ಪಾಶ್ಚಾತ್ಯರ ಜ್ಞಾನವನ್ನು ಅನುಲಕ್ಷಿಸಿಯೇ ಬರೆಯಲ್ಪಟ್ಟಿದೆ. ಭಾರತದ ಹಾಗೂ ಚೀನದ ಜ್ಞಾನ ವಿಕಾಸದ ಉಲ್ಲೇಖವು ತೀರ ಕಡಿಮೆಯಿದೆ. ಇದರ ಕಾರಣವೂ ಮೇಲೆಯೇ ಇದೆ. ಇಂದು ನಾವು ಕಲಿಯಬೇಕಾದ ಜ್ಞಾನವೆಲ್ಲವೂ ಪಾಶ್ಚಾತ್ಯರ ಮುಖಾಂತರವಾಗಿಯೇ. ಅವರ ಜ್ಞಾನವೇನೆಂಬುದನ್ನು ನಾವು ಮರೆಯಲಾಗದು. ಇಂದು ಜಗತ್ತಿನಲ್ಲೆಲ್ಲ ಪಾಶ್ಚಾತ್ಯಜ್ಞಾನದ ಪ್ರಭುತ್ವ ನೆಲೆಸಿದೆ. ನಮ್ಮ ದೇಶದ ಹಿತಕ್ಕಾಗಿ ಅವರ ಎಲ್ಲ ಜ್ಞಾನವನ್ನು ನಾವು ಸಂಪಾದಿಸುವದು ಅವಶ್ಯವಿದೆ. ಪ್ರಸಿದ್ಧಿಯನ್ನು ಪಡೆದ ಪ್ರತಿಯೊಂದು ರಾಷ್ಟ್ರವೂ ಆ ಕಾಲಕ್ಕೆಯಿದ್ದ ಜ್ಞಾನದಲ್ಲಿ ಮುಂದರಿದೇ ಮುಂದೆ ಬಂದಿವೆ. ಸದ್ಯಕ್ಕೆ ನಾವು ಭೌತಿಕಜ್ಞಾನದಲ್ಲಿ ಹಿಂದುಳಿದ ಈ ಉಳಿದ ಕ್ಷೇತ್ರದಲ್ಲಿ ಉಚ್ಚಸ್ಥಿತಿಗೆ ಮುಟ್ಟುವೆವೆಂಬ ಕಲ್ಪನೆಯೂ ಅಶಕ್ಯವಿದೆ ಆದುದರಿಂದ ಪಾಶ್ಚಾತ್ಯರ ಜ್ಞಾನವನ್ನೆಲ್ಲ ನಾವು ಸ್ವೀಕರಿಸಬೇಕಾಗಿದೆ.

ಅದರ ಪೂರ್ವ ಪೀಠಿಕೆಯನ್ನರಿಯುವದು ಅವಶ್ಯವಿದ್ದುದರಿಂದ ಇಲ್ಲಿ ಸ್ವಲ್ಪ ದರಲ್ಲಿ ವಿವರಿಸಿದೆ.

ನಿಜವಾಗಿಯೂ ವಿಚಾರಮಾಡಿದರೆ, ಜ್ಞಾನವು ಯಾರ ಸ್ವತ್ತೂ ಅಲ್ಲ. ಅದರ ಮೇಲೆ ಮಾನವಜನಾಂಗದ್ದೇ ಅಧಿಕಾರವಿದೆ. ಹೀಗಿದ್ದರೂ, ಆ ಜ್ಞಾನನಿಧಿಯಲ್ಲಿ ಯಾರು ಹೆಚ್ಚಿಗೆ ಕಾಣಿಕೆಯನ್ನೀಯುವರೋ ಅವರ ವರ್ಚಸ್ಸವು ಅದರ ಮೇಲೆ ನಡೆಯುವದು ಸ್ವಾಭಾವಿಕವು. ಈ ಜ್ಞಾನ ನಿಧಿಯ ಮೇಲೆ ಕೆಲಕಾಲ ಕೆಲವೊಂದು ರಾಷ್ಟ್ರದ ವರ್ಚಸ್ಸವು ಇರು ತ್ತದೆ. ಮುಂದೆ ಮತ್ತೊಂದು ರಾಷ್ಟ್ರವು ಅದನ್ನು ವಶಪಡಿಸಿಕೊಳ್ಳು ತ್ತದೆ. ಹೀಗೆಯೇ ಜಗತ್ತಿನಲ್ಲಿ ನಡೆಯತಕ್ಕದ್ದೆ. ಇಜಿಪ್ತ ಹಾಗು ಬಾಬಿಲೋನಗಳು ಕೆಲಕಾಲ ಅದನ್ನು ರಕ್ಷಿಸುತ್ತಿದ್ದವು. ಆ ಕಾಲಕ್ಕೆ ಸುಧಾರಣೆಯೆಂದರೆ, ಇಜಿಪ್ತ ಹಾಗು ಬಾಬಿಲೋನರದೇ ಎಂಬ ಭಾವ ನೆಯು ಜಗತ್ತಿನಲ್ಲಿದ್ದಿತು. ಮುಂದೆ ಅದರಂತೆಯೇ ಗ್ರೀಕರದು. ಆಮೇಲೆ ಅರಬರು ಜ್ಞಾನನಿಧಿಯ ಒಡೆಯರಾದರು. ಮುಂದೆ ಪಾಶ್ಚಾತ್ಯರು ಅವರಿಂದ ಜ್ಞಾನವನ್ನು ತೆಗೆದುಕೊಂಡು ಐದು ನೂರು ವರ್ಷ ಅದನ್ನು ಬೆಳೆ ಯಿಸುತ್ತಿದ್ದಾರೆ. ಆದುದರಿಂದ ಅನುಕರಣೀಯ ಜ್ಞಾನವೆಂದರೆ ಪಾಶ್ಚಾ ತ್ಯರ ಜ್ಞಾನವೆನ್ನುವ ವರೆಗೆ ಅದರ ಮೆಟ್ಟಲು ಬಂದು ಮುಟ್ಟಿದೆ. ನಿಜ ವಾಗಿಯೂ ವಿಚಾರಮಾಡಿದರೆ, ಈ ಜ್ಞಾನನಿಧಿಯನ್ನು ಬೆಳೆಸಲು ಎಲ್ಲ ರಾಷ್ಟ್ರಗಳು ಭಿನ್ನ ಭಿನ್ನ ಕಾಲದಲ್ಲಿ ಪ್ರಯತ್ನಿಸಿವೆ. ಭಾರತೀಯರೂ ಈ ಕಾರ್ಯದಲ್ಲಿ ಹಿಂದುಳಿದಿಲ್ಲ.

ಇಲ್ಲಿಯ ವರೆಗೆ ಜ್ಞಾನದ ಇತಿಹಾಸವನ್ನು ಹೇಳಿದ್ದಾಯಿತು. ಸದ್ಯಕ್ಕೆ ಪ್ರಚಂಡವಾದ ಈ ಜ್ಞಾನನಿಧಿಯ ಸ್ವರೂಪವೇನು? ಅದರಲ್ಲಿರುವ ವಿಭಾಗಗಳಾವವು? ಅಮೌಲ್ಯ ರತ್ನಗಳಾವವು? ಎಂಬುದನ್ನು ನೋಡೋಣ.

ಮೊದಲು ಈ ಜ್ಞಾನದಲ್ಲಿ ಶಾಸ್ತ್ರ, ವಿದ್ಯಾ, ಕಲಾ ಎಂಬ ಭಾಗ ಗಳನ್ನು ಯಾವ ತತ್ವಗಳ ಮೇಲೆ ಮಾಡುವರೆಂಬುದನ್ನು ಹೇಳಿ, ಮುಂದೆ ಅವುಗಳ ವಿವರಗಳನ್ನು ಸ್ವಲ್ಪು ವಿಸ್ತಾರದಿಂದ ಅವಲೋಕಿಸೋಣ.

---

# ಐದನೆಯ ಮೆಟ್ಟಲು



## ಶಾಸ್ತ್ರ, ವಿದ್ಯೆ, ಕಲೆ, ಸಾಹಿತ್ಯ

ನೋಬೆಲ ಪಾರಿತೋಷಕವನ್ನು ಪಡೆದ ಸರ ಚಂದ್ರಶೇಖರ ರಮಣರು ಶ್ರೇಷ್ಠ ಪದಾರ್ಥವಿಜ್ಞಾನಶಾಸ್ತ್ರಜ್ಞರು. ಅಡಿಗೆಯವನೂ ಪಾಕಶಾಸ್ತ್ರ ಪಂಡಿತನು ಇದರಲ್ಲಿಯ ಅಂತರವೇನು ? ಪಾಕಶಾಸ್ತ್ರ, ಸೂಪಶಾಸ್ತ್ರ ಗಳೆಂಬ ಗ್ರಂಥಗಳೂ ಉಂಟು. ಅಡಿಗೆಯ ವಿದ್ಯೆಗೂ ಶಾಸ್ತ್ರವೆಂದು ಹೆಸರಿಟ್ಟರೆ ಯಾವುದೊಂದು ಪದಾರ್ಥವನ್ನು ಒಳ್ಳೇ ರುಚಿಕಟ್ಟಾಗಿ ಮಾಡಲು ಹುಡುಕಿ ತೆಗೆದವನನ್ನು ಸಂಶೋಧಕನೆಂತೆಂದರೆ ರಮಣ, ಜಗದೀಶಚಂದ್ರಬೋಸ ಮೊದಲಾದವರ ಸಾಲಿನಲ್ಲಿ ಕೂಡಿಸಬೇಕಾ ದೀತು. ಇದು ಸರಿಯೆ ? ಹಾಗಾದರೆ ಯಾವುದಕ್ಕೆ ಶಾಸ್ತ್ರವೆನಬೇಕೆಂಬು ದನ್ನು ಮೊದಲು ವಿಚಾರಿಸಬೇಕಾಗುವುದು.

"ಯಾವುದೊಂದು ವಿಷಯವನ್ನು ಅಚ್ಚುಕಟ್ಟುತನದಿಂದ ಸಂಗ್ರ ಹಿಸಿ, ವ್ಯವಸ್ಥಿತ ರೀತಿಯಿಂದ ಹೇಳಲ್ಪಟ್ಟ ಜ್ಞಾನಕ್ಕೆ ಶಾಸ್ತ್ರ"ವೆಂಬ ವ್ಯಾಖ್ಯೆಯು ಸಕೃದ್ದರ್ಶನಕ್ಕೆ ಹೊಳೆಯುವುದು. ಇಂಗ್ಲಿಷಿನಲ್ಲಿಯೂ Science ಎಂಬ ಶಬ್ದವನ್ನು ಇದೇ ಅರ್ಥದಲ್ಲಿಯೇ ಉಪಯೋಗಿಸು ವರು. ಹಾಗಾದರೆ, ಅಡಿಗೆಯ ವಿಷಯವಾಗಿ ವ್ಯವಸ್ಥಿತವಾಗಿ ಮಾಡ ಲ್ಪಡುವ ಏಕತ್ರಿತವಾದ ಜ್ಞಾನಕ್ಕೆ ಶಾಸ್ತ್ರವೆನ್ನಬೇಕಾಗುವುದು. ಆದರೆ ಶಾಸ್ತ್ರ ಶಬ್ದಕ್ಕೆ ಇದಕ್ಕಿಂತ ಉಚ್ಚ ಹಾಗು ಉದಾತ್ತವಾದ ಅರ್ಥವಿದೆ.

ಪದಾರ್ಥವಿಜ್ಞಾನ, ರಸಾಯನ ಮೊದಲಾದ ಭೌತಿಕಶಾಸ್ತ್ರ ಗಳಲ್ಲಿಯೂ, ಮಾನಸಶಾಸ್ತ್ರ, ಅರ್ಥಶಾಸ್ತ್ರ, ರಾಜಕಾರಣ ಮೊದಲಾದ ಮಾನವ ವಿಷಯಕ ಶಾಸ್ತ್ರಗಳಲ್ಲಿಯೂ ಒಂದು ಬಗೆಯ ವ್ಯಾಪಕವಾದ ಶಾಶ್ವತ ತತ್ವಗಳು ಕಂಡುಬರುತ್ತವೆ. ಈ ಶಾಸ್ತ್ರಗಳು ಸೃಷ್ಟಿಯಲ್ಲಿಯ ಒಂದು ವಿಷಯವನ್ನು ತೆಗೆದುಕೊಂಡು, ಅದರ ಕಾರ್ಯ ಕಾರಣಗಳನ್ನು

ಆಗಿದು ಬಗೆದು ನೋಡುತ್ತವೆ. ಈ ಕ್ರಿಯೆಯು ವಿವೇಚಕ ಬುದ್ಧಿಯನ್ನು ಅವಲಂಬಿಸಿರುತ್ತದೆ. ಮಾನವನ ಈ ಬುದ್ಧಿಯು ಎಲ್ಲ ಕಡೆಗೂ ಒಂದೇ ಇರುವುದರಿಂದ ಈ ಶಾಸ್ತ್ರಗಳಿಗೆ ವ್ಯಾಪಕತ್ವವು ಉಂಟಾಗುತ್ತದೆ ಯಾವ ಪದಾರ್ಥವಿಜ್ಞಾನಶಾಸ್ತ್ರವು ಅಥವಾ ರಾಜನೀತಿಶಾಸ್ತ್ರವು ಯುರೋಪಕ್ಕೆ ಅನ್ವಯಿಸುವುದೋ ಅದು ಭಾರತಕ್ಕೂ ಅನ್ವಯಿಸು ವುದು. ಭಾರತಕ್ಕಾಗಿ ಬೇರೆ ಶಾಸ್ತ್ರವನ್ನು ನಿರ್ಮಿಸಬೇಕಾಗಿಲ್ಲ. ಇನ್ನು ಭಾರತದ ಪೂರ್ವ ಇತಿಹಾಸ, ಸಮಾಜ ರಚನೆಗಳನ್ನು ಅನುಸರಿಸಿ, ಅದನ್ನು ಸ್ವಲ್ಪ ಬದಲುಮಾಡಬೇಕಾದೀತೆಂಬ ಮಾತೇನೋ ನಿಜ. ಆದರೆ. ಮೂಲತತ್ವಗಳಲ್ಲಿ ಸ್ವಲ್ಪ ಅಂತರವಿರುವುದಲ್ಲದೆ, ಸ್ಥಾನಭೇದದಿಂದ ಯಾವ ಯಾವ ಹೆಚ್ಚು ಕಡಿಮೆ ಮಾಡಬೇಕೆಂಬುದನ್ನೂ ಶಾಸ್ತ್ರಗಳಲ್ಲಿ ಸೋಪ ಪತ್ತಿಕವಾಗಿ ಹೇಳಲ್ಪಟ್ಟಿರುತ್ತದೆ. ಇದರಿಂದ ಆ ಶಾಸ್ತ್ರದ ವ್ಯಾಪಕತೆಗೆ ಬಾಧೆ ಬರಲಾರದು. ಇದರ ವಿರುದ್ಧವಾಗಿ ಪಾಕವಿದ್ಯೆ, ಕೃಷಿವಿದ್ಯೆ, ಶಿಲ್ಪ ವಿದ್ಯೆಗಳನ್ನು ತೆಗೆದುಕೊಳ್ಳಿರಿ. ಇವುಗಳಲ್ಲಿ ವ್ಯಾಪಕತೆಯು ಎಳ್ಳಷ್ಟೂ ಇಲ್ಲ. ಭಾರತದಲ್ಲಿ ಅಡಿಗೆ ಮಾಡುವ ಪದ್ಧತಿಗೂ, ಯುರೋಪದಲ್ಲಿ ಅಡಿಗೆ ಮಾಡುವ ಪದ್ಧತಿಗೂ ಭೂಮ್ಯಾಕಾಶದಷ್ಟು ಅಂತರವಿದೆ. ಅದರಂತೆಯೇ ಕೃಷಿಯು, ಮನೆಕಟ್ಟುವ ಕೆಲಸವು, ಕರ್ನಾಟಕವೊಂದರಲ್ಲಿಯೇ ವಿಚಾರ ಮಾಡಿದರೆ, ೧೦–೨೦ ಬಗೆಯ ಮನೆಕಟ್ಟುವ ರೀತಿಗಳು ಕಂಡುಬರುತ್ತವೆ. ಆದರೆ ಕರ್ನಾಟಕದಲ್ಲಿ ಹತ್ತಿಪ್ಪತ್ತು ಬಗೆಯ ರಾಜನೀತಿಶಾಸ್ತ್ರಗಳಿರುವ ವೆಂದು ಹೇಳಬಹುದೇ ?

ಅದರಂತೆಯೇ ಶಾಸ್ತ್ರೀಯ ವಿಚಾರಗಳಲ್ಲಿ ಜ್ಞಾನಕ್ಕಾಗಿ ಜ್ಞಾನ ವೆಂಬ ಕಲ್ಪನೆಯು ಇರುತ್ತದೆ. ಆದರೆ ಕೃಷಿ ಮೊದಲಾದವುಗಳಲ್ಲಿ ಈ ತತ್ವವು ಕಾಣುವುದಿಲ್ಲ. ಅಂದರೆ ಶಾಸ್ತ್ರಗಳು ವ್ಯವಹಾರಕ್ಕೆ ನಿರುಪ ಯೋಗವಾಗದೆ ಬಹಳೇ ಉಪಯೋಗಕರವುಂಟು. ವಾಸ್ತು, ಕೃಷಿ, ವಿದ್ಯೆಗಳು ಮುಖ್ಯವಾಗಿ ಕೃತಿಯನ್ನು ಹೇಳಲು ಹೊರಟಿರುತ್ತವೆ. ಆದರೆ ಶಾಸ್ತ್ರಗಳ ಮಾತು ಹಾಗಲ್ಲ. ಅವುಗಳ ಉದ್ದೇಶವು ಕೃತಿಯನ್ನು ಹೇಳುವುದಲ್ಲ. ಪದಾರ್ಥವಿಜ್ಞಾನಶಾಸ್ತ್ರದ ಫಲವು ಯಾವುದೊಂದು ವ್ಯವಹಾರದ ಕಾರ್ಯದಲ್ಲಿ ನೈಪುಣ್ಯಪಡೆಯುವುದೆಂದು ಯಾರೂ ತಿಳಿ

ಯುವುದಿಲ್ಲ. ಪದಾರ್ಥವಿಜ್ಞಾನಿಗೆ ಯಾವುದೊಂದು ಯಂತ್ರವನ್ನು ನಡೆಯಿಸಲು, ಇಲ್ಲವೆ ವಿದ್ಯುತ್ತಿನ ದೀಪಗಳನ್ನು ಕೂಡಿಸಲು ಯಾರೂ ಹೇಳುವುದಿಲ್ಲ. ಅಥವಾ ರಾಜನೀತಿಜ್ಞನಿಗೆ ಯಾವುದೊಂದು ಪ್ರಾಂತ ವನ್ನು ಆಳಲು ಹಚ್ಚುವುದಿಲ್ಲ. ಆದರೆ ಪಾಕಶಾಸ್ತ್ರವಿಶಾರದನಿಗೆ ಅಡಿಗೆ ಮಾಡಲು ಬರದಿದ್ದರೆ ಅಥವಾ ಒಳ್ಳೇ ಗೌಂಡಿಯೆಂದು ಹೆಸರಾದವನಿಗೆ ಮನೆಕಟ್ಟಲು ಬರದಿದ್ದರೆ ಮಾತ್ರ ಅವರಿಗೆ ನಾವು ಹುಚ್ಚರೆನ್ನುವೆವು.

ಶಾಸ್ತ್ರದ ಪ್ರವೃತ್ತಿಯು ಯಾವುದೊಂದು ಕಾರ್ಯವನ್ನು ವಿಶಾಲ ದೃಷ್ಟಿಯಿಂದ ವಿಚಾರಮಾಡಿ ಸಾಮಾನ್ಯಸಿದ್ಧಾಂತವನ್ನು ತೆಗೆಯುವದರ ಕಡೆಗೆ ಇದ್ದರೆ, ವಿದ್ಯೆಯದೃಷ್ಟಿಯು ಬೇರೆ ಬೇರೆ ಶಾಸ್ತ್ರಗಳು ಸ್ಥಾಪಿಸಿದ ಸಿದ್ಧಾಂತಗಳನ್ನು ವ್ಯವಹಾರದಲ್ಲಿ ಹೇಗೆ ಉಪಯೋಗ ಮಾಡಿಕೊಳ್ಳಬೇ ಕೆಂಬುದರ ಕಡೆಗೆ ಇರುತ್ತದೆ. ಶಾಸ್ತ್ರವು ಪ್ರತಿಯೊಂದು ಪದಾರ್ಥದ, ಘಟನೆಗಳ ಮೂಲತತ್ವಗಳನ್ನು ಹುಡುಕುತ್ತದೆ. ಕಟ್ಟಿಗೆಯ ವಿಷಯ ವನ್ನೇ ತೆಗೆದುಕೊಂಡರೆ, ಅದರಲ್ಲಿರುವ ಘಟಕಗಳಾವವು ? ಆ ಘಟಕ ಗಳ ಮೂಲದ್ರವ್ಯಗಳಾವವು ಎಂಬುದನ್ನು ಶಾಸ್ತ್ರವು ವಿಚಾರಿಸುತ್ತದೆ. ಅದರಂತೆಯೇ ಅದರ ಗುಣಧರ್ಮಗಳೇನು ? ಅವು ಯಾವ ಪರಿಸ್ಥಿತಿಯಲ್ಲಿ ನಿರ್ಮಾಣವಾಗುತ್ತವೆ ಎಂಬುದನ್ನೂ ಶಾಸ್ತ್ರವು ವಿಚಾರಮಾಡುತ್ತದೆ. ಆದರೆ ಇದರ ವಿರುದ್ಧವಾಗಿ ವಿದ್ಯೆಯು ಉಪಪತ್ತಿಯ ಕಡೆಗೆ ನೋಡು ವದೇ ಇಲ್ಲ. ಶಾಸ್ತ್ರವು ಸ್ಥಾಪಿಸಿದ ವರ್ಗೀಕರಣದ ಉಪಯೋಗವನ್ನು ಮಾತ್ರ ಮಾಡಿಕೊಳ್ಳುತ್ತದೆ. ಕಟ್ಟಿಗೆಯ ಉದಾಹರಣೆಯನ್ನೇ ತೆಗೆದು ಕೊಂಡರೆ ವಾಸ್ತುವಿದ್ಯೆಯು ಕಟ್ಟಿಗೆಗಳ ಗುಣಧರ್ಮಗಳಿಗನುಸರಿಸಿ ಕಟ್ಟ ಡಕ್ಕೆ ಉಪಯುಕ್ತವಾದುದಾವುದು, ನಿರುಪಯುಕ್ತವಾದುದಾವುದೆಂಬ ವ್ಯವಹಾರಿಕ ವಿಷಯವನ್ನಷ್ಟೇ ವಿಚಾರಮಾಡುತ್ತದೆ

ಆದುದರಿಂದ ಜ್ಞಾನದಲ್ಲಿ ಶಾಸ್ತ್ರ, ವಿದ್ಯೆ ಎಂಬೆರಡು ಭೇದಗಳು ತೀರ ಅವಶ್ಯಕ. ಇವೆರಡರಲ್ಲಿಯ ಭೇದವೇನೆಂಬುದು ಮೇಲಿನ ವಿವರಣೆ ಯಿಂದ ತಿಳಿದಿರುವುದು. ಶಾಸ್ತ್ರವು ಸೃಷ್ಟಪದಾರ್ಥಗಳ ಕಾರ್ಯಕಾರಣ ಗಳನ್ನು ವ್ಯಾಪಕದೃಷ್ಟಿಯಿಂದ ವಿಚಾರಮಾಡಿ ಸಾಮಾನ್ಯ ಸಿದ್ಧಾಂತ ಗಳನ್ನು ತೆಗೆದರೆ, ವಿದ್ಯೆಯು ಮನುಷ್ಯರ ಜೀವನಕ್ಕೆ ಅವಶ್ಯವಾದ

ಉದ್ಯೋಗ ವ್ಯವಸಾಯುಗಳನ್ನು ಉತ್ತಮ ರೀತಿಯಿಂದ ಹೇಗೆ ಸಾಗಿಸ ಬೇಕೆಂಬುದನ್ನು ಕಲಿಸುತ್ತದೆ. ವಿದ್ಯೆಗೂ ಶಾಸ್ತ್ರಕ್ಕೂ ಏನೂ ಸಂಬಂಧ ಇಲ್ಲೆಂದು ಮಾತ್ರ ತಿಳಿಯಕೂಡದು. ತನ್ನ ಕಾರ್ಯಸಿದ್ಧಿಗಾಗಿ ವಿದ್ಯೆಯು ಅನೇಕ ಶಾಸ್ತ್ರಗಳಲ್ಲಿಯ ಸಿದ್ಧಾಂತಗಳನ್ನು ಉಪಯೋಗಿಸಕೊಳ್ಳಬೇಕಾ ಗುತ್ತದೆ. ಉದಾಹರಣೆಗಾಗಿ, ಕೃಷಿವಿದ್ಯೆಗೆ ವನಸ್ಪತಿಶಾಸ್ತ್ರ, ರಸಾ ಯನಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ ಇತ್ಯಾದಿ ಶಾಸ್ತ್ರಗಳ ನಿಕಟ ಸಂಬಂಧವಿದೆ. ರಾಜ್ಯಕಾರಭಾರದ ವಿದ್ಯೆಯು ರಾಜನೀತಿಶಾಸ್ತ್ರ, ಸಮಾಜಶಾಸ್ತ್ರಗಳ ಸಿದ್ಧಾಂತಗಳ ಮೇಲೆ ಅವಲಂಬಿಸಿರುತ್ತದೆ.

ಮೇಲೆ ಹೇಳಿದ ವಿದ್ಯೆಗಳಲ್ಲದೆ ಇನ್ನೂ ಅನೇಕ ವಿದ್ಯೆಗಳಿವೆ. ಉದಾಹರಣೆಗಾಗಿ, ವಿಮಾನವಿದ್ಯೆ, ನಾವಿಕವಿದ್ಯೆ, ಸಂಪಾದಕೀಯವಿದ್ಯೆ (journalism) ಮೊದಲಾದವು. ಈ ವಿದ್ಯೆಗಳಿಗೆ ಇಂಗ್ಲೀಷಿನಲ್ಲಿ ಸಾಮಾ ನ್ಯವಾಗಿ Technical Sciences ಅಥವಾ Technologies ಎಂದೂ, ಶಾಸ್ತ್ರಗಳಿಗೆ ಕೇವಲ Sciences ಮತ್ತು Technology ಈ ಶಬ್ದಗಳನ್ನು ಇಂಗ್ಲಿಷಿನಲ್ಲಿ ಯಾವಾಗಲೂ ಉಪಯೋಗಿಸುತ್ತಾರೆಂದು ತಿಳಿಯಕೂಡದು. Agriculture (ಕೃಷಿ) Engineering (ವಾಸ್ತು) ಗಳಿಗೆ Science ಎಂದೂ ಇಂಗ್ಲಿಷಿನಲ್ಲಿ ಒಮ್ಮೊಮ್ಮೆ ಉಪಯೋಗಿ ಸುವರು. ಅದರಂತೆಯೇ Administration, Commerce ಇತ್ಯಾದಿ ಮಾನವೀಯ ವಿದ್ಯೆಗಳಿಗೆ Technology ಎಂದು ಕರೆಯದೆ Art ಎಂದು ಕರೆಯುವ ರೂಢಿಯಿದೆ. ಆದರೆ ದೇಶೀಯ ಭಾಷೆಗಳಲ್ಲಾದರೂ ಮೇಲಿನ ವಿವೇಚನೆಯಂತೆ, ಶಾಸ್ತ್ರ ಹಾಗು ವಿದ್ಯೆಗಳಲ್ಲಿ ಭೇದವನ್ನು ಕಲ್ಪಿಸುವುದು ಅವಶ್ಯವಿದೆ. ಅಂದರೆ ಇಂಗ್ಲಿಷಿನಲ್ಲಾಗುವ ತೊಂದರೆ, ತಪ್ಪುಗಳ ಅನುಕರಣವನ್ನೇ ನಾವು ಬಿಟ್ಟಂತಾಗುವದು.

ಮೇಲಿನ ಸಿದ್ಧಾಂತಗಳು ಸರ್ವತ್ರ ಅನ್ವಯಿಸುತ್ತಿದ್ದರೂ ಕೆಲವು ಕಡೆಗೆ ಜ್ಞಾನದ ಶಾಖೆಗೆ 'ವಿದ್ಯೆ' ಎನ್ನಬೇಕೋ 'ಶಾಸ್ತ್ರ' ಎನ್ನ ಬೇಕೋ ಎಂಬ ಪ್ರಶ್ನೆಯು ಉತ್ಪನ್ನವಾಗುವದು. ಉದಾಹರಣೆಗಾಗಿ, ಯಂತ್ರಶಾಸ್ತ್ರ (Mechanics) ರೋಗೋಪಚಾರಶಾಸ್ತ್ರ (Therapeutics)ಗಳನ್ನು ಅವುಗಳ ವ್ಯಾವಹಾರಿಕ ಉಪಯೋಗದ ದೃಷ್ಟಿಯಿಂದ

ವಿದ್ಯೆಯಲ್ಲಿ ಗಣಿಸಬೇಕೋ ಶಾಸ್ತ್ರದಲ್ಲಿ ಗಣಿಸಬೇಕೋ ಎಂಬ ಸಂಶಯ ಬರಬಹುದು. ಆದರೆ, ವಿದ್ಯೆ ಹಾಗು ಶಾಸ್ತ್ರಗಳ ಭೇದವನ್ನು ತಿಳಿಯಲು ಮೇಲೆ ಹೇಳಿದ ಒರೆಗಲ್ಲನ್ನೊ ಹಚ್ಚಿ ನೋಡಿದರೆ, ಸಮಾಧಾನಕರವಾದ ಉತ್ತರ ದೊರೆಯುವದೆಂದು ನಮ್ಮ ನಂಬುಗೆ ಇದೆ. ೧. ವ್ಯಾಪಕತ್ವ ಶಾಶ್ವತತ್ವ, ೨. ಜ್ಞಾನೈಕದೃಷ್ಟಿ, ೩. ಸಿದ್ಧಾಂತಗಳನ್ನು ಕಟ್ಟುವದು, ೪. ಮೂಲವನ್ನು ಹುಡುಕುವ ಪ್ರವೃತ್ತಿ ಇವೇ ಆದರ ಒರೆಗಲ್ಲು ಎಂದು ಹೇಳಬಹುದು.

ವಿದ್ಯೆಯ ನಂತರ ಕಲೆಯು. ಕಲೆಯಲ್ಲಿಯೂ ಲಲಿತ ಹಾಗು ಉಪಯುಕ್ತ ಎಂಬೆರಡು ಭೇದಗಳನ್ನು ಮಾಡುತ್ತಾರೆ. ಈ ಭೇದವು ಅವುಗಳ ಧ್ಯೇಯಗಳಿಂದಲೇ ಉಂಟಾಗಿದೆ. ಕಲ್ಲುಕುಟ್ಟಿಗ, ಹಾಗು ಶಿಲ್ಪಿಯನ್ನು ನೋಡಿದರೆ ಈ ಮಾತು ಸ್ಪಷ್ಟವಾಗುವದು. ಗೌಂಡಿಯ ವ್ಯವಹಾರದ ಉಪಯುಕ್ತತೆಯ ದೃಷ್ಟಿಯಿಂದ, ಕಲ್ಲುಗಳಿಂದ ಒಳ್ಳೇ ಕಟ್ಟಡವನ್ನು ಕಟ್ಟುವನು. ಶಿಲ್ಪಿಯು ಅದೇ ಕಲ್ಲಿನಿಂದ ಸುಂದರವಾದ ಮೂರ್ತಿಯನ್ನು ಕೆತ್ತುವನು. ಅದರಂತೆಯೇ ಬಡಿಗನು ಕಟ್ಟಿಗೆಯಿಂದ ಮನೆ ಕಟ್ಟುವನು. ಗುಡಿಗಾರನು ಅದೇ ಕಟ್ಟಿಗೆಯಲ್ಲಿ ಸುಂದರ ಸುಳುವುಗಳನ್ನು ನಿರ್ಮಿಸುವನು. ಹೀಗೆ ಮೂಲಭೂತವಾದ ಅಂತರವು ಧ್ಯೇಯಗಳಲ್ಲಿಯೇ ಇದೆ. ಲಲಿತ ಕಲೆಯ ಧ್ಯೇಯವು ಸುಂದರ, ಆಲ್ಹಾದಕರ ವಸ್ತುಗಳನ್ನು ನಿರ್ಮಿಸಿ, ಅದರಲ್ಲಿ ತಲ್ಲೀನವಾಗುವದಿದ್ದರೆ, ಉಪಯುಕ್ತ ಕಲೆಯ ಧ್ಯೇಯವು ಜೀವನಕ್ಕೆ ಉಪಯುಕ್ತ ಒಡವೆಗಳನ್ನು ನಿರ್ಮಿಸುವದಿರುತ್ತದೆ.

ಆದರೆ ಈ ಭೇದವು ಕೂಡ ಸ್ವಲ್ಪ ಮಟ್ಟಿಗೆ ಉಪಯುಕ್ತ ಕಲೆಯಲ್ಲಿ ಸೌಂದರ್ಯದೃಷ್ಟಿಯು ಇಲ್ಲವೆಂದು ಹೇಳಲಾಗದು. ಸೌಂದರ್ಯ ದೃಷ್ಟಿಯು ಸ್ವಲ್ಪಾದರೂ ಇರದಿದ್ದರೆ ಕಲೆಯ ವಿಕಾಸವಾಗುವುದೇ ಇಲ್ಲ. ಕಪಾಟು, ಖುರ್ಚಿ ಮೊದಲಾದ ಯಾವ ವಸ್ತುವನ್ನು ತೆಗೆದುಕೊಂಡರೂ ಸುಂದರವಾಗಿ ಕಾಣಬೇಕಾಗುವ ಕೆಲವು ಗುಣಗಳು ಇದ್ದೇ ಇರುತ್ತವೆ. ಸಾವಿರಾರು ವರ್ಷಗಳ ಪೂರ್ವದಲ್ಲಿಯ ಪಾಷಾಣಯುಗದಲ್ಲಿ ಕೂಡ ಸೌಂದರ್ಯದೃಷ್ಟಿಯು ಕಾಣುತ್ತದೆಂದಮೇಲೆ, ಈಗಿನ ಕೈಗಾರಿಕೆಗಳಲ್ಲಿ ಇರದೇ ಏನು? ಪಾಷಾಣಯುಗದ ಚಿತ್ರಗಳನ್ನು ಬಿಟ್ಟರೂ ಆ ಕಾಲದ

ಆಯುಧಗಳಲ್ಲಿ ಕೂಡ ನಯ, ಪ್ರಮಾಣಬದ್ಧತೆಗಳಿಂದ ಅವಕ್ಕೆ ಒಂದು ಬಗೆಯ ಸೌಂದರ್ಯವಿದ್ದೇ ಇದೆ. ಅಂದಮೇಲೆ ಸೌಂದರ್ಯದೃಷ್ಟಿಯು ಎಲ್ಲ ಕಲೆಯಲ್ಲಿಯೂ ಇರುತ್ತದೆ. ಲಲಿತಕಲೆಯಲ್ಲಿ ಅದರ ಪ್ರಭಾವವು ಪೂರ್ತಿಯಿದ್ದರೆ, ಉಪಯುಕ್ತ ಕಲೆಯಲ್ಲಿ ಸೌಂದರ್ಯಸೃಷ್ಟಿಯು ಗೌಣ ವಿದ್ದು ಉಪಯುಕ್ತತೆಯು ಪ್ರಮುಖವಿರುತ್ತದೆ.

ಉಪಯುಕ್ತ ಕಲೆಗಳು ವಿಪುಲವಿವೆ. ಅವುಗಳನ್ನು ಎಣಿಸುವದೇ ಕಷ್ಟ. ಬಡಿಗತನ, ಕಂಬಾರ, ಕುಂಬಾರ, ಮುದ್ರಣ, ಲಘುಲೇಖನ ಇತ್ಯಾದಿ ಅನೇಕ ಕಲೆಗಳುಂಟು. ಭಾರತದಲ್ಲಿ ಭಿಕ್ಷೆ ಬೇಡುವದೂ, ಪಾಶ್ಚಾತ್ಯ ದೇಶಗಳಲ್ಲಿ ಸರಕನ್ನು ಖರ್ಚುಮಾಡುವದೂ ಕೂಡ ಇತ್ತೀಚೆ ಕಲೆಯೆಂದೇ ಹೇಳಬೇಕಾಗಿದೆ. ಸೂಕ್ಷ್ಮವಾಗಿ ವಿಚಾರ ಮಾಡಿದರೆ ವಿದ್ಯೆಗೂ ಉಪಯುಕ್ತಕಲೆಗೂ ವಿಶೇಷ ಅಂತರವಿಲ್ಲ. ವಿದ್ಯೆಯು ಹೇಗೆ ವ್ಯವಹಾರೋಪಯುಕ್ತವೋ ಹಾಗೆಯೇ ಉಪಯುಕ್ತ ಕಲೆಯೂ ಎಂದೆನಸಬಹುದು. ಎರಡಕ್ಕೂ ಕೃತಿ ಕುಶಲತೆಯೇ ಮೂಲವು. ಅಂತರವು ಇಷ್ಟೆ– ವಿದ್ಯೆಯು ಹೆಚ್ಚು ವಿಸ್ತೃತವೂ, ಸುಸಂಘಟಿತವೂ, ತನ್ನ ಸಿದ್ಧಿಗಾಗಿ ಶಾಸ್ತ್ರದ ಸಹಾಯವನ್ನು ಪಡೆಯುವದಿದ್ದು ಹೆಚ್ಚು ಕಡಿಮೆ ಶಾಸ್ತ್ರದಂತೆಯೇ ಅದರ ರಚನೆಯಾಗಿರುತ್ತದೆ. ಆದುದರಿಂದಲೇ ಕೃಷಿಶಾಸ್ತ್ರ, ಶಿಲ್ಪಶಾಸ್ತ್ರವೆಂದು ಹೆಸರು ಬಿದ್ದಿದೆ. ಉಪಯುಕ್ತಕಲೆಯು ಇಷ್ಟು ವಿಕಸಿತವಾಗಿರುವದಿಲ್ಲ; ಆಗುವ ಯೋಗ್ಯತೆಯೂ ಇರುವದಿಲ್ಲ. ಶಾಸ್ತ್ರಗಳ ಸಹಾಯದ ಅವಶ್ಯಕತೆಯೂ ಅಷ್ಟೊಂದು ಬೇಕಾಗುವದಿಲ್ಲ.

ಲಲಿತ ಕಲೆಯ ಸಂಖ್ಯೆಯು ಉಪಯುಕ್ತ ಕಲೆಗಳಂತೆ ಬಹಳಿಲ್ಲ. ಹೆಚ್ಚು ಬೆಳೆಯುವದೂ ಇಲ್ಲ. ಗಾಯನ, ವಾದನ, ನರ್ತನ, ನಾಟ್ಯ, ಚಿತ್ರ, ಮೂರ್ತಿಶಿಲ್ಪ, ಲಲಿತ ವಾಙ್ಮಯ ಮೊದಲಾದ ಕಲೆಗಳು ಪ್ರಾಚೀನ ಕಾಲದಲ್ಲಿಯೂ ಇಷ್ಟೇ ಇದ್ದು, ಈಗಲೂ ಇಷ್ಟೇ ಇವೆ. ಮಾನವನ ಮನೋಧರ್ಮವು ಬದಲಾಗದ ಹೊರತು ಇವುಗಳಲ್ಲಿ ಎಷ್ಟು ಬದಲಾಗ ಲಾರವು. ಮಾನವನಲ್ಲಿಯ ಸೌಂದರ್ಯಲಾಲಸೆಯ ತೃಪ್ತಿಗಾಗಿ ಈ ಕಲೆಗಳ ಅವತಾರವಾಗಿದೆ. ಇವುಗಳ ಸ್ವರೂಪವನ್ನು ನಿರೀಕ್ಷಿಸಿದರೆ, ಕಣ್ಣು–ಕಿವಿಗಳ ಮುಖಾಂತರ ಮನಸ್ಸಿಗೆ ಆನಂದವನ್ನೀಯುವವು.

ಇನ್ನುಳಿದ ನಾಲಿಗೆ, ಮೂಗು, ತ್ವಕ್ಷುಗಳಿಗೆ ಆನಂದವೀಯುವ ಕಲೆಯು ಇನ್ನೂ ಹುಟ್ಟಿಲ್ಲ. ಇವುಗಳ ತೃಪ್ತಿಗಾಗಿ ಸೌಂದರ್ಯದ ಅವಶ್ಯಕತೆಯೂ ಅಷ್ಟೊಂದಿರುವದಿಲ್ಲ.

ಕಲೆ ಹಾಗು ನೀತಿಯ ಸಂಬಂಧವೇನು ಎಂಬುದರ ಬಗ್ಗೆ ಮೇಲಿಂದ ಮೇಲೆ ನಿಷ್ಕಾರಣವಾಗಿ ವಾದಗಳೇಳುತ್ತಿರುತ್ತವೆ. ಕಲೆ ಹಾಗು ನೀತಿಯ ಉಚ್ಚ ಕಲ್ಪನೆಯಿಲ್ಲದವರು ಈ ವಾದವನ್ನು ಹೂಡುತ್ತಾರೆ. ಉಚ್ಚ ಕಲೆ ಹಾಗು ನೀತಿಗಳಲ್ಲಿ ವಿರೋಧವಿಲ್ಲ; ಇರುವದೂ ಶಕ್ಯವಿಲ್ಲ. ಅವುಗಳಲ್ಲಿ ಜಗಳವೂ ಇಲ್ಲ. ಆದರೆ ಈ ವಿಧಾನವು ಉಚ್ಚ ಕಲೆಗೆ ಮಾತ್ರ ಸಂಬಂಧಿಸಿದುದು ಎಂಬುದನ್ನು ಲಕ್ಷ್ಯದಲ್ಲಿಡಬೇಕು.

ಲಲಿತಕಲೆಗಳಲ್ಲಿಯ ಲಲಿತವಾಙ್ಮಯವು ಮಾತ್ರ ಯಾವ ಇಂದ್ರಿಯವನ್ನೂ ತೃಪ್ತಿಪಡಿಸದೆ ಸಾಕ್ಷಾತ್ ಮನಸ್ಸನ್ನೇ ಆನಂದಪಡಿಸುತ್ತದೆ. ಉಳಿದ ಲಲಿತಕಲೆಗಳಿಗಿಂತಲೂ ಇದು ಹೆಚ್ಚು ವ್ಯಾಪಕ, ಶಾಶ್ವತ, ಸುಲಭ ಹಾಗು ಮನಃಶಾಂತಿಕಾರಕವಿರುತ್ತದೆ. ಆದುದರಿಂದ ಪ್ರತಿಭಾಶಾಲಿಗಳಾದ ಕಲಾಪ್ರೇಮಿಗಳು ತಮ್ಮ ಕೌಶಲ್ಯ ಸರ್ವಸ್ವವನ್ನು ವಾಙ್ಮಯದಲ್ಲಿ ತುಂಬಿದಷ್ಟು ಉಳಿದಾವ ಕಲೆಗಳೂ ತಮ್ಮ ಕೃತಿಯಿಂದ ಭೂಷಿತವಾಗಿರುವವೆಂದು ಕಂಡು ಬರುವದಿಲ್ಲ. ಇಂದು ವಾಙ್ಮಯವು ಎಲ್ಲ ಕಲೆಗಳಿಗಿಂತ ಹೆಚ್ಚು ಸೌಂದರ್ಯಶಾಲಿಯಿದೆ. ಅದು ಅನೇಕ ರಸಿಕ ಜೀವಿಗಳ ಸುಖದ ನಿವಾಸಸ್ಥಾನವಾಗಿರುವದರಲ್ಲಿ ಸಂದೇಹವಿಲ್ಲ.

ಲಲಿತವಾಙ್ಮಯದಲ್ಲಿ ಕಾವ್ಯ ನಾಟಕ ಕಾದಂಬರಿಗಳ ಸಮಾವೇಶವು ಮುಖ್ಯವಾಗಿ ಆಗುತ್ತದೆ. ಉಳಿದ ವಾಙ್ಮಯವೆಲ್ಲವೂ ಸೌಂದರ್ಯದೃಷ್ಟಿಯೇ ಪ್ರಧಾನವೆಂದು ಬಗೆದು ಬರೆದಿರುವದಿಲ್ಲ. ಆದರೂ ಅದರಲ್ಲಿ ಸವಿಯೇ ಇಲ್ಲವೆಂದು ಹೇಳಲಿಕ್ಕಾಗದು. ಯಾವ ವಾಙ್ಮಯದಲ್ಲಿ ಪ್ರಸಾದ, ಪ್ರಮಾಣಬದ್ಧತೆ, ಆಕರ್ಷಣಶಕ್ತಿಗಳಿಲ್ಲವೋ ಅದು ರುಕ್ಷವಿದ್ದು, ಓದಬೇಕೆನಿಸುವದಿಲ್ಲ. ಆದುದರಿಂದ ಯಾವುದೇ ವಾಙ್ಮಯದಲ್ಲಿ ಸೌಂದರ್ಯದ ಸ್ವಲ್ಪಾದರೂ ಗುಣಗಳಿರಲೇಬೇಕು. ಆದರೂ ಇಂತಹ ವಾಙ್ಮಯವು ಜ್ಞಾನಪ್ರಸಾರಕ್ಕಾಗಿ ಬರೆಯಲ್ಪಡುವದರಿಂದ ಉಪಯುಕ್ತಕಲೆಯಲ್ಲಿ ಇದರ ಸಮಾವೇಶವಾಗಬೇಕು. ಆದರೆ, ವಾಙ್ಮಯವು

ಅತ್ಯಂತ ವ್ಯಾಪಕವಿರುವದರಿಂದಲೂ ಪ್ರತಿಪಾದಿತಜ್ಞಾನವನ್ನು ಬಿಟ್ಟು ಅದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲದ್ದರಿಂದಲೂ ಅದನ್ನು ಉಪಯುಕ್ತ ಕಲೆಯಲ್ಲಿ ಸೇರಿಸಲೂ ಬರುವಂತಿಲ್ಲ. ಜ್ಞಾನವು ಅನಂತವಿರುವಂತೆ ವಾಙ್ಮಯವೂ ಅನಂತವಿದೆ.

ಸರ್ವವ್ಯಾಪಿ ವಾಙ್ಮಯದ ಇತಿಹಾಸವು ಇತಿಹಾಸದ ಒಂದು ಭಾಗವು. ವಿಶ್ವಸನೀಯವಾಗಿ' ಬರೆಯಲ್ಪಟ್ಟ ಹಿಂದಿನ ಸಂಗತಿಗಳೆಲ್ಲ ಇತಿಹಾಸವೆ. ಕೇವಲ ರಾಜಕೀಯ ಇತಿಹಾಸವಷ್ಟೇ ಇತಿಹಾಸವಲ್ಲ. ಮಾನವೀಜೀವನದ ಯಾವತ್ತೂ ಸಂಗತಿಗಳ ಇತಿಹಾಸವನ್ನು ಬರೆಯಬಹುದು ಅವನ ವ್ಯವಹಾರದ ಭಿನ್ನತೆಯಷ್ಟೇ ಇತಿಹಾಸದಲ್ಲಿಯೂ ವಿಭಾಗಗಳಾಗಬಹುದು. ಅದರಂತೆಯೇ ರಾಷ್ಟ್ರದ ಜೀವನದ ಇತಿಹಾಸವನ್ನೂ ಬರೆಯಬಹುದು. ಉದಾಹರಣೆಗಾಗಿ, ರಾಷ್ಟ್ರದ ಆರ್ಥಿಕ, ಸಾಮಾಜಿಕ, ಧಾರ್ಮಿಕ ಇತಿಹಾಸಗಳು. ಇದಲ್ಲದೆ ಶಾಸ್ತ್ರಗಳ, ವಿದ್ಯೆಗಳ, ಕಲೆಗಳ ಇತಿಹಾಸವನ್ನೂ ಬರೆಯಬಹುದು. ಸಾರಾಂಶ ಜ್ಞಾನಪ್ರದ-ವಾಙ್ಮಯದ ಇತಿಹಾಸವೂ ಇದರಲ್ಲಿಯೇ ಸಮಾವೇಶವಾಗುತ್ತದೆ. ಜ್ಞಾನಪ್ರದ-ವಾಙ್ಮಯವು ಸ್ವತಃ ಶಾಸ್ತ್ರ ಅಥವಾ ಕಲೆಯಿರದೆ ಸರ್ವಶಾಸ್ತ್ರ ಹಾಗು ಕಲೆಗಳಿಗೆ ಸಂಬಂಧಿಸಿರುವದೋ ಅದರಂತೆಯೇ ಇತಿಹಾಸವೂ ಶಾಸ್ತ್ರವಿರದೆ ಸರ್ವ ಶಾಸ್ತ್ರಗಳ ಹಾಗು ಜ್ಞಾನದ ಎಲ್ಲ ಕ್ಷೇತ್ರವನ್ನು ವ್ಯಾಪಿಸುವಂಥದಿದೆ.

ಹೀಗೆ ಶಾಸ್ತ್ರ, ವಿದ್ಯೆ, ಉಪಯುಕ್ತಕಲೆ, ಲಲಿತಕಲೆ ಜ್ಞಾನದ ಈ ನಾಲ್ಕು ಭಾಗಗಳ ವಿಚಾರವಾಯಿತು. ಶಾಸ್ತ್ರದಲ್ಲಿ ಚಿಕಿತ್ಸಕ ಬುದ್ಧಿಯು ಮಹತ್ವದ್ದಿರುತ್ತದೆ. ವಿದ್ಯೆಯಲ್ಲಿ ವ್ಯಾವಹಾರಿಕದೃಷ್ಟಿಯು ಪ್ರಧಾನವಾಗಿದ್ದು, ಶಾಸ್ತ್ರೀಯದೃಷ್ಟಿಯು ಅದರ ನೆರವಿಗೆ ಇರುತ್ತದೆ. ಉಪಯುಕ್ತ ಕಲೆಯಲ್ಲಿ ವ್ಯವಹಾರದ ಉಪಯುಕ್ತತೆಯ ದೃಷ್ಟಿಯು ಮುಖ್ಯವಾಗಿದ್ದು ಸೌಂದರ್ಯದ ದೃಷ್ಟಿಯು ಗೌಣವಾಗಿರುತ್ತದೆ. ಲಲಿತಕಲೆಯಲ್ಲಿ ಸೌಂದರ್ಯದೃಷ್ಟಿಗೆ ಪಟ್ಟಗಟ್ಟಿರುತ್ತದೆ. ಇದೇ ಈ ಪ್ರಕರಣದ ಸಾರಾಂಶವು.

---

# ಆರನೆಯ ಮೆಟ್ಟಿಲು

## ಶಾಸ್ತ್ರೀಯ ದೃಷ್ಟಿ ಹಾಗು ಶಾಸ್ತ್ರೀಯ ವಿಚಾರ

'ಶಾಸ್ತ್ರ' ಶಬ್ದದ ವಿಷಯವಾಗಿ ಒಂದು ವಿಶಿಷ್ಟರೀತಿಯಿಂದ ವಿಚಾರಸಿದೆವು. ಆದರೆ ಶಾಸ್ತ್ರವು ಮಾನವನಿರ್ಮಿತ ಜ್ಞಾನಸಾರ ಹಾಗು ಶ್ರೇಷ್ಠಸ್ವರೂಪವಿರುವದರಿಂದ ಅದನ್ನು ಇನ್ನಿಷ್ಟು ನೋಡುವದು ಅವಶ್ಯ. ಶಾಸ್ತ್ರವೆಂದರೇನು ? ಅದು ಹೇಗೆ ರೂಪಗೊಳ್ಳುವದು ? ಶಾಸ್ತ್ರೀಯ ವಿಚಾರಗಳ ರೀತಿ ಯಾವುದು ? ಶಾಸ್ತ್ರೀಯಜ್ಞಾನದ ಕೊನೆ ಯಾವುದು ? ಇತ್ಯಾದಿ ಪ್ರಶ್ನೆಗಳು ವಿಚಾರಣೀಯವಿವೆ. ಈ ಗಹನ ಪ್ರಶ್ನೆಗಳ ವಿಷಯವಾಗಿ ಅನೇಕ ವಿದ್ವಾಂಸರು ತಲೆಕೆಡಿಸಿಕೊಂಡಿದ್ದಾರೆ. ನಾವು ಇವುಗಳನ್ನು ಸುಲಭರೀತಿಯಿಂದ ಬಿಡಿಸಲು ಯೋಚಿಸಿದ್ದೇವೆ.

### ಶಾಸ್ತ್ರದ ವ್ಯಾಖ್ಯೆ

ಕಾವ್ಯದ ವ್ಯಾಖ್ಯೆಯನ್ನು ಮಾಡುವಾಗ ರಸಿಕಾಗ್ರಣಿಗಳ ಮತಿಯು ಅದರಲ್ಲಿಯೇ ಮುಳುಗುವಂತೆ, ಶಾಸ್ತ್ರಜ್ಞರು ಶಾಸ್ತ್ರದ ವ್ಯಾಖ್ಯೆಯನ್ನು ಮಾಡುವಾಗ ಗೊಂದಲಗೆಡುವ ಕಾರಣವಿಲ್ಲ. ಕಾವ್ಯವು ಹೇಳಿಕೇಳಿ ಕಲ್ಪನಾಸಾಗರದಲ್ಲಿ ತೇಲಾಡುವ, ಆನಂದದಲ್ಲಿ ತಲ್ಲೀನವಾಗುವ ವಿಷಯವು 'ದೃಷ್ಟಿಪೂತಂ ನ್ಯಸೇತ್ಪಾದಂ' ಎಂಬುದು ಶಾಸ್ತ್ರದ ಪಲ್ಲವಿಯು. ಸುತ್ತುಮುತ್ತಲೂ ನೋಡಿ ವಿಚಾರಮಾಡದೆ ಶಾಸ್ತ್ರವು ಮುಂದಡಿ ಇಡುವದಿಲ್ಲ. ಆದುದರಿಂದ ಶಾಸ್ತ್ರದ ವ್ಯಾಖ್ಯೆಯನ್ನು ಮಾಡುವಾಗ ಯಾವ ಗೊಂದಲವಿಲ್ಲ. ಬೇರೆಬೇರೆ ವ್ಯಾಖ್ಯೆಗಳಲ್ಲಿ ಅಲ್ಪಸ್ವಲ್ಪ ಅಂತರವು ಕಂಡರೂ ಮೂಲತತ್ವವು ಎಲ್ಲ ಕಡೆಗೂ ಒಂದೇ ಇರುತ್ತದೆ.

ಇಂದ್ರಿಯಗಳ ಅನುಭವ ಹಾಗು ಅನುಮಾನಗಳ ಸಹಾಯದಿಂದ

ದೊರಕಿಸಿದ ವ್ಯವಸ್ಥಿತವಾದ ಜ್ಞಾನಕ್ಕೆ 'ಶಾಸ್ತ್ರ' ವೆನ್ನುತ್ತಾರು. Science is systematic knowledge by experience and inference) ಹೀಗೆ ಕೆಲವರು ವ್ಯಾಖ್ಯೆಮಾಡಿದ್ದಾರೆ. 'ಮಾನವೀ ಬುದ್ಧಿಯು ಸೃಷ್ಟಿಯಲ್ಲಿಯ ಘಟನೆಗಳ ಕಾರ್ಯಕಾರಣಗಳ ಭಾವಾನು ಸಾರ ಮಾಡಿದ ಬುದ್ಧಿಗತ ರಚನೆಯೇ ಶಾಸ್ತ್ರ.' (Science is thus an intellectual construction of those who strive to set all phinomena in this causutive array). ಹೀಗೆಯೂ ಒಬ್ಬರು ವ್ಯಾಖ್ಯೆ ಕಟ್ಟಿದ್ದಾರೆ. ಈ ಎರಡೂ ವ್ಯಾಖ್ಯೆಗಳು ತತ್ವತಃ ಒಂದೇ ಇವೆ. ಮೊದಲನೆಯದರಲ್ಲಿ ವ್ಯವಸ್ಥಿತವಾದ ಜ್ಞಾನಕ್ಕೆ ಜ್ಞಾನವೆಂದಿದ್ದಾರೆ. ಆದರೆ ಜ್ಞಾನವೆಂದರೇನು ? ವ್ಯವಸ್ಥಿತ ಅಂದರೆ ಹೇಗೆ ? ಎಂಬ ಪ್ರಶ್ನೆಗಳು ಎದುರು ನಿಲ್ಲುತ್ತವೆ. ಎರಡನೆಯದರಲ್ಲಿ ಇವು ಸ್ಪಷ್ಟವಾಗಿವೆ. ಸೃಷ್ಟಿಯಲ್ಲಿಯ ಘಟನೆಗಳಿಂದ ನಮ್ಮ ಮನಸ್ಸಿನ ಮೇಲೆ ಆಗುವ ಸಂಸ್ಕಾರಗಳೇ ಜ್ಞಾನವು. ಬುದ್ಧಿಯ ಮೇಲಾಗುವ ಸಂಸ್ಕಾರಕ್ಕೇ ಬುದ್ಧಿಗತರಚನೆ ಎಂದು ವ್ಯಾಖ್ಯೆಯಲ್ಲಿ ವಿವರಿಸಿದೆ. ಅಂದರೆ ನಾವು ಹಿಂದೆ ವಿವರಿಸಿದಂತೆ, ಶಾಸ್ತ್ರವು ಜ್ಞಾನಮಯವು ಎಂದು ಹೇಳಿ ದಂತಾಯಿತು. ಬೌದ್ಧಿಕ ರಚನೆಯು ಶಾಸ್ತ್ರದಲ್ಲಿ ರಚಿಸಲ್ಪಟ್ಟಿರುವ ದೆಂದರೆ, ವರ್ಣ್ಯವಸ್ತುವಿನ ಕಾರ್ಯಕಾರಣಗಳ ಭಾವಾನುಸಾರವಾಗಿ ರಚಿಸಲ್ಪಟ್ಟಿದೆ ಎಂದರ್ಥ. ಅರ್ಥಾತ್ ಈ ಕಾರ್ಯಕಾರಣಗಳ ಸಂಬಂಧ ವನ್ನು ಅರಿಯಲು ವಸ್ತುವಿನ ಪ್ರತ್ಯಕ್ಷ ನಿರೀಕ್ಷಣವೂ ಕಾರ್ಯ ಕಾರಣ ಗಳ ಅನುಮಾನಗಳೂ ಅವಶ್ಯ. ಇವುಗಳಿಲ್ಲದೆ ಕಾರ್ಯಕಾರಣಗಳ ಭಾವಗಳ ಜ್ಞಾನವು ಆಗಲಾರದು.

ಇನ್ನೊಂದು ವ್ಯಾಖ್ಯೆಯು ಕೇವಲ ಭೌತಿಕಶಾಸ್ತ್ರವನ್ನು ಅನು ಲಕ್ಷಿಸಿಯೇ ಮಾಡಿದಂತೆ ಕಾಣುತ್ತದೆ. These scinces have for their object the establishment of nature or of general principals which will render possible the proper interpretation and the intellegent anticipation of the processes of nature, ಹೀಗೆ

ಇದೆ. ಶಾಸ್ತ್ರದ ಉದ್ದೇಶವನ್ನು ನೋಡಿ ಈ ವ್ಯಾಖ್ಯೆಯನ್ನು ರಚಿಸಿದಂತೆ ಕಾಣುತ್ತದೆ. 'ಯಾವ ನಿಯಮಗಳ ಯೋಗದಿಂದ ಸೃಷ್ಟಿಯಲ್ಲಿಯ ಘಟನೆಗಳ ಯೋಗ್ಯ ಸ್ಪಷ್ಟೀಕರಣಮಾಡಲು ಬರುವದೋ ಹಾಗು ಆ ಘಟನೆಗಳ ವಿಷಯದಲ್ಲಿ ತರ್ಕಶುದ್ಧವಾದ ಅನುಮಾನಗಳನ್ನು ಕಟ್ಟಲು ಬರುವದೋ ಅಂತಹ ಸಿದ್ಧಾಂತಗಳನ್ನು ಸೃಷ್ಟಿಯ ವಿಷಯವಾಗಿ ಪ್ರಸ್ಥಾಪಿಸುವದೇ ಭೌತಿಕಶಾಸ್ತ್ರದ ಉದ್ದೇಶವು '. ಇದೇ ಮೇಲಿನದರ ಅರ್ಥವು. ಈ ವ್ಯಾಖ್ಯೆಯಲ್ಲಿ ಸಿದ್ಧಾಂತವನ್ನು ಸ್ಥಾಪಿಸುವದರ ಕಡೆಗೇ ಹೆಚ್ಚು ಲಕ್ಷ್ಯವಿದೆ. ಹಿಂದಿನದರಲ್ಲಿ ಕಾರ್ಯಕಾರಣಗಳ ಭಾವವನ್ನು ಸ್ಥಾಪಿಸುವದರ ಒಲವಿದ್ದಿತು. ಹೀಗೆ ಒಂದೊಂದು ವ್ಯಾಖ್ಯೆಯಲ್ಲಿ ಒಂದೊಂವರ ವಿಷಯಕ್ಕೆ ಲಕ್ಷ್ಯಕೊಟ್ಟಿದ್ದರೂ, ಎಲ್ಲವನ್ನೂ ಸಮನ್ವಯಮಾಡಿದರೆ, ಶಾಸ್ತ್ರದ ನಿಜವಾದ ಜ್ಞಾನವು ಸಮಗಾಗುವದರಲ್ಲಿ ಸಂದೇಹವಿಲ್ಲ. ಆದರೂ ಶಾಸ್ತ್ರದ ಸ್ವರೂಪವೇನು ? ಶಾಸ್ತ್ರವು ಹೇಗೆ ಸಿದ್ಧವಾಗುತ್ತದೆ? ಸಿದ್ಧಾಂತಗಳನ್ನು ಕಟ್ಟುವ ರೀತಿ ಯಾವದು ? ಎಂಬುದನ್ನು ನೋಡೋಣ.

ಶಾಸ್ತ್ರವೆಂದರೆ ಕೇವಲ ಪ್ರತ್ಯಕ್ಷ ವಸ್ತುಗಳೆಂದು ತಿಳಿಯಕೂಡದು. ಕಲ್ಲುಗಳಿಂದ ಮನೆಯಾಗುವದೆಂದು, ಕಲ್ಲಿನ ಕಣಿಯಲ್ಲಿಯೇ ನಮ್ಮ ಸಂಸಾರವನ್ನು ನಡೆಸಬಹುದೇ ! ನಮ್ಮ ಇಂದ್ರಿಯಗಳ ಅನುಭವಕ್ಕೆ ಬಂದ ಸಂಗತಿಗಳ ಪಟ್ಟಿಯನ್ನು ಸಿದ್ಧಪಡಿಸಿದರೆ ಅದು ಶಾಸ್ತ್ರವಾದೀತೇ! ಅವು ಶಾಸ್ತ್ರದ ಕೇವಲ ಸಾಧನಗಳು ಮಾತ್ರ. ಇಂದ್ರಿಯಗಳಿಗೆ ಗೋಚರವಾಗುವ ಪ್ರತಿಯೊಂದು ಘಟನೆಯ ಕಾರಣವನ್ನು ಹುಡುಕಬೇಕು. ಅವುಗಳ ಸಾಮಾನ್ಯಧರ್ಮವನ್ನು ಕಂಡುಹಿಡಿದು ಅವುಗಳನ್ನು ವರ್ಗೀಕರಿಸಬೇಕು. ಯಾವ ಬುದ್ಧಿಯ ಸಹಾಯದಿಂದ ನಮಗೆ ಸಂಸ್ಕಾರಗಳಾಗುವವೋ ಅದೇ ಬುದ್ಧಿಯ ನೆರವಿನಿಂದ ಬೆಳೆದ ಹಾಗು ಸುಸಂಘಟಿತವಾದ ಜ್ಞಾನಕ್ಕೆ ಶಾಸ್ತ್ರವೆನ್ನಬಹುದು.

ಕೇವಲ ಬುದ್ಧಿಯ ಬಲದಿಂದಲೇ ಆಕಾಶದಲ್ಲಿ ಮನೆ ಕಟ್ಟಿದರೆ, ಆ ಶಾಸ್ತ್ರವು ತತ್ತರಿಸಿತೆಂದೇ ತಿಳಿಯಬೇಕು. ಮನೆಯನ್ನು ಕಟ್ಟಬೇಕಾದರೆ, ಕೇವಲ ಗ್ರಾಂಥಿಕಜ್ಞಾನವು ಉಪಯೋಗಬೀಳುವದಿಲ್ಲ. ಪ್ರತ್ಯಕ್ಷ

ಮಣ್ಣು ಕಲ್ಲುಗಳಿಂದ ಕಟ್ಟಬೇಕಾಗುವದು. ಅದರಂತೆಯೇ ಪ್ರತ್ಯಕ್ಷ ವಸ್ತುಗಳ ಆಧಾರವಿರದಿದ್ದರೆ, ಆ ಶಾಸ್ತ್ರವು ಕುಸಿಬಿದ್ದಿತೆಂದೇ ತಿಳಿಯಬೇಕು. ಇಂದು ಯಾವದೇ ಹೊಸ ಶೋಧವನ್ನು ಮಾಡಿದರೆ, ಅದನ್ನು ಪ್ರತ್ಯಕ್ಷ ಪ್ರಯೋಗಮಾಡಿಯೇ ತೋರಿಸಬೇಕಾಗುವದು. ಆದುದರಿಂದಲೇ ಜಗದೀಶಚಂದ್ರ ಬೋಸರು ತಮ್ಮ ಸಾಧನಸಾಮಗ್ರಿಗಳನ್ನೆಲ್ಲ ಕಟ್ಟಿಕೊಂಡು ಹಾವಾಡಿಗರಂತೆ ಸಂಚರಿಸಬೇಕಾಯಿತು. ನಮ್ಮಲ್ಲಿಯು ಸಾಂಖ್ಯ, ನ್ಯಾಯ, ವೈಶೇಷಿಕ ಮೊದಲಾದ ಶಾಸ್ತ್ರಗಳ ಮೂಲತತ್ವಗಳು ನಿಜವಾಗಿಯೂ ಭೌತಿಕಶಾಸ್ತ್ರದಲ್ಲಿಯೇ ಅಡಕವಾಗುತ್ತವೆ. ಆದರೆ ಅವು ಬೌದ್ಧವಾದದಲ್ಲಿಯೇ ಕೊನೆಗಂಡವು. ಯಾಕಂದರೆ ಅವುಗಳಿಗೆ ಪ್ರತ್ಯಕ್ಷ ಪ್ರಯೋಗಗಳ ಆಧಾರವು ತಪ್ಪಿತ್ತು. ಸಾಂಖ್ಯದ ೨೪ ತತ್ವಗಳು, ವೈಶೇಷಿಕರ ಪರಮಾಣುವಾದ, ಹಾಗು ಪಂಚಮಹಾಭೂತಗಳ ಗುಣಧರ್ಮಗಳ ವಿವೇಚನೆ, ಇವೆಲ್ಲವೂ ಭೌತಿಕಶಾಸ್ತ್ರದ ಅಂಗಗಳಲ್ಲವೇ? ಮೂಲ ಋಷಿಗಳೇನೋ ಸೃಷ್ಟಿನಿರೀಕ್ಷಣದಿಂದಲೇ ಈ ಸಿದ್ಧಾಂತಗಳನ್ನು ಕಟ್ಟಿದರು. ಆದರೆ ಮುಂದೆ ಈ ಪದ್ಧತಿಯು ಮಾಯವಾಗಿ ವಾದದಲ್ಲಿ ಪರಿಣಮಿಸಿತು. ನಿಜವಾಗಿಯೂ ಈ ಸಿದ್ಧಾಂತಗಳ ಉಪಯೋಗವು ಪದಾರ್ಥವಿಜ್ಞಾನದಲ್ಲಿ ಆಗಬೇಕಿದ್ದಿತು. ಆದರೆ ಅದು ಘಟಪಟನ್ಯಾಯದಲ್ಲಿ ಪರ್ಯವಸಾನವಾಗಿ ರಾಷ್ಟ್ರದ ಬುದ್ಧಿಯು ವ್ಯರ್ಥವಾಯಿತು. ಜ್ಞಾನದ ಬೆಳವಣಿಗೆಯು ಕುಗ್ಗಿತು. ಅಲೇಕ್ಝಾಂಡ್ರಿಯದ ಪಂಡಿತರೂ ಗ್ರೀಕವಿದ್ಯೆಯ ಗತಿಯನ್ನೂ ಹೀಗೆಯೇ ಮಾಡಿದರು.

## ಇಂದ್ರಿಯಗಳು ಸತ್ಯ ಆದರೆ ಅಪೂರ್ಣ

ಭೌತಿಕಶಾಸ್ತ್ರವೇ ಇರಲಿ, ಸಾಮಾಜಿಕಶಾಸ್ತ್ರವೇ ಇರಲಿ, ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಬೇಕು. ಇಂದ್ರಿಯಜನ್ಯಜ್ಞಾನದ ಮೇಲೆಯೇ ಅದು ಕಟ್ಟಲ್ಪಟ್ಟಿರಬೇಕು. ಜಗತ್ತೆಲ್ಲವೂ ಮಿಥ್ಯಾಯೆಂದು ಹೇಳುವ ಮಾಯಾವಾದಿಗಳಿಗೆ ಎಳ್ಳಷ್ಟೂ ಅನುವು ಕೊಡಕೂಡದು. ಭಾರತೀಯರಾದ ನಮಗೆ ಸಂಸಾರ ಬೇಕು. ಭೋಗ್ಯವಸ್ತುಗಳ ಯಥೇಷ್ಟ ಭೋಗ ಬೇಕು. ಆದರೆ ಜ್ಞಾನಸಂಪಾದನೆಯ ಮಾತೆತ್ತಿದೊಡನೆಯೇ

ನಮಗೆ ವೇದಾಂತವು ನೆನಪಾಗುತ್ತದೆ. ಮಾಯಾವಾದವು ಮುಂದೆ ಬರುತ್ತದೆ. ನಾವು ನಮ್ಮ ಆಲಸ್ಯವನ್ನು ಮುಚ್ಚುವುದಕ್ಕಾಗಿ, ಈ ಮಿಥ್ಯಾವಾದದ ಸೋಗು ಹಾಕುತ್ತೇವೆ. ಶಂಕರಾಚಾರ್ಯರು ತಮ್ಮ ತತ್ವಜ್ಞಾನದಲ್ಲಿ ಇಂದ್ರಿಯಜ್ಞಾನವು ಮಿಥ್ಯಾ ಎಂದು ಹೇಳಿದ್ದೇನೋ ನಿಜ. ಆದರೆ ಶಂಕರಾಚಾರ್ಯರ ತತ್ವಜ್ಞಾನವು ಅನೇಕ ಭಾರತೀಯ ವೇದಾಂತಗಳಲ್ಲೊಂದು. ಉಳಿದ ಎಲ್ಲ ದರ್ಶನಕಾರರು ಶಂಕರಾಚಾರ್ಯರ ಹೊರತು ಉಳಿದೆಲ್ಲ ಆಚಾರ್ಯರು ಇಂದ್ರಿಯಜನ್ಯಜ್ಞಾನವು ಸತ್ಯವೆಂದು ಸಾರಿದ್ದಾರೆ. ಶಂಕರಾಚಾರ್ಯರು ಕೂಡ ವ್ಯವಹಾರದಲ್ಲಿ ಸತ್ಯವನ್ನು ಒಪ್ಪಿಕೊಳ್ಳುತ್ತಾರೆ. ಅಂದಮೇಲೆ, ವೇದಾಂತವು ಪ್ರಗತಿಮಾರ್ಗದಲ್ಲಿ ಅಡ್ಡಬರದೆ ನಮ್ಮ ಆಲಸ್ಯವು ಬರುತ್ತಲಿದೆ.

ಇಂದ್ರಿಯುಗಳು ಸತ್ಯವಿದ್ದು ಸತ್ಯಜ್ಞಾನದ ಸಾಧನೆಗಳೆಂದು ಆಧುನಿಕ ಶಾಸ್ತ್ರಜ್ಞರು ಹೇಳಿದರೂ ಅವು ಪರಿಪೂರ್ಣವಿರುವವೆಂದು ಎಂದೂ ಹೇಳಿಲ್ಲ. ಜಗತ್ತಿನಲ್ಲಿಯ ಏಳು ಬಣ್ಣಗಳು ಮಾತ್ರ ನಮಗೆ ಕಾಣುತ್ತವೆ. ಉಳಿದವು ಇಲ್ಲ. ಅದರಂತೆ ಸೂಕ್ಷ್ಮಪರಮಾಣಗಳು ಕಣ್ಣಿಗೆ ಕಾಣುವದಿಲ್ಲ. ಇವು ಇಂದ್ರಿಯುಗಳ ದುರ್ಬಲತೆಯ ಉದಾಹರಣೆಗಳು. ಇದಲ್ಲದೆ ಎಷ್ಟೋ ಸಲ ಇಂದ್ರಿಯುಗಳು ವಿಪರೀತ ಜ್ಞಾನವನ್ನುಂಟುಮಾಡುತ್ತವೆ. ಸಂಧ್ಯಾಕಾಲದಲ್ಲಿ ಚಂದ್ರಸೂರ್ಯಬಿಂಬಗಳು ಮಧ್ಯಾನ್ಹಕ್ಕಿಂತ ದೊಡ್ಡವು ಕಾಣುತ್ತವೆ. ಇದಕ್ಕಿಂತ ಒಳ್ಳೇ ಉದಾಹರಣೆಯೆಂದರೆ, ಮೃಗಜಲ. ಇಷ್ಟರಿಂದಲೇ ಶಂಕರಾಚಾರ್ಯರ ಮಿಥ್ಯಾಜ್ಞಾನವು ಸಿದ್ಧವಾಗುವದಿಲ್ಲವೆಂಬುದನ್ನು ಮರೆಯಲಾಗದು. ಇದು ಭ್ರಮೆಯಿದೆ ಎಂಬುದನ್ನೂ ಕೂಡ ಮಿಥ್ಯಾ ಎಂದು ತಿಳಿಯುವ ಇಂದ್ರಿಯುಗಳ ಸಹಾಯದಿಂದಲೇ ತಿಳಿದುಕೊಳ್ಳಬೇಕಾಗುವದಿಲ್ಲವೇ !

ಇಂದ್ರಿಯುಗಳಿಂದಾಗುವ ತಪ್ಪುಗಳನ್ನು ತಪ್ಪಿಸಿ, ನಿಜವಾದ ಜ್ಞಾನವಾಗಲು ಶಾಸ್ತ್ರಕಾರರು ಅನೇಕ ಯಂತ್ರಗಳನ್ನು ಮಾಡಿದ್ದಾರೆ. ಈ ಯಂತ್ರಗಳು ಇಂದ್ರಿಯುಗಳ ಶಕ್ತಿಯನ್ನು ಎಷ್ಟೋಪಟ್ಟು ಹೆಚ್ಚಿಸುತ್ತವೆ. ದುರ್ಬಿಣಿ, ಪ್ರಕಾಶಪೃಥಕ್ಕಾರಕ (ಸ್ಪೆಕ್ಟ್ರಾಸ್ಕೋಪ) ಸೂಕ್ಷ್ಮ

ದರ್ಶಕ, ( ಮಾಯಕ್ರಾಸ್ಕೋಪ ) ಮೊದಲಾದವು ಮುಖ್ಯ. ಇವು ಗಳಲ್ಲದೆ, ವಾಯುಶೋಷಕ, ಉರಃಪರೀಕ್ಷಕ, ( ಸ್ಟೇಥಾಸ್ಕೋಪ ) ಉಷ್ಣಮಾಪಕ, ವಾಯುಭಾರಮಾಪಕ, ಪ್ರಕಾಶಮಾಪಕ ಮೊದಲಾದ ಅನೇಕ ಯಂತ್ರಗಳಿವೆ. ಇವುಗಳಿಂದ ಸೃಷ್ಟಿಯ ಸೂಕ್ಷ್ಮನಿರೀಕ್ಷಣಕ್ಕೆ ಅನುಕೂಲವಾಗಿ ಜ್ಞಾನಮಾರ್ಗದಲ್ಲಿ ಒಳ್ಳೇ ಪ್ರಗತಿಯಾಗಿದೆ.

ಬಾಹ್ಯ ಜಗತ್ತನ್ನು ನಿರೀಕ್ಷಿಸಿ ಪ್ರತ್ಯಕ್ಷ ಅನುಭವಗಳಿಂದ ಸತ್ಯ ಜ್ಞಾನವನ್ನು ಸಂಗ್ರಹಿಸುವದೇ ಶಾಸ್ತ್ರದ ತಳಹದಿಯು. ಪ್ರತ್ಯಕ್ಷ ಅನು ಭವಗಳನ್ನು ಪಡೆಯುವ ರೀತಿಯು ಇಬ್ಬಗೆಯದಿದೆ. ಮೊದಲನೆಯದು ನಿರೀಕ್ಷಣ, ( Observation ). ಎರಡನೆಯದು ಪ್ರಯೋಗ (Experiment). ಸೃಷ್ಟಿಯ ಗುಟ್ಟು ತಿಳಿಯಬೇಕೆಂಬುದೇ ಎರಡೂ ಪ್ರಯತ್ನಗಳ ಉದ್ದೇಶವಿದ್ದರೂ, ಅವುಗಳ ಕಾರ್ಯಪದ್ಧತಿಯು ಭಿನ್ನ ಇದೆ. ಸೃಷ್ಟಿಯಲ್ಲಿಯ ವಸ್ತುವಿನ ವ್ಯಾಪಾರದ ಮೇಲೆ, ಅಥವಾ ಪರಿ ಸ್ಥಿತಿಯ ಮೇಲೆ, ನಮ್ಮ ಹಿತವು ಇಲ್ಲದಾಗ ಅವುಗಳ ಅವಲೋಕನವೇ 'ನಿರೀಕ್ಷಣ 'ವೆನಿಸುವದು. ಅಂದಮೇಲೆ ಈ ನಿರೀಕ್ಷಣವ, ಇಂದ್ರಿಯ ಗಳಿಂದ ಮಾಡಿದ್ದು ಯಂತ್ರಗಳಿಂದ ನೋಡಿದ್ದು ಇರಬಹುದು. ಜ್ಯೋತಿಷ ಶಾಸ್ತ್ರದಲ್ಲಿ ನಿರೀಕ್ಷಣದ ಸಾಮ್ರಾಜ್ಯವೇ ಇರುತ್ತದೆ. ಯಾಕಂದರೆ ಆಕಾಶದಲ್ಲಿಯ ಯಾವ ಗ್ರಹಗಳ ಮೇಲೆಯೂ ಮಾನವನ ಹಿಡಿತವಿಲ್ಲ. ಡಾಕ್ಟರರು ನಾಡಿಗಳನ್ನೇ ಪರೀಕ್ಷಿಸಲಿ, ಥರ್ಮಾಮೀಟರಿನಿಂದ ಉಷ್ಣತೆ ಯನ್ನು ನೋಡಲಿ, ಹೃದಯವನ್ನೇ ನೋಡಲಿ ಅದೆಲ್ಲವೂ ನಿರೀಕ್ಷಣವೇ

ಸೃಷ್ಟವಸ್ತುವಿನ ಮೇಲೆ ನಮ್ಮ ಹಿಡಿತವನ್ನಿಟ್ಟುಕೊಂಡು, ನಮಗೆ ಬೇಕಾದಾಗ ನಿರೀಕ್ಷಿಸಲು ಬರುವಂತೆ ಮಾಡಿಕೊಂಡು ನಿರೀಕ್ಷಿ ಸುವದೇ 'ಪ್ರಯೋಗ 'ವೆಂದು ಕರೆಯಲ್ಪಡುತ್ತದೆ. ಶಾಸ್ತ್ರದ ಅಭ್ಯಾ ಸಕ್ಕೆ ಕೇವಲ ನಿರೀಕ್ಷಣವಷ್ಟೇ ಒಮ್ಮೊಮ್ಮೆ ಉಪಯೋಗ ಬೀಳುವದಿಲ್ಲ ಸೃಷ್ಟ ಪದಾರ್ಥಗಳ ವ್ಯಾಪಾರವು ಅತ್ಯಂತ ತೊಡಕಿನದಿರುವದರಿಂದ ಕೇವಲ ಅವಲೋಕನದಿಂದ ಘಟನೆಗಳ ಕಾರ್ಯಕಾರಣಸಂಬಂಧವು ತಿಳಿ ಯುವದಿಲ್ಲ. ಭಿನ್ನಭಿನ್ನ ಪದಾರ್ಥಗಳ ಪರಿಣಾಮ ಪ್ರಾಣಿಗಳ ಶರೀರದ

ಮೇಲೆ ಹೇಗಾಗುವದೆಂಬುದನ್ನು ನೋಡಬೇಕಾದರೆ, ಆ ಪ್ರಾಣಿಗೆ ಪದಾರ್ಥವೊಂದನ್ನು ತಿನ್ನಲು ಕೊಟ್ಟು ಉಳಿದವುಗಳನ್ನು ಅದು ಮುಟ್ಟದಂತೆ ವ್ಯವಸ್ಥೆಮಾಡಿ ಅದನ್ನು ನಿರೀಕ್ಷಿಸಬೇಕಾಗುತ್ತದೆ. ಇದಕ್ಕೇ ಪ್ರಯೋಗವೆನ್ನುವರು. ಸೃಷ್ಟಿಯ ಘಟನೆಗಳ ಅನೇಕ ವ್ಯಾಪಾರಗಳ ಕಾರ್ಯಕಾರಣಗಳಲ್ಲಿರುವ ತೊಡಕನ್ನು ಬಿಡಿಸಲು ಯಾವ ವಸ್ತುವಿನ ವಿಚಾರ ನಮಗಿದೆಯೋ ಅದಷ್ಟೇ ನಮ್ಮ ಕಣ್ಣಿಗೆ ಬೀಳುವಂತೆ ಮಾಡುವದೇ ಪ್ರಯೋಗವು. ಇಂಥ ಪ್ರಯೋಗವು ಪದಾರ್ಥವಿಜ್ಞಾನ, ರಸಾಯನ, ಜೀವಶಾಸ್ತ್ರಗಳಲ್ಲಿ ವಿಶೇಷವಾಗಿ ಮಾಡಲ್ಪಡುತ್ತದೆ. ರಕ್ತಾಭಿಸರಣಕ್ರಿಯೆಯನ್ನು ಹುಡುಕುವಾಗ ಹಾರ್ವೆಯು ಜೀವಂತ ಮನುಷ್ಯನ ಧಮನಿಗಳ ಮೇಲೆ ಪ್ರಯೋಗಮಾಡಿದನು. ಪಾಶ್ಚೂರನು ಪ್ರಯೋಗದಿಂದಲೇ ಲಸ್ಸ(ರಸಿಕೆ) ಗಳನ್ನು ಕಂಡುಹಿಡಿದು ಅವುಗಳನ್ನು ಉಪಯೋಗದಲ್ಲಿ ತಂದನು. ರಸಾಯನಶಾಸ್ತ್ರದಲ್ಲಿ ಪ್ರಯೋಗದ ಸಾಮ್ರಾಜ್ಯವಿರುತ್ತದೆ. ಪ್ರಯೋಗವನ್ನು ಮಾಡದೆ ಪದಾರ್ಥಗಳ ಘಟಕಗಳ ಜ್ಞಾನವಾಗುವದೇ ಇಲ್ಲ.

ಶಾಸ್ತ್ರದ ಪ್ರಕ್ರಿಯೆಯ ಮೊದಲನೆ ಮೆಟ್ಟಲಾದ ಅವಲೋಕನದ ವಿಚಾರವಾಯಿತು. ಇದರಲ್ಲಿ ಪೃಥಕ್ಕರಣ ( Analysis ) ಹಾಗು ಸಂಕಲನ ( Synthesis ) ಎಂಬೆರಡು ಕ್ರಿಯೆಗಳಿವೆ. ಶರೀರದ ಗುಣಧರ್ಮಗಳನ್ನು ತಿಳಿದುಕೊಳ್ಳುವದಿದೆ ಎಂದು ತಿಳಿಯೋಣ. ಈ ಸಮಯದಲ್ಲಿ ಇಡೀ ಶರೀರವನ್ನು ನೋಡಿದರೇನೂ ಉಪಯೋಗ ಬೀಳುವದಿಲ್ಲ. ಕೈ, ಕಾಲು, ಮೊದಲಾದ ಅವಯವಗಳನ್ನು ಬೇರ್ಪಡಿಸಿ ಅವಲೋಕಿಸಬೇಕಾಗುವದು. ಮತ್ತು ಸ್ನಾಯು, ಜ್ಞಾನತಂತು ಅಸ್ಥಿ ಮೊದಲಾದವುಗಳನ್ನು ಬೇರೆ ಬೇರೆಯಾಗಿ ನಿರೀಕ್ಷಿಸಬೇಕಾಗುವದು. ಇದಕ್ಕೆ ಪೃಥಕ್ಕರಣ ಅವಲೇಕನವೆನ್ನುವರು.

ಪೃಥಕ್ಕರಿಸಿ ವಿಚಾರಿಸಿದನಂತರ ಎಲ್ಲ ಘಟಕಗಳ ಪರಿಣಾಮವು ಪರಸ್ಪರ ಘಟಕದ ಮೇಲೆ ಹೇಗಾಗುವದು ? ಎಲ್ಲವುಗಳ ಪರಿಣಾಮವು ಶರೀರದ ಮೇಲೆ ಹೇಗಾಗುವದು ಎಂಬುದನ್ನು ನಿರೀಕ್ಷಿಸುವದೇ ಸಂಕಲನ ಪದ್ಧತಿಯು.

ಒಟ್ಟಿನಲ್ಲಿ ನಿರೀಕ್ಷಣವು ವ್ಯವಸ್ಥಿತವಾಗಿದ್ದರೆ ಮಾತ್ರ ಜ್ಞಾನವು ದೊರೆಯುವದು. ನಾವೆಲ್ಲರೂ ಯಾವಾಗಲು ಜಗತ್ತನ್ನು ನೋಡುತ್ತಲೇ ಇರುತ್ತೇವೆ. ಕಿವಿಗಳು ಕೇಳುತ್ತಿರುತ್ತವೆ. ಎಲ್ಲವೂ ನಡೆದಿರುತ್ತದೆ. ಜ್ಞಾನವು ಮಾತ್ರ ದೂರಿ. ಕ್ರಮಿಕ ಪುಸ್ತಕದಲ್ಲಿಯ, 'eyes and no-eyes' ಅಥವಾ ಕಣ್ಣಿನ ಉಪಯೋಗ ಎಂಬ ಪಾಠವು ಎಲ್ಲರಿಗೂ ಗೊತ್ತಿರಬಹುದು. ಉಗಿಬಂಡಿಯಲ್ಲಿ ಪ್ರವಾಸಮಾಡುವ ಚಿಕಿತ್ಸಕ ಮನುಷ್ಯನು, ಉಗಿಬಂಡಿಯು ಹಾಯ್ದ ಭೂಪ್ರದೇಶದ ವರ್ಣನೆಯನ್ನೂ ಅಲ್ಲಿರುವ ಜನಾಂಗದ ವರ್ಣನೆಯನ್ನೂ ಮಾಡಬಹುದು. ಆದರೆ ಉಳಿದ ಪ್ರವಾಸಿಕರು ಕಣ್ಣಿದ್ದು ಕುರುಡರೇ? ಶಾಸ್ತ್ರಕ್ಕೆ ವ್ಯವಸ್ಥಿತವಾದ ಬೇಸರಿಯದ ನಿರೀಕ್ಷಣವು ಬೇಕು. ಒಳ್ಳೇ ವ್ಯವಸ್ಥಿತವಾದ ಪೃಥಕ್ಕರಣಾತ್ಮಕ ನಿರೀಕ್ಷಣಕ್ಕೆ ಉದಾಹರಣೆಯೆಂದರೆ— ನಮ್ಮ ದೇ. ಭ. ಕೌಜಲಗಿ ಹಣಮಂತರಾಯರು. ಅವರು ಕರ್ನಾಟಕದ ಹಳ್ಳಿಯ ಜೀವನವನ್ನು ವ್ಯವಸ್ಥಿತವಾಗಿ ಅಭ್ಯಾಸಮಾಡಿದ್ದಾರೆ. ಎಲ್ಲಿ ಯಾವ ಉದ್ಯೋಗವು ಹೇಗೆ ಫಲಕಾರಿಯಾಗುವದೆಂಬುದನ್ನು ಥಟ್ಟನೆ ಹೇಳುವರು. ಇಂತಹ ಸಾಧಾರಣವಾದ ವಿಚಾರಗಳೇ ಶಾಸ್ತ್ರಗಳ ತಳಹದಿಯು. ಇಂತಹ ಅವಲೋಕನದಿಂದಲೇ ಮುಂದೆ ಸಮಾಜಶಾಸ್ತ್ರ, ಅರ್ಥಶಾಸ್ತ್ರ ಮೊದಲಾದವುಗಳು ಉದಯವಾಗುತ್ತವೆ.

ಕೇವಲ ನಿರೀಕ್ಷಣವೇ ಶಾಸ್ತ್ರವಲ್ಲವೆಂಬುದನ್ನು ಲಕ್ಷ್ಯದಲ್ಲಿಡಬೇಕು. ನಾವು ಸೃಷ್ಟಿಯ ನಿರೀಕ್ಷಣವನ್ನು ಮಾಡಿ ಎಷ್ಟೋ ಜ್ಞಾನವನ್ನು ಸಂಗ್ರಹಿಸಬಹುದು. ಆದರೆ ಅದರ ಮೇಲೆ ಬುದ್ಧಿಯ ಕೈ ಆಡದ ಹೊರತು ಅದಕ್ಕೆ ಶಾಸ್ತ್ರದ ಸ್ವರೂಪ ಬರಲಾರದು. ನಾವು ನೋಡಿದ ವಸ್ತುವಿನ ಗುಣಧರ್ಮಗಳನ್ನು ಹುಡುಕಿ ತೆಗೆಯಬೇಕು. ಆದರಿಂದ ಸಾಮಾನ್ಯ ನಿಯಮವನ್ನು ಕಟ್ಟಬೇಕು. ಆದರ ಕಾರಣದ ಮೀಮಾಂಸೆಯನ್ನು ಮಾಡಬೇಕು. ಅಂದರೆ ಆದರಿಂದ ಏನಾದರೂ ಜ್ಞಾನವಾಗಬಹುದು. ಮಾನವೀ ಬುದ್ಧಿಯು ಸುವ್ಯವಸ್ಥಿತವಾಗಿ ಮಾಡಿದ ಜ್ಞಾನಕ್ಕೆ ಶಾಸ್ತ್ರವೆಂಬ ಹೆಸರು ಎಂಬುದನ್ನು ಹಿಂದೆಯೇ ಹೇಳಿದೆ. ನ್ಯೂಟನ್ನನ ಕಾಲದ ವರೆಗೆ ಎಷ್ಟೋ

ಜನರು ಗ್ರಹಗತಿಯನ್ನು ನಿರೀಕ್ಷಿಸಿದ್ದರು. ನೂರಾರು ಜ್ಯೋತಿಷಿಗಳು ವೇಧವನ್ನು ಕೂಡ ತೆಗೆದಿರಬಹುದು. ಆದರೆ ಗುರುತ್ವಾಕರ್ಷಣ ಶಕ್ತಿಯನ್ನು ಹುಡುಕಿ, ಅದರಿಂದ ಗ್ರಹಗಳ ಗತಿಯೇ ಏಕೆ—ವಿಶ್ವದಲ್ಲಿಯ ಎಲ್ಲ ಪದಾರ್ಥಗಳ ಗತಿಯ ಉಪಪತ್ತಿಯನ್ನು ಹಚ್ಚಿದನು. ಇದೇ ಶಾಸ್ತ್ರದ ನಿಜವಾದ ಕಾರ್ಯವು. ಶಾಸ್ತ್ರೀಯ ದೃಷ್ಟಿಯ ನಿಜವಾದ ವಿಜಯವು.

## ಅನುಮಾನಗಳು

ಶಾಸ್ತ್ರದಲ್ಲಿ ಬುದ್ಧಿಯ ಕೈವಾಡ ಹೇಗೆ ನಡೆಯುವದೆಂಬುದನ್ನಷ್ಟು ನೋಡೋಣ. ಬುದ್ಧಿಶಬ್ದವನ್ನು ಇಲ್ಲಿ ' ಸಾಧಕ-ಬಾಧಕ ವಿಚಾರ ಮಾಡುವ ಮನಸ್ಸಿನ ಶಕ್ತಿ ' ( Power of reasoning ) ಎಂಬ ಅರ್ಥದಲ್ಲಿ ಉಪಯೋಗಿಸಿದೆ. ಬುದ್ಧಿಯ ಸಹಾಯದಿಂದ ನಾವು ಇಂದ್ರಿಯ-ಜನ್ಯಜ್ಞಾನಕ್ಕಿಂತಲೂ ಹೆಚ್ಚು ಜ್ಞಾನವನ್ನು ಪಡೆಯುವೆವು. ಇಂದ್ರಿಯಗಳ ಜ್ಞಾನಕ್ಕಿಂತಲೂ ಅಥವಾ ಮೊದಲಿದ್ದ ಜ್ಞಾನಕ್ಕಿಂತಲೂ ಹೆಚ್ಚಿನ ಜ್ಞಾನವನ್ನು ಮಾಡಿಕೊಡುವ ಬುದ್ಧಿಯ ವ್ಯಾಪಾರಕ್ಕೆ ' ಅನುಮಾನ ' ವೆನ್ನುವರು. ಉಳಿದ ಮಾರ್ಗಗಳಿಂದಲೂ ನಮಗೆ ಜ್ಞಾನವಾಗುವದು ಶಕ್ಯವಿದೆ. ಅದನ್ನು ಮುಂದೆ ನೋಡೋಣ.

ಅನುಮಾನದಲ್ಲಿ ಅರಿಸ್ಟಾಟಲನು ಮೂರು ವಿಭಾಗಗಳನ್ನು ಮಾಡಿದ್ದಾನೆ. ನಿರ್ಗಮನ ( Induction ) ನಿಗಮನ ( Deduction ) ಮತ್ತು ಸದೃಶಗಮನ ಅಥವಾ ದೃಷ್ಟಾಂತಾನುಸಾರಿತ್ವ (Analogy). ಇದರಲ್ಲಿಯ ಸದೃಶಗಮನವು ಪಶುಗಳಲ್ಲಿ ಕೂಡ ಕಾಣುವದು. ನಾಯಿಗೆ ಇಂದು ಪಾತ್ರೆಯಲ್ಲಿ ಅನ್ನವನ್ನು ಹಾಕಿದರೆ, ಮರುದಿನ ಅದೇ ಹೊತ್ತಿಗೆ ಅದೇ ಪಾತ್ರೆಯಲ್ಲಿ ಅನ್ನಸಿಗುವದೆಂದು ನಾಯಿಯು ಭಾವಿಸುವದು. ಅದರಂತೆ ವಿಶಿಷ್ಟಕಾರಣಗಳಿಂದ ಯಾವುದೊಂದು ಸಂಗತಿಯು ಸಂಭವಿಸಿದರೆ, ಅವೇ ಕಾರಣಗಳು ಮತ್ತೆ ಉದ್ಭವಿಸಿದರೆ, ಅದೇ ಸಂಗತಿಯು ಸಂಭವಿಸುವದೆಂದು ಮನಸ್ಸಿಗೆ ಹೊಳೆಯುವದು ಸ್ವಾಭಾವಿಕವಿದೆ. ಇದೇ ಸದೃಶಗಮನದ ವ್ಯಾಪಾರವು. ಓದುಬರಹವರಿಯದ ಒಕ್ಕಲಿಗರು ವಿಶಿಷ್ಟಸಮಯಕ್ಕೆ ಮಳೆಯ ಅಪೇಕ್ಷೆಯನ್ನು ಮಾಡು

ತ್ತಾರೆ. ಯಾಕಂದರೆ ಆ ಕಾಲಕ್ಕೆ ಹಿಂದಕ್ಕೆ ಅನೇಕ ಸಲ ಮಳೆಯಾಗಿರು ತ್ತದೆ. ಆದರೆ, ಮಳೆಯು ಗಾಳಿಗಳು ಹೇಗೆ ಬೀಸುತ್ತವೆ? ಯಾಕೆ ಬೀಸು ತ್ತವೆಂಬುದರ ಗಂಧವು ಕೂಡ ಅವರಿಗೆ ಇರುವದಿಲ್ಲ. ಸದೃಶಗಮನದ ವ್ಯಾಪಾರವು ಕೊನೆಗೆ ರೂಢಿಯಲ್ಲಿ ಪರಿಣಮಿಸುವದು.

ಸದೃಶಗಮನವು ವ್ಯವಹಾರಕ್ಕೆ ಬಹು ಉಪಯುಕ್ತವು. ಆದರೆ ಶಾಸ್ತ್ರದಲ್ಲಿ ಅಷ್ಟು ಉಪಯೋಗ ಬೀಳುವದಿಲ್ಲ. ಸದೃಶಾಗಮನವೆಂದರೆ, ಒಂದು ವಿಶಿಷ್ಟ ಸಂಗತಿಯಿಂದ ಅದರಂತಹ ಇನ್ನೊಂದು ಸಂಗತಿಯ ಅನು ಮಾನವನ್ನು ಕಟ್ಟುವದು. ಶಾಸ್ತ್ರಕ್ಕೆ ಕಾರಣವನ್ನೂ ಸಾಮಾನ್ಯ ನಿಯ ಮವನ್ನೂ ಹುಡುಕುವದಿರುವದರಿಂದ ಇದರ ಉಪಯೋಗವಾಗುವದಿಲ್ಲ. ಆದರೆ ಸದೃಶಗಮನದಿಂದ ನಿರ್ಗಮನದ ಕಡೆಗೂ, ಅಥವಾ ವಿಶಿಷ್ಟ ಸಂಗತಿಗಳಿಂದ ಸಾಮಾನ್ಯ ನಿಯಮದ ಕಡೆಗೂ ಬುದ್ಧಿಯು ಹರಿಯಹತ್ತಿ ದರೆ ಮಾತ್ರ, ಅದು ಶಾಸ್ತ್ರದ ಕ್ಷೇತ್ರವನ್ನು ಪ್ರವೇಶಿಸುವದು. ಅನೇಕ ವಿಶಿಷ್ಟಸಂಗತಿಗಳಿಂದ ಸಾಮಾನ್ಯ ನಿಯಮವನ್ನು ತೆಗೆಯುವದಕ್ಕೆ 'ನಿರ್ಗ ಮನ' ವೆನ್ನುವರು. ನೀರು ಕಾಯುತ್ತಲೇ ಹೆಚ್ಚುತ್ತದೆ. ಎಣ್ಣೆ ಹೆಚ್ಚು ತ್ತದೆ, ಕಬ್ಬಿಣವು ಹೆಚ್ಚುತ್ತದೆ. ಇಷ್ಟೇ ಗೊತ್ತಿದ್ದರೆ ಅದು ಶಾಸ್ತ್ರವಾಗ ಲಾರದು.ಆದರೆ 'ಉಷ್ಣತೆಯಿಂದ ಪದಾರ್ಥಗಳು ಪ್ರಸರಣ ಹೊಂದುತ್ತ' ವೆಂಬ ಸಾಮಾನ್ಯ ನಿಯಮಕ್ಕೆ ಬಂದರೆ, ಆ ಜ್ಞಾನಕ್ಕೆ ಒಮ್ಮೆಲೆ ವ್ಯಾಪ ಕತ್ವವುಂಟಾಗಿ, ಅದು ಶಾಸ್ತ್ರದಲ್ಲಿ ಸಮಾವೇಶವಾಗುತ್ತದೆ. ಅನೇಕ ವಸ್ತುಗಳು ತುಂಡಾಗುತ್ತ ಅತಿಸೂಕ್ಷ್ಮಕಣಗಳಾಗುವದನ್ನು ನೋಡಿ ನೋಡಿ ಪ್ರಾಚೀನಕಾಲದಲ್ಲಿ 'ಸರ್ವಪದಾರ್ಥಗಳು ಅಣುಗಳಿಂದ ಆಗಿರ ಬೇಕು' ಎಂಬ ಅನುಮಾನವು ಭಾರತೀಯರಿಗೂ ಗ್ರೀಕರಿಗೂ ಹೊಳೆದಿರ ಬೇಕು.

ಹೀಗೆ ಅನೇಕ ಸಾಮಾನ್ಯ ನಿಯಮಗಳು ಮನುಷ್ಯನಲ್ಲಿ ಸಂಗ್ರಹ ವಾದೊಡನೆ, ಆ ನಿಯಮಗಳಿಂದಲೇ ತಮಗೆ ಅಜ್ಞಾತವಾದ ವಿಶಿಷ್ಟಸಂಗ ತಿಯ ಬಗ್ಗೆ ಅನುಮಾನ ತೆಗೆಯುವರು. ಅನೇಕ ಉದಾಹರಣೆಗಳಿಂದ 'ಉಷ್ಣತೆಯಿಂದ ಪದಾರ್ಥಗಳು ಪ್ರಸರಣ ಹೊಂದುತ್ತವೆ, ಹವೆಯು

ಪದಾರ್ಥವಾದುದರಿಂದ ಅದೂ ಪ್ರಸರಣ ಹೊಂದಲೇಬೇಕು ಎಂದು ಅನುಮಾನವನ್ನು ತೆಗೆಯುವರು. ಇಂತಹ ಅನುಮಾನಕ್ಕೆ ನಿಗಮನ (ಸಾಮಾನ್ಯದಿಂದ ವಿಶಿಷ್ಟಸಂಗತಿಯ ಕಡೆಗೆ ಗಮನವೆಂದರೆ ಜ್ಞಾನ)ವೆನ್ನುವರು. ಯಾವ ಸಾಮಾನ್ಯ ನಿಯಮದ ಆಧಾರದಿಂದ ಇಂತಹ ಅನುಮಾನವನ್ನು ತೆಗೆಯುವರೋ ಅದಕ್ಕೆ 'ಗೃಹೀತ ತತ್ವ' (Major premis) ವೆನ್ನುವರು. ಇದಕ್ಕೆ ಸಂಸ್ಕೃತದಲ್ಲಿ 'ವ್ಯಾಪ್ತಿ' ಎನ್ನುವರು. ಅನುಮಾನಕ್ಕೆ ಯಾವ ಎರಡನೆಯ ಸಿದ್ಧವಸ್ತುವಿನ ಅವಶ್ಯಕತೆ ಇರುವದೋ ಅದಕ್ಕೆ 'ಸಿದ್ಧವಸ್ತು'ಎನ್ನುವರು. ಇಂಗ್ಲೀಷಿನಲ್ಲಿ ಅದಕ್ಕೆ Miner premis ಎನ್ನುವರು. ನ್ಯಾಯಶಾಸ್ತ್ರದಲ್ಲಿ 'ಪಕ್ಷಧರ್ಮ'ವೆನ್ನುವರು. ಮೇಲಿನ ಉದಾಹರಣೆಯಲ್ಲಿ ಹವೆಯು ಪದಾರ್ಥವಿದೆ. ಇದು ಸಿದ್ಧವಸ್ತುವು. 'ಉಷ್ಣತೆಯಿಂದ ಪದಾರ್ಥವು ಪ್ರಸರಣ ಹೊಂದುತ್ತದೆ.' ಈ ಸಾಮಾನ್ಯ ಸಿದ್ಧಾಂತವು ಗೃಹೀತ ತತ್ವವು. ಹವೆಯು ಪ್ರಸರಣ ಹೊಂದುವದು ಇದು ಸಾಧ್ಯ, ಅಥವಾ ಸಿದ್ಧಮಾಡಬೇಕಾದ ತತ್ವ.

ಅನುಮಾನದ ಈ ನಿಗಮನ ಭಾಗಕ್ಕೆ ಮಹತ್ವ ಕೊಟ್ಟು ಅದನ್ನೇ ಹೆಚ್ಚಾಗಿ ಬೆಳೆಸಿದರು. ನಿಗಮನ ಅನುಮಾನಕ್ಕೆ ಆಧಾರವಾದ ಸಾಮಾನ್ಯ ನಿಯಮಗಳು ಅನೇಕ ವಸ್ತುಗಳ ನಿರೀಕ್ಷಣದಿಂದ ಕಟ್ಟಲ್ಪಟ್ಟಿವೆ ಎಂಬುದನ್ನು ಲಕ್ಷ್ಯಕೊಡದೆ, ಅವೆಲ್ಲವೂ ಸ್ವಯಂಭುವೆಂದು ತಿಳಿದುಕೊಂಡರು. ಇದರ ಪರಿಣಾಮವು, ನಿರೀಕ್ಷಣದಿಂದ ತೆಗೆದ ಸಾಮಾನ್ಯ ನಿಯಮಗಳೊಡನೆ ಮನಃಕಲ್ಪಿತ ನಿಯಮಗಳು ಕೂಡ ವ್ಯಾಪಕಸಿದ್ಧಾಂತಗಳೆಂದು ಗೃಹಿಸತೊಡಗಿದರು. ಈ ಮನಃಕಲ್ಪಿತ ಸಿದ್ಧಾಂತಗಳಿಂದ ವಿಲಕ್ಷಣವಾದ ಸಿದ್ಧಾಂತಗಳನ್ನು ತೆಗೆಯ ತೊಡಗಿದರು. ಉದಾಹರಣೆಗಾಗಿ, ಅರಿಸ್ಟಾಟಲನು, ನಕ್ಷತ್ರಗಳು ನಿತ್ಯವಿದ್ದು ಅವುಗಳ ಗತಿಯೂ ನಿತ್ಯವಿರುತ್ತದೆ; ಮತ್ತು ವರ್ತುಲಾಕಾರ ಗತಿಯೊಂದೇ ನಿತ್ಯವಿರಲು ಶಕ್ಯವಿದೆ ಎಂಬ ಸಿದ್ಧಾಂತವನ್ನು ಪ್ರತ್ಯಕ್ಷ ಪ್ರಮಾಣಗಳಿಲ್ಲದೆ ಗೃಹೀತಹಿಡಿದು ನಕ್ಷತ್ರಗಳೆಲ್ಲವೂ ವರ್ತುಲಾತ್ಮಕಗತಿಯಿಂದ ಪೃಥ್ವಿಯ ಸುತ್ತಲೂ ತಿರುಗುತ್ತವೆ ಎಂಬ ಅನುಮಾನ ತೆಗೆದನು. ಎಲ್ಲವೂ ತಪ್ಪು. ಅರಿಸ್ಟಾಟಲ

ಸಂಥ ಮಹಾಶಾಸ್ತ್ರಜ್ಞನ ಗತಿಯೇ ಹೀಗಾದ ಮೇಲೆ, ಪಾಪ ಬಡ ಕ್ರಿಸ್ತಿ ಭಟ್ಟರ ಪಾಡೇನು ? ಸರ್ವಜ್ಞಾನವು ಬಾಯಬಲ್ಲಿನಲ್ಲಿದೆ ಎಂಬುದೇ ಅವರ ಮಹಾಮಂತ್ರ. ಆದರಲ್ಲಿರುವ ವರ್ಣನೆಗಳು ಕೂಡ ಸಾಮಾನ್ಯ ನಿಯಮ ಗಳಿಂದು ಬಗೆದು ಅವುಗಳಿಂದ ವಿಗಮನ ಅನುಮಾನಗಳನ್ನು ತೆಗೆಯ ಹತ್ತಿದರು. ಹೀಗೆ ಅಸತ್ಯದ ಮೂಲಿಕೆಯೇ ಸಿದ್ಧವಾಗಿ ಯುರೋಪ ವೆಲ್ಲ ಅಜ್ಞಾನದಲ್ಲಿ ಮುಳುಗಿತು. ಆದರೆ ಸತ್ಯಸಿದ್ಧಾಂತಗಳ ಮುಂದೆ ಇವು ಬಾಳುವುದೆಂತು! ಸೂರ್ಯೋದಯವಾದೊಡನೆ ಮಂಜು ಮಾಯ ವಾಗುವಂತೆ, ಕೋಪರ್ನಿಕಸ, ಕೆಪ್ಲರ ಮೊದಲಾದ ಶಾಸ್ತ್ರಜ್ಞರು ಬಂದೊಡನೆ ವಿಚಾರಕ್ರಾಂತಿಯಾಗಿ ಆಧುನಿಕ ಶಾಸ್ತ್ರೀಯ ಯುಗವು ಪ್ರಾರಂಭವಾಯಿತು.

### ಬೇಕನ್ನನೂ, ಅವನ ಪದ್ಧತಿಯೂ

ಆಧುನಿಕ ಶಾಸ್ತ್ರೀಯ ಪದ್ಧತಿಯನ್ನು ವ್ಯವಹಾರದಲ್ಲಿ ತಂದು ಮಹತ್ವವಾದ ಶೋಧಗಳನ್ನು ಮಾಡಿದ ಕೆಪ್ಲರ, ಗ್ಯಾಲಿಲಿಯೋ, ನ್ಯೂಟನ ಮೊದಲಾದವರಲ್ಲಿ ಲಾರ್ಡ ಬೇಕನ್ನನ ವಿವೇಚನ ಪದ್ಧತಿಯು ಶ್ರೇಷ್ಠ ವೆಂದು ಪ್ರಸಿದ್ಧವಿದೆ. ಅವನು 'ನೂತನ ಸಾಧನ' ( Novum organum )ವೆಂಬ ಗ್ರಂಥದಲ್ಲಿ ತನ್ನ ಪದ್ಧತಿಯನ್ನು ವರ್ಣಿಸಿದ್ದಾನೆ. ಶಾಸ್ತ್ರಜಿಜ್ಞಾಸುಗಳು ಮೊದಲು ನಿರೀಕ್ಷಣ, ಪ್ರಯೋಗಗಳಿಂದ ಅನೇಕ ಸಂಗತಿಗಳನ್ನು ಕಲೆಹಾಕಬೇಕು. ಅದನ್ನು ವ್ಯವಸ್ಥಿತವಾಗಿ ಬರೆದು ತೆಗೆಯಬೇಕು. ಆಮೇಲೆ, ತಾನು ಸಂಶೋಧನ ಮಾಡ ಬೇಕಾದ ಸಂಗತಿಯ ಉದಾಹರಣೆಗಳನ್ನು ಬೇರೆ ಮಾಡಬೇಕು. ಹೀಗೆ ವಿಂಗಡಿಸಿದ ನಂತರ, ಸಿದ್ಧಾಂತವಿರುವ ಉದಾಹರಣೆಗಳಿಂದ ಕಂಡು ಬರುವ ವೈಶಿಷ್ಟ್ಯದಿಂದ ಆ ಘಟನೆಯ ಕಾರಣವನ್ನು ನಿಶ್ಚಯಿಸಬೇಕು. ಈ ಪದ್ಧತಿಗೆ 'ಪ್ರತ್ಯಕ್ಷಾನುಗಾಮಿ' ಎನ್ನುವರು. ಈ ಪದ್ಧತಿಯಲ್ಲಿ ಏನೂ ಗೃಹೀತ ಹಿಡಿಯಕೂಡದು. ಇಷ್ಟೇ ಅಲ್ಲ–ಯಾವುದೊಂದು ಕಲ್ಪನೆಯನ್ನು ಮನಸ್ಸಿನಲ್ಲಿ ನೂಡಿಕೊಂಡು ಉದಾಹರಣೆಗಳಲ್ಲಿ ಅದು ದೊರೆಯುವದೋ ಇಲ್ಲವೋ ಎಂಬುದನ್ನು ಕೂಡ ನೋಡ

ಕೂಡದು. ನಿರೀಕ್ಷಣ ಹೊರಡುವ ಸಾಮಾನ್ಯ ನಿಯಮಗಳನ್ನಷ್ಟೇ ತೆಗೆಯುವದೇ ಈ ಪದ್ಧತಿಯು. ಆದರೆ ಇದೂ ಒಂದು ತುದಿಯು. ಮಧ್ಯಯುಗ ಪಂಡಿತರು ಒಂದು ತುದಿಗೆ ಹೋಗಿದ್ದರೆ, ಬೇಕನ್ನನು ಇನ್ನೊಂದು ತುದಿಗೆ ಬಂದಿದ್ದಾನೆ. ಆದರೆ, ಸಾಮಾನ್ಯ ಸಿದ್ಧಾಂತಗಳನ್ನು ಕಟ್ಟುವಾಗ ಕೂಡ ಸಂಶೋಧಕರಿಗೆ ಕಲ್ಪನೆಯ ಸಹಾಯವೂ ಬೇಕೆಂಬುದನ್ನು ಮರೆಯಲಾಗದು.

ನಾವು ಗ್ಯಾಲಿಲಿಯೋನ ಉದಾಹರಣೆಯನ್ನೇ ತೆಗೆದುಕೊಂಡರೆ, ೧. ಚಂದ್ರನ ಪೃಷ್ಠಭಾಗವು ಹುರುಕುಬರಕಾಗಿದೆ. ೨. ಆಕಾಶಗಂಗೆಯು ನಕ್ಷತ್ರಗಳಿಂದ ತುಂಬಿದೆ. ೩. ಗುರುವಿನ ಸುತ್ತಲೂ ಅನೇಕ ಚಂದ್ರಗಳು ತಿರುಗುತ್ತವೆ. ಶನಿಯ ಸುತ್ತಲೂ ಕಂಕಣಾಕೃತಿಯ ವಲಯಗಳಿವೆ. ಮೊದಲಾದ ಸಂಗತಿಗಳನ್ನು ದುರ್ಬಿಣಿಯ ಸಹಾಯದಿಂದ ನಿರೀಕ್ಷಿಸಿ ಹುಡುಕಿತೆಗೆದನು. ಇದರಲ್ಲಿ ಅನುಮಾನದ ಸಂಬಂಧವೇನೂ ಇಲ್ಲ. ಆದರೆ ದುರ್ಬಿಣಿಯಲ್ಲಿ ಸೂರ್ಯನ ಮೇಲಿನ ಒಂದು ಕಪ್ಪುಕಲೆಯು ಎಡದಿಂದ ಬಲಕ್ಕೆ ಹೋಗುವದನ್ನು ಕಂಡು ಸೂರ್ಯನು ತನ್ನ ಸುತ್ತಲೂ ತಿರುಗುತ್ತಾನೆ ಎಂಬ ಅನುಮಾನವನ್ನು ತೆಗೆದನು. ಇದರಲ್ಲಿ ಅವನಿಗೆ ಕಲ್ಪನಾಶಕ್ತಿಯ ಸಹಾಯವೇ ಹೆಚ್ಚು ಎಂಬುದು ಮೇಲೆಯೇ ಕಾಣುತ್ತದೆ. ಮುಂದೆ ದೃಷ್ಟಿಮಂದವಾದ ನಂತರ ಜ್ಯೋತಿಷಬಿಟ್ಟು ಪದಾರ್ಥವಿಜ್ಞಾನವನ್ನು ಅಭ್ಯಾಸಮಾಡಿ ಪದಾರ್ಥಗತಿಗಳ ವಿಷಯವಾಗಿ ಮಹತ್ವದ ಶೋಧಮಾಡಿದನು. ಎಲ್ಲ ಪದಾರ್ಥಗಳು ಕೆಳಗೆ ಬೀಳುವ ವೇಗವು ಒಂದೇ ಇರುತ್ತದೆ ಎಂಬುದನ್ನು ಮೊದಲೇ ಶೋಧಮಾಡಿದ್ದನು. ಮುಂದೆ ಈ ಬೀಳುವ ವೇಗವು ಹೆಚ್ಚಾಗುತ್ತ ಹೋಗುತ್ತದೆಂದು ಸಿದ್ಧಮಾಡಿದನು. ಆದರೆ ಈ ವೇಗದ ಪ್ರಮಾಣವನ್ನು ಗೊತ್ತುಹಚ್ಚಲು ಅನೇಕ ಪ್ರಯೋಗಗಳನ್ನು ಮಾಡಿದನು. ಮೊದಲು ಈ ಪತನದ ವೇಗವು ಆಕ್ರಮಣಮಾಡಿದ ಅಂತರವನ್ನು ಅವಲಂಬಿಸಿರುವದೆಂದು ಗೃಹೀತ ಹಿಡಿದು ಗಣಿತಮಾಡಿದನು. ಅದು ಹೊಂದಲಿಲ್ಲ. ಕೊನೆಗೆ ಅವನು ಪತನದ ವೇಳೆಗೂ ವೇಗವೃದ್ಧಿಗೂ ಪ್ರಮಾಣವಿರುವದೇ ಎಂದು ವಿಚಾರಮಾಡಿದನು. ಇದರಲ್ಲಿ ಅವನಿಗೆ ಯಶ ದೊರೆತು, “ಪದಾರ್ಥಗಳ ಪತನಕ್ಕೆ ಬೇಕಾಗುವ ವೇಳೆಯ

ವರ್ಗವೂ ವೇಗವೃದ್ಧಿಯೂ ಸಮಪ್ರಮಾಣದಲ್ಲಿವೆ' ಎಂದು ಸಿದ್ಧಾಂತ ಮಾಡಿದನು. ಈ ಕಾರ್ಯದಲ್ಲಿ ಕೇವಲ ನಿರೀಕ್ಷಣವು ಉಪಯೋಗಬೀಳ ಲಿಲ್ಲ;ಕಲ್ಪನೆಗಳೇ ಇದರಲ್ಲಿ ಸಹಾಯವಾದವು. ನ್ಯೂಟನ್ನನ ಸಂಗತಿಯೂ ಹೀಗೆಯೇ ಇದೆ. ಗ್ಯಾಲಿಲಿಯೋನ ಗತಿಸಂಬಂಧವಾದ ಮೂರೂ ಸಿದ್ಧಾಂತಗಳೂ, ಗ್ರಹಗಳು ಸೂರ್ಯನ ಸುತ್ತಲೂ ಲಂಬವರ್ತುಲಾಕಾರ ವಾಗಿ ತಿರುಗುತ್ತವೆಂಬ ಕೆಪ್ಲರನ ಸಿದ್ಧಾಂತವೂ ಅವನಿಗೆ ಗೊತ್ತಿ ದ್ದವು. ಇವುಗಳ ಮೇಲಿಂದ ಗ್ರಹಗಳು ಸೂರ್ಯನ ಕಡೆಗೆ ಆಕರ್ಷಿಸ ಲ್ಪಡುತ್ತವೆ. ಈ ಆಕರ್ಷಣ ಶಕ್ತಿಯು ಗ್ರಹ ಹಾಗು ಸೂರ್ಯನ ನಡು ವಿರುವ ಅಂತರದ ವರ್ಗದ ವ್ಯಸ್ತ ಪ್ರಮಾಣದಲ್ಲಿರುತ್ತದೆ ಎಂಬ ಸಿದ್ಧಾಂ ತವನ್ನು ತೆಗೆದನು. ಇದು ಕೇವಲ ಅನುಮಾನದಿಂದಲೇ ಹೊಳೆಯಿತು ಎಂದು ತಿಳಿಯಕೂಡದು. ಇದಕ್ಕಿಂತಲೂ ಮುಂದೆ ಹೋಗಿ 'ವಿಶ್ವ ದಲ್ಲಿಯ ಎಲ್ಲ ಪದಾರ್ಥಗಳು ಅವುಗಳಲ್ಲಿರುವ, ಅಂತರದ ವರ್ಗದ ವ್ಯಸ್ತ ಪ್ರಮಾಣದಲ್ಲಿಯೂ ಹಾಗು ಭಾರದ ಸಮಪ್ರಮಾಣದಲ್ಲಿಯೂ ತಮ್ಮ ತಮ್ಮ ಕಡೆಗೆ ಆಕರ್ಷಿಸಲ್ಪಡುತ್ತವೆ' ಎಂಬ 'ವಿಶ್ವವ್ಯಾಪಿಯಾದ ಗುರು ತ್ವಾಕರ್ಷಣದ ಸಿದ್ಧಾಂತವನ್ನು ಕಟ್ಟಿದನು. ಅವನು ಅನೇಕ ಉದಾ ಹರಣೆಗಳಿಂದ ಸಾಮಾನ್ಯ ನಿಯಮವನ್ನು ತೆಗೆದು ಇದನ್ನು ಸಿದ್ಧಮಾಡ ಲಿಲ್ಲ; ಗ್ರಹಗಳ ಗತಿ ಹಾಗು ಪೃಥ್ವಿಯ ಮೇಲೆ ಬೀಳುವ ವಸ್ತುಗಳನ್ನು ನೋಡಿದ್ದನು. ಆದರೆ ಅದರ ಮೇಲೆ ಒಂದೇ ಸವನೆ ವಿಚಾರಮಾಡು ವಾಗ ಅವನ ಪ್ರತಿಭೆಯು ಒಮ್ಮೆಲೆ ಮೇಲಕ್ಕೆ ಹಾರಿತು. ಅದೇ ಈ ವಿಶ್ವವ್ಯಾಪಕ ಸಿದ್ಧಾಂತವು.

ಕೇವಲ ನಿರೀಕ್ಷಣದಿಂದ ಸಾಮಾನ್ಯ ನಿಯಮವನ್ನು ತೆಗೆಯುವ ದಷ್ಟೇ ಪ್ರಕ್ರಿಯೆಯು ಗೂಢ ಹಾಗೂ ಗಹನ ಶಾಸ್ತ್ರೀಯ ಶೋಧಗಳಿಗೆ ಪೂರೈಸುವದಿಲ್ಲೆಂಬುದೇ ಇದರಿಂದ ವ್ಯಕ್ತವಾಗುತ್ತದೆ. ಹುಟ್ಟಿದವ ರೆಲ್ಲರೂ ಸಾಯುವರು. ಉಷ್ಣತೆಯಿಂದ ಪದಾರ್ಥಗಳು ಪ್ರಸರಣ ಹೊಂದುತ್ತವೆ ಮೊದಲಾದ ಸಹಜವಾಗಿ ಹೊಳೆಯುವ ನಿಯಮುಗಳನ್ನು ತೆಗೆಯಲು ಸಾಧ್ಯವಿದೆ. ಆದರೆ, ಅತ್ಯಂತ ಗಹನ ವಿಷಯಗಳನ್ನು

ಶೋಧಿಸುವಾಗ, ಬಹಳ ವಿಚಾರ ಮಾಡಿ ಸಂಭವನೀಯ ಒಂದು ಅಥವಾ ಅನೇಕ ಕಲ್ಪಿತ ಪಕ್ಷಗಳನ್ನು ತಾತ್ಪೂರ್ತಿಕವಾಗಿ ಗೃಹೀತ ಹಿಡಿಯಬೇಕಾಗುತ್ತದೆ. ಕಲ್ಪಿತ ಬುದ್ಧಿಯ ಅಥವಾ ಪ್ರತಿಭಾವಂತ ಪುರುಷರು ತಮ್ಮ ಕಲ್ಪನಾಶಕ್ತಿಯಿಂದ ಸತ್ಯಸಿದ್ಧಾಂತಗಳನ್ನು ಕೂಡಲೆ ಕಂಡುಹಿಡಿಯುವರು. ಪ್ರಶ್ನೆಗಳನ್ನು ಬಿಡಿಸುವರು. ಸಹಸಾ ಅವರ ಕಲ್ಪನೆಯು ತಪ್ಪುವದಿಲ್ಲ. ಯಾರಿಗೆ ಇಂತಹ ಕಲ್ಪಕತೆ ಇಲ್ಲವೋ ಅಂಥವರು ಇಂತಹ ಉಸಾಬರಿಯನ್ನೇ ಮಾಡುವದಿಲ್ಲ. ಒಟ್ಟಿನಲ್ಲಿ ಬೇಕನ್ನನ ಪದ್ಧತಿಯು ಸರ್ವಸಾಧಾರಣವಾಗಿ ಶಾಸ್ತ್ರರಚನೆಗೆ ಉಪಯೋಗವು. ಪ್ರತಿಭಾವಂತ ಶಾಸ್ತ್ರಜ್ಞರಿಗೆ ಈ ವಿಷಯದಲ್ಲಿ ಅವರ ಪ್ರತಿಭೆಯು ನೆರವಾಗುವದು. ಆದರೆ ಇದು ಸಾರ್ವತ್ರಿಕ ಮಾರ್ಗವಲ್ಲ. ನಿಜವಾದ ಶಾಸ್ತ್ರೀಯ ಪದ್ಧತಿಯು ನಿರೀಕ್ಷಣ (observation) ಹಾಗೂ ನಿರ್ಗಮನ (induction) ಮಾರ್ಗದಿಂದಲೇ ಸಾಗಬೇಕು. ಇದೇ ರಾಜಮಾರ್ಗವು.

ನಿಗಮನ ಪದ್ಧತಿಯು ಕೆಲವೆಡೆಯಲ್ಲಿ ಮಾತ್ರ ಉಪಯೋಗವಾದುದು ಕಂಡುಬರುತ್ತದೆ. ಇದರ ಮಹತ್ವದ ಉದಾಹರಣೆಯೆಂದು ನೆಪಚೂನ (ವರುಣ) ಗ್ರಹದ ಶೋಧವು ಹೇಳಲ್ಪಡುತ್ತದೆ. ಹರ್ಶಲನು ಪ್ರಜಾಪತಿ. (Uranus) ಗ್ರಹವನ್ನು ೧೭೮೧ರಲ್ಲಿ ಗೊತ್ತುಹಚ್ಚಿದನು. ಅದರ ಗತಿಯ ವೇಧವನ್ನು ತೆಗೆದುಕೊಳ್ಳುವಾಗ ಗುರುತ್ವಾಕರ್ಷಣದ ನಿಯಮದಲ್ಲಿ ಹೆಚ್ಚು ಕಡಿಮೆಯಾಗಹತ್ತಿತು. ಇದು ಆಡಾಮ್ಸ ಮತ್ತು ಲೆವ್ಹೆರಿಯರರ ಲಕ್ಷ್ಯದಲ್ಲಿ ಬಂದಿತು. ಆಗ ಅವರು ಇನ್ನೊಂದು ಗ್ರಹದ ಆಕರ್ಷಣ ಶಕ್ತಿಯು ಇದರ ಮೇಲೆ ನಡೆಯುತ್ತಿರಬೇಕೆಂದು ಅನುಮಾನ ತೆಗೆದರು. ಮತ್ತು ಆ ಅಜ್ಞಾತ ಗ್ರಹವು ಆ ಸಮಯಕ್ಕೆ ಎಲ್ಲಿರುವದೆಂಬುದನ್ನೂ ಗೊತ್ತುಹಚ್ಚಿದರು (೧೮೪೬). ಹೀಗೆ ಕೇವಲ ಅನುಮಾನದಿಂದ ಗೊತ್ತುಹಚ್ಚಿದ ಗ್ರಹವನ್ನು ದುರ್ಬಿಣಿಯಿಂದ ಆ ಸ್ಥಳದಲ್ಲಿ ನೋಡಲು ಅದು ಕಂಡಿತು. ಈ ಶೋಧದಲ್ಲಿ ನಡೆದ ಬುದ್ಧಿಯ ವ್ಯಾಪಾರವು ಕೇವಲ ನಿಗಮನ ಪದ್ಧತಿಯಿಂದ ಎಂದು ಹೇಳಬಹುದು. ಆದರೆ ಇಂತಹ ಉದಾಹರಣೆಗಳು ಕಡಿಮೆ. ಯಾವ ಸಾಮಾನ್ಯ ನಿಯಮ

ಗಳಿಂದ ನಿಗಮನವನ್ನು ತೆಗೆಯುವರೋ ಅದು ಶುದ್ಧವೂ ನಿರ್ದುಷ್ಟವೂ ಇರಬೇಕಾಗುವದು. ಆದರೆ ಸೃಷ್ಟಿಯ ವ್ಯಾಪಾರವು ಅತ್ಯಂತ ತೊಡ ಕಿನದಿದ್ದು ಅದರ ಅಂತವು ಯಾರಿಗೂ ಹತ್ತಿಲ್ಲ. ನಾವು ಅಂಥ ಸೃಷ್ಟಿಯ ವಿಷಯವಾಗಿ ತೆಗೆದ ಅನುಮಾನವು ಸರಿಯೆಂದು ಯಾರು ಧೈರ್ಯದಿಂದ ಹೇಳಬಲ್ಲರು!

ಆದುದರಿಂದಲೇ ಪ್ರತಿಯೊಂದು ಅನುಮಾನದ ತಾಳೆನೋಡ ಬೇಕು ಎಂದು ಶಾಸ್ತ್ರಜ್ಞರ ಕಠಿಣ ನಿಯಮವಿದೆ. ಈ ತಾಳೆಗೆ ಸರಿಬಂದ ಶೋಧವು ಮಾತ್ರ ನಿಲ್ಲುವದು. ಈ ಪರೀಕ್ಷೆಯಲ್ಲಿ ಉತ್ತೀರ್ಣವಾಗದ ಎಷ್ಟೋ ಶೋಧಗಳೂ ಅವುಗಳ ಶ್ರಮಗಳೂ ವ್ಯರ್ಥವಾಗುವವು. ಅನೇಕ ಶಾಸ್ತ್ರಜ್ಞರು ಹೊಸ ಶೋಧವನ್ನು ತೀಕ್ಷ್ಣ ರೀತಿಯಿಂದ ಒರೆಹಚ್ಚಲು ಸಿದ್ಧರಾಗಿರುತ್ತಾರೆ. ಅವರ ಪರೀಕ್ಷೆಯಲ್ಲಿ ಅದು ಉತ್ತೀರ್ಣವಾದರೆ, ಅದು ಶಾಸ್ತ್ರದಲ್ಲಿ ಸಮಾವೇಶವಾಗುವದು. ಇಲ್ಲದಿದ್ದರೆ ಅದಕ್ಕೆ ಅರ್ಧ ಚಂದ್ರ. ಈ ತಾಳೆ ನೋಡುವ, ಒರೆಹಚ್ಚುವ ಕ್ರಿಯೆಗೆ ಕೆಲವರು ಸ್ವತಂತ್ರ ಶಾಸ್ತ್ರೀಯ ಪದ್ಧತಿ (Verificatory method) ಎಂದು ತಿಳಿದಿದ್ದಾರೆ. ಆದರೆ ಇದೊಂದು ಸ್ವತಂತ್ರ ಪದ್ಧತಿಯಿರದೆ, ಎಲ್ಲ ನಿಯಮಗಳ ತಾಳೆ ನೋಡುವ ಒಂದು ರೀತಿಯು. ಇದಕ್ಕೆ ಪರೀಕ್ಷಿಸುವ ಪರೀಕ್ಷಾಮಂಡಳ ವೆಂದೂ ಹೇಳಬಹುದು.

ಭೌತಿಕ ಶಾಸ್ತ್ರದಲ್ಲಿಯ ಅನೇಕ ಸಿದ್ಧಾಂತಗಳು ಗಣಿತಶಾಸ್ತ್ರದಂತೆ ನಿಶ್ಚಿತ ಹಾಗು ನಿಶ್ಶಂಕವಿರುವದರಿಂದ ಅವುಗಳ ವಿಷಯದಲ್ಲಿ ಕೆಲವೆಡೆ ನಿಗಮನಪದ್ಧತಿಯು ನಡೆಯುವದು. ಆದರೆ ಈ ನಿಗಮನ ಪದ್ಧತಿಯು ಸಾಮಾಜಿಕಶಾಸ್ತ್ರದಲ್ಲಿ ಉಪಯೋಗ ಬೀಳುವದಿಲ್ಲ. ನಿರೀಕ್ಷಣದಿಂದಲೇ ನಿಯಮಗಳನ್ನು ಕಟ್ಟಬೇಕಾಗುತ್ತದೆ. ಮೊದಮೊದಲು ಈ ಸಂಗತಿಯು ಶಾಸ್ತ್ರಜ್ಞರ ಲಕ್ಷ್ಯಕ್ಕೆ ಬರಲಿಲ್ಲ. ಗ್ರೀಕಶಾಸ್ತ್ರಜ್ಞರು ತಪ್ಪುಮಾಡಿ ದಂತೆ ಆಡ್ಯಾಮಸ್ಮಿಥ, ಬೆಂಥ್ಯಾಮ ಮೊದಲಾದವರು ಅರ್ಥಶಾಸ್ತ್ರದಲ್ಲಿ ಕೆಲವೆಡೆಯಲ್ಲಿ ಜಾರಿದ್ದಾರೆ. 'ಪ್ರತಿಯೊಬ್ಬನು ತನ್ನ ಹಿತವನ್ನು ಇತರ ರಿಗಿಂತ ಚೆನ್ನಾಗಿ ತಿಳಿಯುತ್ತಾನೆ.' 'ಪ್ರತಿಯೊಬ್ಬರ ದೃಷ್ಟಿಯು ತಮ್ಮ ಲಾಭದ ಕಡೆಗೇ ಇರುತ್ತದೆ' ಎಂದು ಮಾನವಸ್ವಭಾವಧರ್ಮವನ್ನು

ಗೃಹೀತಹಿಡಿದು, ಕೆಲವು ಅನುಮಾನಗಳನ್ನು ತೆಗೆದರು. ಅಪ್ರತಿಬಂಧ ವ್ಯಾಪಾರವು ಇರಬೇಕು ಎಂಬುದು ಅವುಗಳಲ್ಲೊಂದು. ಆ ಕಾಲದ ಇಂಗ್ಲಂಡದ ಪರಿಸ್ಥಿತಿಗೆ ಅದು ಸರಿಹೋದದ್ದರಿಂದ ಆ ತತ್ವವು ಅಲ್ಲಿ ಒಳ್ಳೇ ಯಶಸ್ವಿಯಾಯಿತು. ಅದರಿಂದಲೇ ಇಂಗ್ಲಂಡವು ಸಧನವಾಯಿತು. ಆದುದರಿಂದ ಈ ತತ್ವವು ಎಲ್ಲ ಕಡೆಗೂ ಅನ್ವಯಿಸುವದು ಎಂದು ಪ್ರತಿಪಾದಿಸಹತ್ತಿದರು. ಆದರೆ ಮುಂದೆ ೧೯ನೇ ಶತಮಾನದಲ್ಲಿ ಜರ್ಮನ ಅಮೇರಿಕಾ ರಾಷ್ಟ್ರಗಳು ಸಂರಕ್ಷಿತ ವ್ಯಾಪಾರಪದ್ಧತಿಯಿಂದ ಧನಸಂಪನ್ನವಾಗಿ ಇಂಗ್ಲಂಡಕ್ಕಿಂತಲೂ ಮುಂದುವರಿಯಲು ಇಂಗ್ಲಂಡದ ಕಣ್ಣುಗಳು ತೆರೆದವು. ಕೂಡಲೆ ಅರ್ಥಶಾಸ್ತ್ರದ ಪುನರ್ವಿಚಾರಕ್ಕೆ ಪ್ರಾರಂಭವಾಯಿತು. ಸಂರಕ್ಷಕ ವ್ಯಾಪಾರವನ್ನೇ ಅನ್ವಯಿಸಿಕೊಳ್ಳಬೇಕಾಯಿತು.

ಈ ಎಲ್ಲ ಅನರ್ಥಕ್ಕೂ ಆಡಾಮ್ಸ್ಮಿಥನ ಅನೇಕ ತತ್ವಗಳು ಮನಃಕಲ್ಪಿತವಿದ್ದುದೇ ಕಾರಣ. ಅವನು ಮಾನವ ಸ್ವಭಾವ, ವ್ಯವಹಾರ ಪೂರ್ವಸಂಸ್ಕಾರ, ಸಾಮಾಜಿಕ ಪರಿಸ್ಥಿತಿಗಳನ್ನು ಅವಲೋಕಿಸಿ ನಿಶ್ಚಯಿಸಿದಂಥವುಗಳಲ್ಲಿ, ಸಮಾಜಶಾಸ್ತ್ರರಚನೆಯಲ್ಲಿಯ ನಿರೀಕ್ಷಣವು ಅತ್ಯಂತ ಮಹತ್ವವಾದುದಿದೆ. ವಿಗಮನವು ಏನೂ ಉಪಯೋಗದ್ದಲ್ಲ. ಭಾರತದಲ್ಲಿ ಸಮಾಜಶಾಸ್ತ್ರದ ಅಭ್ಯಾಸವು ಪ್ರಾರಂಭವಾಗಿದ್ದು ಅದು ಯೋಗ್ಯ ದಿಶೆಯಿಂದಲೂ ಭದ್ರವಾದ ತಳಹದಿಯ ಮೇಲೆಯೂ ಆಗುವದು ಅವಶ್ಯವಿದೆ. ಹಿಂದಕ್ಕೆ ನಾವು ಭೌತಿಕಶಾಸ್ತ್ರದ ವಿಷಯವಾಗಿ ಹೇಳಿದಂತೆ, ಅತ್ಯಂತ ಗಹನವಿಷಯಗಳನ್ನು ಮಂಡಿಸುವ ಪ್ರಸಂಗವಿದ್ದಾಗ ಪ್ರತಿಭೆಯ ಕಲ್ಪಕತೆಯ ಉಪಯೋಗವನ್ನು ಕಲ್ಪಕಗೃಹೀತಗಳನ್ನು ಹಿಡಿಯಬಹುದು. ಆದರೆ ಅವುಗಳನ್ನು ಒರೆಹಚ್ಚಿ ಪರೀಕ್ಷಿಸಿರಬೇಕು.

ಶಾಸ್ತ್ರದ ಪದ್ಧತಿಯನ್ನು ಶಕ್ಯವಿದ್ದಷ್ಟು ಸುಲಭರೀತಿಯಿಂದ ತಿಳಿಸಲು ಯತ್ನಿಸಿತು. ಅದರ ಸಂಕ್ಷಿಪ್ತ ಸ್ವರೂಪವು ಹೀಗಿದೆ:—

‘ ಶಾಸ್ತ್ರದ ತಳಹದಿಯು ಇಂದ್ರಿಯಜನ್ಯ ಅನುಭವಗಳು, ಮತ್ತು ಅನುಭವಗಳಿಗೆ ಸಾಧನವು ಅವಲೋಕನವು. ಅವಲೋಕನದಲ್ಲಿ ಎರಡು ರೀತಿಗಳಿವೆ:—ನಿರೀಕ್ಷಣ ಹಾಗು ಪ್ರಯೋಗ. ಈ ನಿರೀಕ್ಷಣವನ್ನು ವ್ಯವಸ್ಥಿತ ರೀತಿಯಿಂದ ನಿರೀಕ್ಷಿಸುವ ವಸ್ತುವಿನ ಅವಶ್ಯಕತೆಯಂತೆ, ಪೃಥಕ್ಕರಣ

ಅಥವಾ ಸಂಕಲನ ಮಾಡಬೇಕಾಗುತ್ತದೆ. ವ್ಯವಸ್ಥಿತ ನಿರೀಕ್ಷಣದಿಂದ ಸಂಗ್ರಹಿಸಿದ ಸಂಗತಿಗಳಿಂದ ಅನುಮಾನ ನಿಯಮಗಳನ್ನು ಕಟ್ಟುವದಿರುತ್ತದೆ. ಅನೇಕ ಉದಾಹರಣೆಗಳಿಂದ ಸಾಮಾನ್ಯ ನಿಯಮವನ್ನು ತೆಗೆಯುವ ಅನುಮಾನಪದ್ಧತಿಗೆ ನಿರ್ಗಮನವೆನ್ನುತ್ತಾರೆ. ಭೌತಿಕ ಹಾಗು ಸಾಮಾಜಿಕಶಾಸ್ತ್ರದಲ್ಲಿ ಹೆಚ್ಚಾಗಿ ಈ ಪದ್ಧತಿಯು ಉಪಯೋಗವಾಗುಗುತ್ತದೆ. ಪ್ರಶ್ನೆಯು ಗಹನವಿದ್ದರೆ, ಕಲ್ಪಕತೆಯು ಬಲದಿಂದ ಕಲ್ಪಿತಪಕ್ಷವನ್ನು ಆಧಾರಕ್ಕಾಗಿ ತೆಗೆದುಕೊಳ್ಳಬೇಕಾಗುತ್ತದೆ. ಸಾಮಾನ್ಯ ನಿಯಮಗಳ ಆಧಾರದಿಂದ ವಿಶಿಷ್ಟ ನಿಯಮವನ್ನು ತೆಗೆಯುವ ಅನುಮಾನಕ್ಕೆ ನಿಗಮನವೆನ್ನುವರು. ಭೌತಿಕಶಾಸ್ತ್ರದಲ್ಲಿ ಇದರ ಉಪಯೋಗವು ಕ್ವಚಿತ್ತಾಗಿ ಆಗುತ್ತದೆ. ಆದರೆ ಗಣಿತಶಾಸ್ತ್ರದಲ್ಲಿ ಮಾತ್ರ ಇದರ ಉಪಯೋಗವು ಹೆಚ್ಚಾಗಿ ಆಗುತ್ತದೆ. ನಿರ್ಗಮನ ಹಾಗು ನಿಗಮನ ಅನುಮಾನಗಳಿಂದ ತೆಗೆದ ಸಿದ್ಧಾಂತಗಳನ್ನು ಚೆನ್ನಾಗಿ ಒರೆಗೆಹಚ್ಚಿ, ತಾಳೆನೋಡಬೇಕು. ಅವುಗಳ ತಾಳೆಯು ಸರಿಯಾಗಿ ಬಂದರೆ ಮಾತ್ರ ಅವನ್ನು ಶಾಸ್ತ್ರವೆಂದು ಹೇಳಬೇಕು.

ನಿರ್ಗಮನ ಹಾಗು ನಿಗಮನಗಳ ಸಂಯೋಗಗಳಿಂದ ಉಂಟಾಗುವ ಅನೇಕ ಪ್ರಕಾರಗಳನ್ನು ಶಾಸ್ತ್ರಜ್ಞರು ಹೇಳಿದ್ದಾರೆ. ತರ್ಕಶಾಸ್ತ್ರ ಹಾಗು ಬೋಧನಶಾಸ್ತ್ರಗಳು ಈ ವಿಷಯವಾಗಿಯೇ ಇವೆ. ಹಾಗೆಯೇ ಬೆಳೆಸುತ್ತ ಹೋಗುವದರಲ್ಲಿ ಅರ್ಥವಿಲ್ಲ. ಅದನ್ನು ಇಲ್ಲಿಗೆ ಮುಗಿಸುತ್ತೇವೆ.

ಈ ಶಾಸ್ತ್ರದ ಅಭ್ಯಾಸವನ್ನು ಮಾಡಲು ಪಾತ್ರತೆ ಯಾರಿಗೆ ಇದೆ, ಎಂಬುದನ್ನಷ್ಟು ವಿಚಾರಮಾಡೋಣ. ಜಿಜ್ಞಾಸು ಧೀರನಿರಬೇಕು. ಸತತವಾಗಿ ಹತ್ತಿಕೊಂಡು ಜೀಳುವ ಸ್ವಭಾವವು ಅವಶ್ಯವಿದೆ. ಯಾಕಂದರೆ, ಭೌತಿಕಶಾಸ್ತ್ರವೇ ಆಗಲಿ ಸಾಮಾಜಿಕಶಾಸ್ತ್ರವೇ ಆಗಲಿ ಅತ್ಯಂತ ಗೂಢ ಹಾಗು ತೊಡಕಿನದಿರುವದರಿಂದ ಬೇಗನೆ ಫಲದೊರೆಯುವದೆಂಬ ಆಶೆಯು ಇರುವದಿಲ್ಲ. ಅದರಂತೆಯೆ ಅವನು ತನುಮನಧನಗಳನ್ನೆಲ್ಲ ಅರ್ಪಿಸಬೇಕಾಗುವದು. ಅಲ್ಲದೆ ಶೋಧನೆಯ ಕಾಲಕ್ಕೆ ಬರುವ ಎಲ್ಲ ಗಂಡಾಂತರಗಳನ್ನು ಎದುರಿಸಬೇಕಾಗುವದು. ಕೆಪ್ಲೆರ, ಗ್ಯಾಲಿಲಿಯೋ ಮೊದಲಾದವರು ಸಮಾಜದ ವಿರುದ್ಧವಾದ ಸಿದ್ಧಾಂತ

ಗಳನ್ನು ಮುಂಡಿಸಬೇಕಾದ ಪ್ರಸಂಗಬಂದಿತು. ಧೈರ್ಯದಿಂದ ಮುಂದಿಟ್ಟರು. ಎಷ್ಟೋ ಜನರು ಶಿಕ್ಷೆಗೆ ಗುರಿಯಾಗಿರುವರು. ಜನರು ಏನನ್ನುವರೋ ಎಂಬುದನ್ನು ನೋಡದೆ ಕಾರ್ಯಮಾಡಬೇಕಾಗುವದು. ಅದರಂತೆಯೇ ಜಿಜ್ಞಾಸು ಕೀಳು, ಹೊಲಸು, ಗಂಡಾಂತರ ಮೊದಲಾದ ಯಾವ ಭಾವನೆಗಳಿಗೂ ಬಲಿಬೀಳದೆ ಧೈರ್ಯದಿಂದ ಮುಂದರಿಯಬೇಕಾಗುವದು. ಯಾಕಂದರೆ ಪ್ರಾಣಿಶಾಸ್ತ್ರಜ್ಞರು ಹೊಲಸಿನಲ್ಲಿರುವ ಪ್ರಾಣಿಗಳ ವಿಷಯವನ್ನು ಕೂಡ ತಿಳಿದುಕೊಳ್ಳಬೇಕಾಗುವದು. ಹೆಣಗಳನ್ನು ಕೊಯ್ಯಬೇಕಾಗುವದು. ಅದರಂತೆ ನೀತಿಶಾಸ್ತ್ರಜ್ಞರು ಸೂಳೆಗೇರಿಯ ವಿಷಯವಾಗಿಯೂ ತಿಳಿದುಕೊಳ್ಳಬೇಕಾಗುವದು.ಕೈಕೆಸರಾದರೆ ಬಾಯಿ ಮೊಸರಿಯಾಗುವದು ಎಂಬ ಧೈರ್ಯದಿಂದ ಮುಂದೆ ಸಾಗಬೇಕಾಗುವದು. ಅದರಂತೆಯೇ ಜಿಜ್ಞಾಸು ತನ್ನ ಮನಸ್ಸನ್ನು ನಿರ್ವಿಕಾರ ಹಾಗು ಪೂರ್ವಗ್ರಹಗಳಿಂದ ಪೂರ್ಣವಾಗಿ ಅಲಿಪ್ತವಿಡಬೇಕು. ' ಸತ್ಯವೇ ಧರ್ಮವು. ಅದೇ ದೇವರು ' ಎಂಬ ಪವಿತ್ರ ಭಾವನೆಯಿಂದ ಕಾರ್ಯೋನ್ಮುಖರಾಗಬೇಕು. ನಿರ್ಮಲ ಬುದ್ಧಿಯಿಂದ ಅವಲೋಕಿಸುವಾಗ ಏನು ದೊರೆಯುವದೋ ದೊರೆಯುಲಿ. ಅದರಲ್ಲಿ ಮಾತ್ರ ತಮ್ಮ ಕೈವಾಡವನ್ನು ನಡೆಯಿಸಕೂಡದು. ತಮಗೆ ತಿಳಿಯದೆ ತಮ್ಮ ಬುದ್ಧಿಯ ಆಟವೇನಾದರೂ ನಡೆದಿದೆಯೋ ಎಂಬದನ್ನು ಕೂಡ ಅತ್ಯಂತ ಎಚ್ಚರಿಕೆಯಿಂದ ನಿರೀಕ್ಷಿಸಬೇಕು. ಸತ್ಯದ ಶೋಧವೇ ಅವನ ಧ್ಯೇಯವು. ಸತ್ಯಶೋಧನೆಯ ಕಾರ್ಯದಲ್ಲಿ ಮಾನವನ ಬುದ್ಧಿಯೇ ಸಾಧನವು. ಅದೇ ಶಾಸ್ತ್ರದ ಕ್ಷೇತ್ರದಲ್ಲಿ ಮುಖ್ಯ ದೇವತೆಯು. ಪ್ರತ್ಯಕ್ಷ ವಸ್ತುಗಳ ಜ್ಞಾನವನ್ನು ಇಂದ್ರಿಯಗಳ ಮುಖಾಂತರ ದೊರಕಿಸಿ, ಬುದ್ಧಿಯ ಯೋಗದಿಂದ ಶೋಧಗಳನ್ನು ಮಾಡುವದೇ ಶಾಸ್ತ್ರದ ಕಾರ್ಯವು. ಮಾನವ ಬುದ್ಧಿಯು ದುರ್ಬಲವಿದೆಯೆಂಬುದನ್ನು ಎಲ್ಲರೂ ಬಲ್ಲರು. ಅದನ್ನು ಹಾಗೆಯೇ ಮುಂದೆ ನಡೆಯಿಸಬೇಕು. ಆದರೆ ಅದಕ್ಕೆ ಶಬ್ದಪ್ರಮಾಣ ಅಥವಾ ಆಪ್ತವಾಕ್ಯದ ನೆರವನ್ನಿತ್ತರೆ ಮತ್ತಿಷ್ಟು ಮಂದವಾಗುತ್ತದೆ. ಆದುದರಿಂದ ಇತರ ಪ್ರಮಾಣಗಳ ಮೇಲೆ ಕೈ ಊರದೆ ಬುದ್ಧಿಯಿಂದಲೇ ಮುಂದೆ ಸಾಗಬೇಕು. ಶಬ್ದಪ್ರಮಾಣ ಹಾಗು ಆಪ್ತವಾಕ್ಯಗಳು ಆತ್ಮಾನಾತ್ಮವಿಚಾರದಲ್ಲಿ ಉಪ

ಯೋಗವಿರಬಹುದು. ಮಹಾಪುರುಷರ ವಾಕ್ಯದ ಮೇಲೆ ವಿಶ್ವಾಸವನ್ನೂ ಇಡಬಹುದು. ಆದರೆ ಯಾವ ಜ್ಞಾನಕ್ಷೇತ್ರದಲ್ಲಿ ಶ್ರದ್ಧೆಗಿಂತಲೂ ಬುದ್ಧಿಯು ಗುಟ್ಟನ್ನು ಚೆನ್ನಾಗಿ ತಿಳಿಯುವದೋ ಆ ಕ್ಷೇತ್ರದಲ್ಲಿ ಶ್ರದ್ಧೆಯು ಹಾಗೂ ಆಪ್ತವಾಕ್ಯಗಳ ಆಟವನ್ನು ನಡೆಯಗೊಡುವದು ಅನುಚಿತವು. ಪ್ರಾಚೀನ ಕಾಲದಲ್ಲಿ ಶ್ರದ್ಧೆಯ ಕ್ಷೇತ್ರವು ಬಹು ವಿಸ್ತೃತವಿದ್ದಿತು. ಭೌತಿಕ ಸೃಷ್ಟಿಯ ವಿಷಯವಾಗಿ ಅವರ ಕಲ್ಪನೆಗಳು ಅಂಧ ಶ್ರದ್ಧೆಯನ್ನು ಅವಲಂಬಿಸಿದ್ದವು. ಸೂರ್ಯ, ಚಂದ್ರ, ಮೋಡ ಮೊದಲಾದವುಗಳು ದೇವತೆಗಳೆಂದೂ ಇಲ್ಲವೆ ಆಯಾ ದೇವತೆಗಳ ಶಕ್ತಿಯೆಂದೂ ತಿಳಿಯು ತ್ತಿದ್ದರು. ಆದರೆ ಮಾನವನ ಚಿಕಿತ್ಸಕ ಬುದ್ಧಿಯು ಮೆಲ್ಲಮೆಲ್ಲನೆ ಒಂದೊಂ ದನ್ನು ಕಸಿದುಕೊಳ್ಳುತ್ತ, ಅವುಗಳ ವಿಷಯವಾಗಿ ಶಾಸ್ತ್ರವನ್ನು ನಿರ್ಮಿ ಸಿದೆ. ಹೀಗೆ ಶ್ರದ್ಧೆಯ ಕ್ಷೇತ್ರವು ಕಡಿಮೆಯಾಗುತ್ತ ಆತ್ಮಾನಾತ್ಮ ವಿಚಾರದ ಮಟ್ಟಿಗೆ ಮಾತ್ರ ಉಳಿದಿದೆ. ಆದರೆ ಇತ್ತೀಚೆಗೆ ಈ ಪ್ರಶ್ನೆ ಗಳನ್ನು ಕೂಡ ಬುದ್ಧಿಯಿಂದ ಬಿಡಿಸಬಹುದೆಂದು ಅನ್ನಹತ್ತಿದ್ದಾರೆ. ಹಾಗಾದರೆ ಎಲ್ಲ ಸಂಗತಿಗಳು ಬುದ್ಧಿಗೋಚರವಾಗಿ ಶ್ರದ್ಧೆಯ ಪ್ರಶ್ನೆಯೇ ಉಳಿಯುವದಿಲ್ಲ. ಇರಲಿ, ಯಾವ ವಿಷಯಗಳು ಶಾಸ್ತ್ರದ ಕ್ಷೇತ್ರದಲ್ಲಿ ಬಂದಿರುವವೋ, ಮಾನವನು ವಿಚಾರಮಾಡಲು ಶಕ್ಯವಿದೆಯೋ ಅಂಥ ಕ್ಷೇತ್ರದಲ್ಲಿ ಶ್ರದ್ಧೆಗೆ ಅವಕಾಶ ಕೊಡುವದು ಶಾಸ್ತ್ರದ ಪ್ರಗತಿಗೆ ಘಾತಕವಿದೆ.

ಈ ವಿಷಯದಲ್ಲಿ ಗ್ರೀಕರು ದೂರದರ್ಶಿಗಳು. ಅವರಲ್ಲಿಯೂ ಧರ್ಮ ವಿದೆ, ಅಂಧಶ್ರದ್ಧೆಯಿದೆ. ಆದರೆ ಅವರು ಮೊದಲಿನಿಂದಲೂ ಶಾಸ್ತ್ರವನ್ನು ಶ್ರದ್ಧೆ, ಹಾಗೂ ಶಬ್ದಪ್ರಾಮಾಣ್ಯದಿಂದ ದೂರ ಇಟ್ಟಿದ್ದಾರೆ. ಆದುದ ರಿಂದಲೇ ಗ್ರೀಕರಲ್ಲಿ ವಿವೇಚನಶಕ್ತಿಯು ಬೆಳೆಯಿತು. ಭಾರತದಲ್ಲಿ ಇದರ ವಿರುದ್ಧವಾಯಿತು. ಭೌತಿಕಶಾಸ್ತ್ರ ಹಾಗೂ ಮೋಕ್ಷಶಾಸ್ತ್ರ ಗಳೆರಡನ್ನೂ ಕೂಡಿಸಿದರು. ಅವರ ದರ್ಶನಗಳೆಂದರೆ ಮೋಕ್ಷಸಾಧನ ಗಳು. ಅವುಗಳಲ್ಲಿ ಪದಾರ್ಥವಿಜ್ಞಾನವೂ ಇದ್ದಿತು. ತತ್ವಜ್ಞಾನದ ಬೆಳೆವಣಿಗೆಯಲ್ಲಿ ಅದು ಕಮರಿಹೋಯಿತು. ಶಬ್ದಪ್ರಾಮಾಣ್ಯಕ್ಕೆ ಮಹತ್ವ ಬಂದುದರಿಂದ ಸ್ವತಂತ್ರಬುದ್ಧಿಯು ಬೆಳೆಯಲಿಲ್ಲ. ನಮ್ಮ ಎಲ್ಲ ಆಸ್ತಿಕ

ಶಾಸ್ತ್ರಕಾರರು ಶಬ್ದಪ್ರಾಮಾಣ್ಯವನ್ನು ಒಪ್ಪಿದ್ದಾರೆ. ಪ್ರಮಾಣವೆಂದರೆ ಜ್ಞಾನದ ಸಾಧನ. ನಾಸ್ತಿಕರು ಒಂದೆರಡು ಪ್ರಮಾಣಗಳನ್ನು ಒಪ್ಪು ತ್ತಾರೆ. ಚಾರ್ವಾಕನು ಪ್ರತ್ಯಕ್ಷ ಅಂದರೆ ಇಂದ್ರಿಯಗಳಿಗೆ ಬರುವ ಅನುಭವವೊಂದನ್ನೇ ಒಪ್ಪುತ್ತಾನೆ. ಬೌದ್ಧರು ಹಾಗು ಜೈನರು ಪ್ರತ್ಯಕ್ಷ ಹಾಗು ಅನುಮಾನಗಳೆಂಬೆರಡನ್ನೂ ಮನ್ನಿಸುವರು. ಆಸ್ತಿಕರು ಮೂರು ಅಥವಾ ಅದಕ್ಕಿಂತ ಹೆಚ್ಚು ಪ್ರಮಾಣಗಳನ್ನು ನಂಬುತ್ತಾರೆ. ಇದರಲ್ಲಿ ಶಬ್ದವು ಇದ್ದೇಇದೆ. ಇದರಿಂದ ಆಸ್ತಿಕರೆಂದರೆ ವೇದಪ್ರಮಾಣ ಮಾನ್ಯಮಾಡುವವರು ಎಂಬ ಲಕ್ಷಣವು ಬಂದಿತು. ಮನು ಮೊದಲಾದ ಧರ್ಮಶಾಸ್ತ್ರ, ಸಾಂಖ್ಯಯೋಗ ಹಾಗು ಶಾಂಕರವೇದಾಂತಗಳಲ್ಲಿ ಪ್ರತ್ಯಕ್ಷ, ಅನುಮಾನ, ಶಬ್ದ ಈ ಮೂರನ್ನು ಪ್ರಮಾಣವೆಂದು ತಿಳಿ ಯುತ್ತಾರೆ. ನೈಯಾಯಿಕರು 'ಉಪಮಾನ'ವೆಂಬ ನಾಲ್ಕನೆಯದನ್ನು ಹಿಡಿಯುತ್ತಾರೆ. ಮೀಮಾಂಸಕರು ಈ ನಾಲ್ಕರಲ್ಲಿ 'ಅರ್ಥಾಪತ್ತಿ' ಮತ್ತು ಅನುಪಲಬ್ಧಿ ಈ ಎರಡನ್ನು ಸೇರಿಸುತ್ತಾರೆ. ಪೌರಾಣಿಕರು ಐತಿಹ್ಯ, ಹಾಗು ಸಂಭವ ಎಂಬೆರಡನ್ನು ಸೇರಿಸಿ ಪ್ರಮಾಣದ ಸಂಖ್ಯೆ ಯನ್ನು ಎಂಟಕ್ಕೆ ಮುಟ್ಟಿಸಿದ್ದಾರೆ.

ಕಡಿಮೆ ಪ್ರಮಾಣಗಳನ್ನು ನಂಬುವವರು ಉಳಿದ ಪ್ರಮಾಣಗಳನ್ನು ಖಂಡಿಸಿರುವುದರಿಂದ ಇವುಗಳಲ್ಲಿಯು ತಾರತಮ್ಯವನ್ನು ತಿಳಿಯಲು ಅನು ಕೂಲವಿದೆ. 'ಸಂಭವ' ಈ ಪ್ರಮಾಣವು ತೀರ ಗೊಳ್ಳು. ಇದರಿಂದ ನಿಶ್ಚಿತ ಜ್ಞಾನವಾಗುವುದಿಲ್ಲ. ಗ್ರಾಹ್ಯವಿದ್ದ ಸಂಭವವು ಅನುಮಾನದಲ್ಲಿ ಬರುತ್ತದೆ. ಐತಿಹ್ಯವು ಶಬ್ದಪ್ರಮಾಣದಲ್ಲಿ ಸೇರುತ್ತದೆ. ಅದರಂತೆಯೇ ಅರ್ಥಾಪತ್ತಿ ಹಾಗು ಅನುಪಲಬ್ಧಿಗಳು ಅನುಮಾನದಲ್ಲಿ ಸಮಾವಿಷ್ಟ ವಾಗುತ್ತವೆ. ಇನ್ನು ಉಳಿದವು ಶಬ್ದ, ಅನುಮಾನ, ಪ್ರತ್ಯಕ್ಷ, ಉಪಮಾನ ಇವೇ ನಾಲ್ಕು. ಜ್ಞಾನದ ಸಾಧನವೆಂದು ತಿಳಿಯುವದು ಒಳ್ಳೆಯದು. ಉಪಮಾನವೂ ಸ್ವತಂತ್ರವಾಗಿ ಜ್ಞಾನದ ಸಾಧನವಿದೆ. ಉದಾ ಹರಣೆಗಾಗಿ 'ಅವನ ಹೊಟ್ಟೆಯಲ್ಲಿ ಕ್ರೋಧಾಗ್ನಿಯು ಉರಿಯು ತ್ತದೆ, ಎಂಬುದನ್ನು ನೋಡಿದರೆ' ಕ್ರೋಧಕ್ಕೂ ಅಗ್ನಿಗೂ ಕೆಲವೊಂದು ಸಾಮಾನ್ಯಗುಣಗಳನ್ನು ಕಲ್ಪಿಸಿ, ಆ ಸಾಮಾನ್ಯಗುಣಗಳ ಆಧಾರದಿಂದ

ಅಗ್ನಿಯ ಕಾಲ್ಪನಿಕ ಆರೋಪವನ್ನು ಕ್ರೋಧದ ಮೇಲೆ ಮಾಡಲಾಗಿದೆ. ಪ್ರತ್ಯಕ್ಷವಾಗಿ ಅಗ್ನಿಯು ಆ ಮನುಷ್ಯನಲ್ಲಿ ಉತ್ಪನ್ನವಾಗಿದೆಯೆಂದೇನೂ ಯಾರೂ ತಿಳಿದುಕೊಳ್ಳದೆ, ಅಗ್ನಿಯ ಕೆಲವು ಗುಣಗಳು ಮಾತ್ರ ಕ್ರೋಧ ವಲ್ಲಿವೆಯೆಂಬುದು ಮಾತ್ರ ಕೇಳುವವರಿಗೆ ಅರ್ಥವಾಗುತ್ತದೆ. ಆದುದರಿಂದ ಉಪಮಾನವು ಜ್ಞಾನದ ಸಾಧನವೆಂದು ತಿಳಿಯಬೇಕಾಗುತ್ತದೆ.

ಉಪಮಾನವು ಸ್ವತಂತ್ರ ಜ್ಞಾನಸಾಧನವೆಂದು ಗೊತ್ತಾದರೂ, ಶಾಸ್ತ್ರೀಯ ವಿಚಾರಗಳಲ್ಲಿ ಅದರ ಉಪಯೋಗವು ಬೀಳುವದಿಲ್ಲ. ಏಕೆಂದರೆ, ಉಪಮಾನದಿಂದ ನಿಶ್ಚಿತ ಜ್ಞಾನವೇನೂ ಆಗುವದಿಲ್ಲ. ಗೋವಿಂ ದರಾಯರು ಅರಸರಂತೆ ವಿಲಾಸಿಗಳಿದ್ದಾರೆ. ಈ ವಿಧಾನದಲ್ಲಿ ರಾಜನ ವಿಲಾಸಗಳೇನು ? ಅದರಲ್ಲಿ ಗೋವಿಂದರಾಯರು ಯಾವ ಗಳನ್ನು ಭೋಗಿಸುತ್ತಿದ್ದಾರೆಂಬವುಗಳ ಕಲ್ಪನೆಯಿಲ್ಲದೆ, ನಿಜವಾದ ಜ್ಞಾನವಾಗು ವದಿಲ್ಲ. ಆದುದರಿಂದ ಉಪಮೆಯು ಯಾವಾಗಲೂ ನಿಶ್ಚಿತವಾದ ಜ್ಞಾನ ಮಾಡಿಕೊಡದಿರುವದರಿಂದ ನಿರುಪಯೋಗಿ ಇರುತ್ತದೆ.

ಉಪಮೆಯು ಶಾಸ್ತ್ರೀಯ ಕ್ಷೇತ್ರದಲ್ಲಿ ನಿರುಪಯೋಗಿಯಾದರೆ, ಕಾವ್ಯ ಹಾಗು ಲಲಿತವಾಙ್ಮಯಕ್ಷೇತ್ರದಲ್ಲಿ ಅತ್ಯಂತ ಪ್ರಭಾವಶಾಲಿ ಯಾಗಿರುತ್ತದೆ. ಉಪಮಾನದಲ್ಲಿಯ ಸಂದಿಗ್ಧತೆಯು ಶಾಸ್ತ್ರದಲ್ಲಿ ವ್ಯತ್ಯಯವನ್ನುಂಟುಮಾಡುತ್ತಿದ್ದರೆ, ಕಾವ್ಯದಲ್ಲಿ ಕಲ್ಪನೆಯು ವಿಹಾರಕ್ಕೆ ಅವಕಾಶ ಕೊಡುವದರಿಂದ ಕಾವ್ಯದಲ್ಲಿ ವಿಶೇಷ ಸೌಂದರ್ಯವನ್ನುಂಟು ಮಾಡಲು ಕಾರಣವಾಗುತ್ತದೆ. ಅನೇಕ ಬಗೆಬಗೆಯ ಕಾಲ್ಪನಿಕ ಚಿತ್ರ ಗಳನ್ನು ಮನಸ್ಸಿನಲ್ಲಿ ಉಂಟುಮಾಡಿ ಅದರ ವರ್ಣ್ಯವಸ್ತುವಿನೊಡನೆ ಚಮತ್ಕಾರ ರೀತಿಯಿಂದ ಸಾಮ್ಯಗಳನ್ನು ತೋರಿಸುತ್ತ ರಸಿಕರ ಚಿತ್ತ ವನ್ನು ಆನಂದಸಾಗರದಲ್ಲಿ ಮುಳುಗಿಸಲು ಉಪಮೆಯು ಒಳ್ಳೇ ಉತ್ಕೃಷ್ಟ ಸಾಧನವಿದೆ. ಈ ಕವಿ ಕಲ್ಪನೆಗಳು ಶಾಸ್ತ್ರದ ದೃಷ್ಟಿಯಿಂದ ಮೂರ್ಖತನವೆನಿಸಬಹುದು; ಆದರೆ ಅವಿವೇಕ ಜನರ ಸರ್ವಸ್ವವಾಗಿ ಕುಳಿತಿವೆ.

ಶಬ್ದಪ್ರಾಮಾಣ್ಯವು ಶಾಸ್ತ್ರದಲ್ಲಿ ಉಪಯೋಗವಿಲ್ಲ. ಅಂದರೆ ಎರ ಡನೆಯವರು ಏನೇ ಹೇಳಲಿ, ಅಥವಾ ಬರೆದಿಡಲಿ ಅದನ್ನು ನಂಬಬಾರ

ದೆಂದು ಅರ್ಥವಲ್ಲ. ನಮ್ಮ ಅನುಭವಕ್ಕೂ ಬುದ್ಧಿಗೂ ಒಪ್ಪುವಂಥ ಸಂಗತಿ ಗಳನ್ನು ನಾವು ಒಪ್ಪಲೇಬೇಕು. ಇಲ್ಲದಿದ್ದರೆ, ಇಲ್ಲಿಯವರೆಗಾದ ಜ್ಞಾನಭಂಡಾರವನ್ನೆಲ್ಲ ಹೋಮ ಮಾಡಬೇಕಾದೀತು. ಮತ್ತೆ ಎಲ್ಲ ವನ್ನೂ ಮೊದಲಿನಿಂದಲೇ ಪ್ರಾರಂಭಮಾಡಬೇಕಾದೀತು. ಹೀಗಾದರೆ ಎಂದೂ ಪ್ರಗತಿಯಾಗಲಿಕ್ಕಿಲ್ಲ. 'ಶಬ್ದಪ್ರಮಾಣವನ್ನು ಹಿಡಿಯತಕ್ಕದ್ದಲ್ಲ' ಇದರ ಅರ್ಥವಿಷ್ಟೇ—ಯಾರೋ ಏನೋ ಹೇಳಿದ್ದನ್ನು ಕಣ್ಣು ಮುಚ್ಚಿ ಕೊಂಡು ನಂಬಕೂಡದೆಂದರ್ಥ. ಪ್ರಗತಿಯ ಅಪೇಕ್ಷೆಯುಳ್ಳವರೆಲ್ಲ ಇದನ್ನು ಒಪ್ಪಲೇಬೇಕು. ಪ್ರಾಚೀನರು ಯಾವದೇ ಸಿದ್ಧಾಂತವನ್ನು ಮಾಡಿದ್ದರೂ ಅದರ ವಿಷಯವಾಗಿ ಸಂಶಯ ತೆಗೆದುಕೊಳ್ಳಲು, ಪುನರ್ವಿ ಚಾರಮಾಡಲು, ಅದನ್ನು ಖಂಡಿಸಲು ಶಾಸ್ತ್ರದ ಕ್ಷೇತ್ರದಲ್ಲಿ ಸ್ವಾತಂತ್ರ್ಯ ವಿರಬೇಕು. ಹೊಸ ಸಂಶೋಧನಗಳು ಹಳೆಯ ಎಷ್ಟೋ ಸಿದ್ಧಾಂತ ಗಳನ್ನು ಖಂಡಿಸಿದ್ದನ್ನು ನಾವು ನೋಡುತ್ತೇವೆ. ಆದುದರಿಂದ ವಿಚಾರ ಸ್ವಾತಂತ್ರ್ಯವಿದ್ದು ನಮ್ಮ ಪ್ರಾಚೀನ ಜ್ಞಾನವೆಲ್ಲವೂ ನಮಗೆ ಬೇಕು. ಅದಿಲ್ಲದೆ ನಡೆಯಲಾರದು.

ಇತಿಹಾಸದ ಕ್ಷೇತ್ರದಲ್ಲಿಯಂತೂ ಶಬ್ದಪ್ರಾಮಾಣ್ಯವಿಲ್ಲದೆ ನಡೆಯ ಲಾರದು. ಇತಿಹಾಸವನ್ನು ಬರೆಯುವಾಗ ಪ್ರತ್ಯಕ್ಷ ಹಾಗು ಅನುಮಾನ ಗಳು ನಿರುಪಯೋಗಿ. ಹೇಳಿಕೇಳಿ ಇತಿಹಾಸವು ಹಿಂದಿನ ಕಥೆ. ಅದರ ಅನುಭವವು ನಮಗೂ ನಮ್ಮ ಇಂದ್ರಿಯಗಳಿಗೂ ಹೇಗೆ ಬರಬೇಕು? ಶಿವಾಜಿಯು ಇಂಥ ಇಸ್ವಿಯಲ್ಲಿ ಹುಟ್ಟಿದನು, ಅವನು ರಾಜ್ಯ ಸ್ಥಾಪನೆ ಮಾಡಿದನು. ಇದನ್ನು ಅನುಮಾನದಿಂದ ಹೇಗೆ ಕಂಡುಹಿಡಿಯುವದು? ಈ ಸಂಗತಿಗಳನ್ನು ಹಿಂದಿನವರು ಬರೆದಿಟ್ಟುದರ ಮೇಲಿಂದಲೂ ಹೇಳುವದರ ಮೇಲಿಂದಲೂ ತಿಳಿದುಕೊಳ್ಳಬೇಕು. ಅಂದರೆ ಶಬ್ದಪ್ರಮಾಣವೇ ಇದಕ್ಕೆ ಆಧಾರವೆಂದರ್ಥ. ಹಾಗೇ ಅನೇಕ ಸಂಗತಿಗಳನ್ನು ನಾವು ತಿಳಿದುಕೊಂಡ ನಂತರ ಅವುಗಳ ಸಹಾಯದಿಂದ ಕೆಲವು ನಿರ್ಗಮನ ಅನುಮಾನಗಳನ್ನು ತೆಗೆಯಬಹುದು. ಅಮೇರಿಕೆಯಲ್ಲಿ ರಾಜ್ಯಕ್ರಾಂತಿಯಾಯಿತು. ಫ್ರಾನ್ಸ ದಲ್ಲಿ ಆಯಿತು. ಈ ಎಲ್ಲ ಉದಾಹರಣೆಗಳಿಂದ ಕೆಲವೊಂದು ಪರಿಸ್ಥಿತಿ ಯುಂಟಾದರೆ ರಾಜ್ಯಕ್ರಾಂತಿಯಾಗಬಹುದೆಂದು ನಾವು ಊಹಿಸ

ಬಹುದು. ಆದರೆ ಇದರ ವಿರುದ್ಧವಾಗಿ ಇಂಥಿಂಥ ಪರಿಸ್ಥಿತಿಯಲ್ಲಿ ರಾಜ್ಯ ಕ್ರಾಂತಿಯಾಗುತ್ತದೆ. ಆ ವಿಶಿಷ್ಟಪರಿಸ್ಥಿತಿಯಲ್ಲಿ ಒಂದು ರಾಷ್ಟ್ರವು ಒಂದು ಕಾಲಕ್ಕಿತ್ತು; ಆದುದರಿಂದ ರಾಜ್ಯಕ್ರಾಂತಿಯು ಅಲ್ಲಿ ಆಗಿರಬೇಕು ಎಂದು ನಿಗಮನಾತ್ಮಕ ಅನುಮಾನವನ್ನು ಮಾತ್ರ ಸಮಗೆ ಕಟ್ಟಲು ಬರಲಾರದು. ಅಂದಮೇಲೆ ವ್ಯಕ್ತಿಯ ಜನ್ಮ-ಮೃತ್ಯುಗಳನ್ನು ಅನುಮಾನದಿಂದ ಕಟ್ಟುವ ಬಗೆ ಹೇಗೆ? ಆದುದರಿಂದ ಈ ವಿಷಯದಲ್ಲಿ ಶಬ್ದಪ್ರಮಾಣವೇ ಆಧಾರ.

ಶಬ್ದಪ್ರಮಾಣವು ತೀರ ಅಶಾಸ್ತ್ರೀಯವಾದರೆ ಅದನ್ನು ನಂಬಿ ನಾವು ನಡೆಯುವದು ಹೇಗೆ? ಇತಿಹಾಸವನ್ನು ಬರೆಯುವದೆಂತು? ಇದರ ಉತ್ತರವು ಇಷ್ಟೆ—ನಿತ್ಯ ವ್ಯವಹಾರವು ಶಾಸ್ತ್ರವಲ್ಲ. ಇತಿಹಾಸವು ಪದಾರ್ಥವಿಜ್ಞಾನದಂಥ ಶಾಸ್ತ್ರವಲ್ಲ. ಒಟ್ಟಿನಮೇಲೆ ಮನುಷ್ಯನು ಸಾಧಾರಣವಾಗಿ ಸತ್ಯವಾಡುವ ಪ್ರಾಣಿಯೆಂದು ಅನುಭವ. ಎಲ್ಲಿ ಅವನ ಹಿತ-ಸಂಬಂಧವಿರುವದಿಲ್ಲವೊ ಅಲ್ಲಿ ಸ್ವಭಾವತಃ ಸತ್ಯಮಾತಾಡುವನು. ಶಾಸ್ತ್ರದಲ್ಲಿ ಶಬ್ದಪ್ರಮಾಣ ಮನ್ನಿಸಬಾರದೆಂಬುದರ ಕಾರಣವು ಅವನು ಸುಳ್ಳು ಹೇಳುವನೆಂದಲ್ಲ—ಶಬ್ದದ ಬಂಡು ಬೆಳೆದು ಬುದ್ಧಿಯ ವ್ಯಾಪಾರಕ್ಕೆ ತೊಂದರೆಯಾಗುವದೆಂದು. ಇತಿಹಾಸದಲ್ಲಿ ಗತ್ಯಂತರವೇ ಇರುವದಿಲ್ಲ. ಹಿಂದಿನ ಕಾಗದಪತ್ರಗಳನ್ನು ಎಚ್ಚರದಿಂದ ಪರೀಕ್ಷಿಸಿ ಮಾನ್ಯಮಾಡಬೇಕಾಗುತ್ತದೆ. ಮಾನವನ ಸ್ವಭಾವವನ್ನು ತಿಳಿದು ಈ ಕಾರ್ಯಕ್ಕೆ ಕೈಹಾಕಬೇಕು. ಆದ್ದರಿಂದ ಇತಿಹಾಸಜ್ಞರು ಮಾನಸಶಾಸ್ತ್ರವನ್ನು ಚನ್ನಾಗಿ ಅಭ್ಯಾಸಮಾಡಿದವರಿರಬೇಕು. ಇದರ ಬಗ್ಗೆ ಒಂದೆರಡು ಸುಲಭ ನಿಯಮಗಳನ್ನು ನೋಡಿ ಮುಂದೆ ಸಾಗೋಣ.

೧ ಯಾವುದೊಂದು ಪ್ರಸಂಗದಲ್ಲಿ ಆ ಪಕ್ಷಗಳಿಗೆ ಸಂಬಂಧಿಸದ ಮೂರನೇಯವನು ಸ್ವಾಭಾವಿಕವಾಗಿ ಸತ್ಯವಿಧಾನಗಳನ್ನು ಮಾಡುವನು.

೨. ಯಾವ ಸಂಗತಿಯು ಹೆಚ್ಚಾಗಿ ಸ್ವಂತ ಹಾಗು ಗುಪ್ತವಿರುತ್ತದೆಯೋ, ಅದು ಸತ್ಯಕ್ಕೆ ಸಮೀಪವಿರುತ್ತದೆ. ಯಾವುದು ಸಾರ್ವಜನಿಕವಿದೆಯೊ ಅದು ಸತ್ಯದಿಂದ ದೂರವಿರುವ ಸಂಭವವಿದೆ. ಆದುದರಿಂದ ದಿನಚರಿ ಹಾಗು ಪತ್ರವ್ಯವಹಾರಗಳು ಹೆಚ್ಚು ವಿಶ್ವಸನೀಯವೆಂದು ಅವುಗಳಿಗೆ ಇತಿಹಾಸದಲ್ಲಿ ಮಹತ್ವಬಂದಿದೆ.

೩. ಯಾವುದೊಂದು ಕಾಲದ ಮೂಲಕಾಗದಪತ್ರಗಳಿಗಿಂತಲೂ ಆಕಸ್ಮಾತ್ತಾಗಿ ಮಾಡಿದ ಪತ್ರವ್ಯವಹಾರಗಳು ಹೆಚ್ಚು ಸತ್ಯವಿರುತ್ತವೆ.

ಭಾರತದಲ್ಲಿ ಇತಿಹಾಸಸಂಶೋಧನವಾರಂಭವಾದ್ದರಿಂದ ಅದು ವ್ಯವಸ್ಥಿತವಾಗಿ, ಪ್ರಮಾಣಶಾಸ್ತ್ರಗಳ ಪೂರ್ಣ ಅಧ್ಯಯನಮಾಡಿ ಮಾಡಬೇಕೆಂದೇ ಪ್ರಸ್ತುತ ಲೇಖಕನ ಬಿನ್ನಹವಿದೆ.

ಶಾಸ್ತ್ರವೆಂದರೇನು ? ಹೇಗೆ ಸಿದ್ಧವಾಗುತ್ತದೆ ? ಅದರ ಸಾಧನೆಗಳೇನು ಎಂಬ ಸಂಗತಿಗಳನ್ನು ಹೇಳಿದ್ದಾಯಿತು. ಒಟ್ಟಿನಲ್ಲಿ ಶಾಸ್ತ್ರದ ಕೊನೆಯು ಎಲ್ಲಿ? ಎಂಬುದನ್ನಷ್ಟು ನೋಡೋಣ.

ವಿಶಾಲದೃಷ್ಟಿಯಿಂದ ವಿಚಾರಮಾಡಿದರೆ, ಶಾಸ್ತ್ರವು ಭೌತಿಕ ಅಥವಾ ಮಾನವೀಯ ಘಟನೆಗಳ ವರ್ಗೀಕರಣ ಹಾಗು ಮೂಲದ ಶೋಧ ಮಾಡುತ್ತದೆ. ಶಾಸ್ತ್ರದ ಎಲ್ಲ ಪ್ರಕ್ರಿಯೆಗಳು ಈ ಎರಡರಲ್ಲಿ ಅಡಕವಾಗುತ್ತವೆ. ವರ್ಗೀಕರಣದಲ್ಲಿ ಗುಣಧರ್ಮಗಳ ಪರೀಕ್ಷಣ ಹಾಗು ಗುಣಧರ್ಮಗಳಂತೆ ವ್ಯಾಖ್ಯೆಗಳನ್ನು ಕಟ್ಟುವದು ಇರುತ್ತದೆ. ಗುಣಧರ್ಮಗಳನ್ನು ಶೋಧಿಸುವ ಮುಂದೆ ಸಾಮಾನ್ಯ ಗುಣಧರ್ಮಗಳುಳ್ಳ ಪದಾರ್ಥಗಳನ್ನು ಬೇರೆ ಬೇರೆ ವಿಂಗಡಿಸುತ್ತಾರೆ. ಮತ್ತು ಆ ವರ್ಗಗಳ ಧರ್ಮಾನುಸಾರವಾಗಿ ವ್ಯಾಖ್ಯೆಯೂ ಮಾಡಲ್ಪಡುತ್ತದೆ. ಜೀವಶಾಸ್ತ್ರವನ್ನೇ ತೆಗೆದುಕೊಂಡರೆ, ಮೊದಲು ಸೃಷ್ಟಿಯಲ್ಲಿ ಜೀವ ಹಾಗು ಜಡ ಎಂಬ ಎರಡು ವರ್ಗಗಳು ಉಂಟಾಗುತ್ತವೆ. ಜೀವದಲ್ಲಿ ವನಸ್ಪತಿ ಹಾಗು ಪ್ರಾಣಿಗಳೆಂದು ಎರಡು ವರ್ಗಗಳು. ಪ್ರಾಣಿಗಳಲ್ಲಿ ಮತ್ತೆ ಭೇದಗಳು. ಹೀಗೆ ವರ್ಗೀಕರಣ ಕ್ರಿಯೆಯು ಶಾಸ್ತ್ರದಲ್ಲಿ ನಡೆಯುವದು.

ಹೀಗೆ ವರ್ಗೀಕರಣ ಮಾಡಿದ ನಂತರ ಬೇರೆಬೇರೆ ವರ್ಗಗಳ ಕಾರಣ-ಮೀಮಾಂಸೆಯನ್ನು ಮಾಡುವದು ಕ್ರಮಪ್ರಾಪ್ತವಾಗುತ್ತದೆ. ಕಾರಣಮೀಮಾಂಸೆಯು ಇಬ್ಬಗೆಯದಿದೆ. ಮೊದಲನೆಯದು ಪೃಥಕ್ಕರಣ. ಒಂದು ಪದಾರ್ಥದ ಘಟಕಗಳ ಪೃಥಕ್ಕರಣ ಮಾಡುವದು, ಮತ್ತೆ ಅದನ್ನು ಪೃಥಕ್ಕರಿಸುವದು ಹೀಗೆ ವಸ್ತುವಿನ ಮೂಲದ ವರೆಗೆ ಹೋಗುವದೇ ಮೊದಲನೇ ಪ್ರಕಾರವು. ಭೌತಿಕ ಶಾಸ್ತ್ರಜ್ಞರು ಅಣು, ಪರಮಾಣು, ಹಾಗು ತದಂತರ್ಗತ ವಿದ್ಯುತ್ ಕಣದ ವರೆಗೆ ಒಂದು ಮುಟ್ಟಿದ್ದಾರೆ.

ಎರಡನೆಯ ಪದ್ಧತಿಯೆಂದರೆ, ವಿಕಾಸವಾದದ ಆಧಾರದಿಂದ ಪ್ರತಿಯೊಂದು ವಸ್ತುವು ತೀರ ಪ್ರಥಮಾವಸ್ಥೆಯಿಂದ ಇಲ್ಲಿಯ ವರೆಗೆ ಯಾವ ಯಾವ ಬಗೆಯಿಂದ ಸದ್ಯದ ಸ್ವರೂಪ ಹೊಂದಿದೆಯೆಂಬುದನ್ನು ನೋಡುವದು. ಇದೇ ರೀತಿಯಿಂದ ಸದ್ಯದ ಪ್ರಾಣಿಗಳ ಸ್ವರೂಪವು ತೀರ ಮೊದಲಿನಿಂದ ನೈಸರ್ಗಿಕ ನಿಯಮದಂತೆ ಹೇಗೆ ಬದಲಾಗುತ್ತ ಬಂದಿದೆಯೆಂಬುದನ್ನು ಡಾರ್ವಿನ್ನನು ತೋರಿಸಿಕೊಟ್ಟಿರುವನು.

ಅನೇಕ ಶಾಸ್ತ್ರಗಳಲ್ಲಿ ಕಾರಣಮೀಮಾಂಸೆಗಳ ಈ ಎರಡೂ ಪ್ರಕಾರಗಳು ಉಪಯೋಗದಲ್ಲಿವೆ ಭೌತಿಕಶಾಸ್ತ್ರದಲ್ಲಿ ಹೆಚ್ಚಾಗಿ ಪೃಥಕ್ಕರಣ ಪದ್ಧತಿಯೇ ಉಪಯೋಗವಾಗುತ್ತದೆ. ಯಾಕೆಂದರೆ ಜಡ ಪದಾರ್ಥಗಳಲ್ಲಿ ನಾವು ಯಾವ ಬಗೆಯ ಬದಲಾವಣೆಗಳನ್ನೂ ನೋಡುವ ದಿಲ್ಲ. ಆದರೂ ಪರ್ವತಗಳ ಬೆಳೆವಣಿಗೆಯು ಹೇಗಾಯಿತೆಂಬುದನ್ನು ನೋಡುವಾಗ ವಿಕಾಸವಾದದ ಸಹಾಯ ಪಡೆಯಬೇಕಾಗುತ್ತದೆ. ಆದರೆ ವಿಕಾಸವಾದದ ಹೆಚ್ಚಿನ ಉಪಯೋಗವು ಜೀವನಶಾಸ್ತ್ರ ಹಾಗು ಮಾನವ ವಿಷಯಕ ಸರ್ವ ಶಾಸ್ತ್ರಗಳಲ್ಲಿ ಆಗುವದು. ಜೀವನಶಾಸ್ತ್ರದಲ್ಲಿಯಂತೂ ಅದರದೇ ಸಾಮ್ರಾಜ್ಯ. ಇತ್ತೀಚೆಗೆ ಅರ್ಥಶಾಸ್ತ್ರ, ಸಮಾಜಶಾಸ್ತ್ರ ಗಳಲ್ಲಿ ಕೂಡ ಮಾನವನ ಬೆಳೆವಣಿಗೆಯು ಹೇಗಾಗುತ್ತ ನಡೆದಿದೆ ಎಂಬು ದನ್ನು ಒಳ್ಳೇ ಉತ್ಸುಕತೆಯಿಂದ ನೋಡುತ್ತಾರೆ. ಇದಲ್ಲದೆ ಪ್ರತ್ಯೇಕ ಶಾಸ್ತ್ರದಲ್ಲಿಯ ತತ್ವಗಳ ಬೆಳೆವಣಿಗೆಯ ಇತಿಹಾಸವೇ ಆಗಿದೆ. ಈ ಮಾತೇ ಬೇರೆ. ಈ ಶಾಸ್ತ್ರಗಳಲ್ಲಿ ವಿಘಟನಾತ್ಮಕ ಪದ್ಧತಿಯು ಉಪಯೋಗಬೀಳುವ ದಿಲ್ಲ. ಜೀವಶಾಸ್ತ್ರದಲ್ಲಿ ಶರೀರದಲ್ಲಿಯ ವ್ಯಾಪಾರಗಳ ದ್ರವ್ಯಗಳ ಪೃಥ ಕ್ಕರಣಮಾಡಿ ನೋಡಲು ಪ್ರತ್ಯೇಕ ಶಾಸ್ತ್ರವೇ (Biochemistry) ಆಗಿದೆ. ಅದರಂತೆಯೇ ಮಾನವೀಜೀವನದ ಭಿನ್ನಭಿನ್ನ ರೀತಿಗಳನ್ನು ಪೃಥ ಕ್ಕರಿಸಿದ್ದಾರೆ. ಸಂಪತ್ತಿನ ಉತ್ಪಾದನ, ವಿಭಜನ, ವ್ಯಯ ಹೀಗೆ ಅರ್ಥ ಶಾಸ್ತ್ರದಲ್ಲಿ ಮಾಡುವ ವಿಭಾಗಗಳು ಪೃಥಕ್ಕರಣದ ಉದಾಹರಣೆಗಳು.

ಹೀಗೆ ಶಾಸ್ತ್ರವು ವಿಚಾರ ಮಾಡುತ್ತ ಮಾಡುತ್ತ ಕೊನೆಗೆ ದೊರಕಿ ಸಿದ್ದೇನು? ಎಂಬುದು ಮಹತ್ವದ ಪ್ರಶ್ನೆ. ಶಾಸ್ತ್ರವು ಇಷ್ಟು ದೀರ್ಘ ವಾಗಿ ವಿಚಾರಮಾಡಿದರೂ ಅದಕ್ಕೆ ಜಗತ್ತಿನ ಸ್ವರೂಪದ ಕೊನೆಯ

ಕಾರಣವಿಮಾಮಾಂಸೆಯನ್ನು ಮಾಡಲು ಬಂದಿಲ್ಲ. ಜಡಪದಾರ್ಥಗಳ ಪೃಥಕ್ಕರಣವು ಪರಮಾಣುಗಳಲ್ಲಿಯ ವಿದ್ಯುತ್ ಕಣದ ವರೆಗೆ ಬಂದರೂ ಈ ಕಣವು ಅದರಂತೆಯೇ ಸಜೀವ ವಸ್ತುವಿನ ಜೀವವು ಯಾಕೆ, ಎಂದು, ಹೇಗೆ ಉತ್ಪನ್ನವಾದವು ಎಂಬ ಪ್ರಶ್ನೆಗೆ ಶಾಸ್ತ್ರವು ಇನ್ನೂವರೆಗೆ ಉತ್ತರ ಕೊಡಲು ಅಸಮರ್ಥವಿದೆ. ಸಾಮಾನ್ಯ ವಸ್ತುಗಳ ಬಗ್ಗೆ ಏಕೆ? ಮತ್ತು ಹೇಗೆ ಎಂಬ ಪ್ರಶ್ನೆಗಳು ಏಳುತ್ತವೆ. ಹೇಗೆ ಎಂಬುದಕ್ಕೆ ಕೆಲವೊಂದು ಮರ್ಯಾದೆಯ ವರೆಗೆ ಉತ್ತರವು ದೊರೆಯಬಹುದು. ಆದರೆ ಏಕೆ ಎಂಬ ಪ್ರಶ್ನೆಗೆ ಮಾತ್ರ ಇನ್ನೂವರೆಗೂ ಉತ್ತರವು ದೊರೆತಿಲ್ಲ. ಇದರ ಅರ್ಥ ವಿಷ್ಟೇ—ಯಾವುದೊಂದು ವಸ್ತುವಿನ ಪೂರ್ಣ ಸ್ಪಷ್ಟೀಕರಣ ಮಾಡಲು ಶಾಸ್ತ್ರವು ಸಮರ್ಥವಾಗಿಲ್ಲ.

ಶಾಸ್ತ್ರದಿಂದ ನಿಜವಾದ ಜ್ಞಾನವಾಗುವದಿಲ್ಲ ಎಂಬ ಮಾತು ಶಾಸ್ತ್ರಜ್ಞರಿಗೆ ಶೋಭಿಸುತ್ತದೆ; ನಮ್ಮಂಥವರಿಗಲ್ಲ. ನಾವು ಹಾಗೆ ತಿಳಿಯುವದೆಂದರೆ, ಸೂರ್ಯನ ಮೇಲೆ ಉಗುಳುವ ಮೂರ್ಖರಂತೆ ನಮ್ಮ ಗತಿಯಾಗುವದು. ಇಲ್ಲಿಯ ವರೆಗೆ ಶಾಸ್ತ್ರವು ದೊರಕಿಸಿದ ಜ್ಞಾನ ವೇನು ಕಡಿಮೆಯಿಲ್ಲ. ನಿಸರ್ಗದ ಎಲ್ಲ ವ್ಯಾಪಾರಗಳಲ್ಲಿ ಒಳಹೊಕ್ಕು ಮನುಷ್ಯನು ಜ್ಞಾನವನ್ನು ಸಂಪಾದಿಸಿದ್ದಾನೆ. ಈ ಶಾಸ್ತ್ರಜ್ಞಾನದಿಂದ ಉದ್ಯೋಗ ವ್ಯವಸಾಯಗಳು, ಸಂಪತ್ತು, ಸುಖವಸ್ತುಗಳ ಬೆಳೆವಣಿಗೆ ಗಳಂತೂ ಆಗಿವೆ. ಇದರಿಂದ ವ್ಯಕ್ತಿ ಹಾಗು ರಾಷ್ಟ್ರಗಳ ಶಕ್ತಿಯು ಬೆಳೆದಿದೆ. ಸೃಷ್ಟಿಯಲ್ಲಿಯ ಎಲ್ಲ ಗೂಢಗಳು ತಿಳಿದಿರಲಿಕ್ಕಿಲ್ಲ. ಮುಂದೆಯೂ ತಿಳಿಯಲಿಕ್ಕಿಲ್ಲ. ಆದರೆ ಈಗ ಶಾಸ್ತ್ರಗಳು ಹಚ್ಚಿದ ಶೋಧವೇನು ಕಡಿಮೆಯಲ್ಲವೆಂಬುದನ್ನು ಮರೆಯಲಾಗದು. ಇದು ಅಮೃತದ ಕೊಡ ವಿದೆ. ಇದನ್ನು ಸವಿದು ನಾವು ಅಮರರಾಗೋಣ, ರಾಷ್ಟ್ರವನ್ನು ಕಟ್ಟೋಣ.

---

# ಏಳನೆಯ ಮೆಟ್ಟಿಲು

## ಜ್ಞಾನಭಂಡಾರದಲ್ಲಿಯ ರತ್ನಗಳು

ನಮ್ಮಂತಹರು ಮೈಸೂರು ಅರಮನೆಯ ಎದುರಿಗೆ ನಿಂತರೆ ದಂಗು ಬಡಿಯುತ್ತೇವೆ. ಅಲ್ಲಿರುವ ಮಹಾಲುಗಳೂ ಅವುಗಳಲ್ಲಿರುವ ಸುಂದರ ವಾದ ಒಡವೆಗಳೂ ನಮ್ಮ ಕಣ್ಣು ಮುಂದೆ ಹಾದು ಹೋಗುತ್ತವೆ. ಅಲ್ಲಿಂದ ಹೊರಬಿದ್ದು ನಾವು ಏನು ನೋಡಿದೆವು ಎಂದು ಆಲೋಚಿಸಿ ದೊಡನೆ, ತೀರ ಸ್ವಲ್ಪ ಸಂಗತಿಗಳು ಮಾತ್ರ ನೆನಪುಳಿದಿರುವದನ್ನು ಕಂಡು ಪೆಚ್ಚಾಗುತ್ತೇವೆ. ಇಂದಿನ ವಿದ್ಯಾದೇವಿಯ ಮಂದಿರದ ಮಾತೂ ಕೂಡ ಹೀಗೆಯೇ ಇದೆ. ಅದರ ಅಪಾರತ್ವವು ನಮ್ಮನ್ನು ದಿಗ್ಭ್ರಾಂತರನ್ನಾಗಿ ಮಾಡುತ್ತದೆ. ಆದರೆ, ಇದ್ದ ಜ್ಞಾನವನ್ನೆಲ್ಲ ಆಕಲನ ಮಾಡಲು ಸಾಧ್ಯ ವಿದ್ದ ಸಮಯವು ಒಂದಿತ್ತು. ಅರಿಸ್ಟಾಟಲನು ತನ್ನ ಕಾಲದಲ್ಲಿಯ ಎಲ್ಲ ಜ್ಞಾನವನ್ನು ಸಂಗ್ರಹಿಸಿ ಶಾಸ್ತ್ರಗಳನ್ನು ರಚಿಸಿದನು. ನಮ್ಮಲ್ಲಿ ವಿದ್ಯಾ ರಣ್ಯರು ಎಲ್ಲ ವಿಷಯಗಳ ಮೇಲೆ ಗ್ರಂಥಗಳನ್ನು ಬರೆದು 'ಸರ್ವಜ್ಞಃ ಸ ಹಿ ಮಾಧವಃ' ಎಂದು ಪ್ರಖ್ಯಾತರಾದರು. ಇತ್ತೀಚೆಗೆ ನಾಗೋಜಿಭಟ್ಟರು ಎಲ್ಲ ಶಾಸ್ತ್ರಗಳಿಗೆ ಟಿಪ್ಪಣೆಗಳನ್ನು ಬರೆದರೆಂದು ಹೇಳುತ್ತಾರೆ. ಆದರೆ ಆ ಕಾಲವು ಈಗ ಮುಗಿದಿದೆ. ನಮ್ಮಲ್ಲಿ ೬ ಶಾಸ್ತ್ರಗಳೂ ೧೪ ವಿದ್ಯೆಗಳೂ ೬೪ ಕಲೆಗಳೂ ಪ್ರಖ್ಯಾತವಿದ್ದವು. ಆದರೆ ಈಗ ಶಾಸ್ತ್ರಗಳು ನೂರಾಗಿವೆ. ವಿದ್ಯೆಗಳ ಸಂಖ್ಯೆಯು ಸಾವಿರಕ್ಕೆ ಏರಿದೆ. ಕಲೆಗಳನ್ನಂತೂ ಎಣಿಸಲು ಶಕ್ಯವಿಲ್ಲ. ಹೀಗೆ ಜ್ಞಾನನಿಧಿಯು ಅಪಾರವಾಗಿ ಮೇಲೆ ಮೇಲೆ ನೋಡಲು ಕೂಡ ಅಶಕ್ಯವಾಗಿದೆ. ಆದರೆ, ಜ್ಞಾನಸಂಪನ್ನನಾಗದೆ, ಬಹುಶ್ರುತ ನಿರದೆ ತಲೆಯೆತ್ತಿ ಬಾಳುವದೇ ಈಗ ಕಠಿಣ. ಕೇವಲ ಒಂದೇ ಮಾರ್ಗವು

ಇಂದಿನ ಜಗತ್ತಿನಲ್ಲಿ ನಿರುಪಯೋಗ. ರಾಷ್ಟ್ರದ ದೃಷ್ಟಿಯಿಂದ ವಿಚಾರ ಮಾಡಿದರೂ ಕೂಡ ಜ್ಞಾನದಲ್ಲಿ ಹಿಂದುಳಿದ ರಾಷ್ಟ್ರವು ಸದ್ಯದ ಪರಿಸ್ಥಿತಿಯಲ್ಲಿ ಮುಂದುವರಿಯುವದೇ ಅಶಕ್ಯ.

ಇಂತಹ ಪರಿಸ್ಥಿತಿಯಲ್ಲಿ ಜ್ಞಾನದ ಸರ್ವಭಾಗಗಳನ್ನು ಸ್ವಲ್ಪದರಲ್ಲಿಯೇ ತಿಳಿಯುವಂತೆ ಮಾಡುವದು ಅವಶ್ಯವಿದೆ. ಬೇರೆ ಬೇರೆ ವಿಷಯಗಳ ವಿವರಣೆಯನ್ನು ಮಾಡಿಕೊಡುವ ಮೊದಲು ಜ್ಞಾನದ ಸರ್ವಕ್ಷೇತ್ರಗಳ ವಿಹಂಗಮನೋಟವು ಅವಶ್ಯವು. ಪ್ರವಾಸಿಯು ತಾನು ಕೈಕೊಳ್ಳಬೇಕಾದ ಪ್ರವಾಸದ ವರ್ಣನೆಯನ್ನು ನಕಾಶ ಹಾಗು ಕೈಪಿಡಿಗಳನ್ನು ಮೊದಲೇ ನೋಡಿದ್ದರೆ, ಪ್ರವಾಸವು ಸುಖಕರವಾಗುವಂತೆ ಜ್ಞಾನ ಮಂದಿರದಲ್ಲಿ ಕಾಲಿಡುವ ಮೊದಲು ಅದರ ರೂಪರೇಷೆಗಳನ್ನು ಅರಿಯುವದು ಆವಶ್ಯಕ. ಅದರಿಂದ ಆ ಮಂದಿರದಲ್ಲಿ ನಾವು ಸಂಚರಿಸುವಾಗ ಗೊಂದಲವೇಳಲಾರದು.

ಈ ಜ್ಞಾನನಿಧಿಯಲ್ಲಿ ಶಾಸ್ತ್ರಗಳೆಷ್ಟು? ಅವುಗಳ ವಿಷಯವೇನು? ಅವುಗಳ ಪರಸ್ಪರ ಸಂಬಂಧವೇನು ಇತ್ಯಾದಿ ಸಂಗತಿಗಳ ಸಂಕ್ಷಿಪ್ತ ದಿಗ್ದರ್ಶನವಾಗಬೇಕಾಗಿದೆ. ಇದರಿಂದ ಆಯಾ ಶಾಸ್ತ್ರದ ಮಹತ್ವ ಗೊತ್ತಾಗಿ, ಜ್ಞಾನದ ಯಾವ ಶಾಖೆಯಲ್ಲಿ ಅವುಗಳ ಸಮಾವೇಶವಾಗುವದು ಇತ್ಯಾದಿ ಸಂಗತಿಗಳು ತಿಳಿದು ಅಭ್ಯಾಸಕ್ಕೆ ಅನುಕೂಲವಾಗುವದು. ಮೊದಲು ಶಾಸ್ತ್ರಗಳ ವರ್ಗೀಕರಣ ಹಾಗು ಪರಿಗಣನೆಯನ್ನು ಮಾಡಿ ಮುಖ್ಯ ಶಾಸ್ತ್ರಗಳ ಸ್ವರೂಪವನ್ನು ನೋಡೋಣ. ವಿಷಯಾನುಸಾರವಾಗಿ ವರ್ಗೀಕರಿಸುವದೇ ವರ್ಗೀಕರಣದಲ್ಲಿ ಎಲ್ಲಕ್ಕೂ ಸುಲಭವಾದ ಪದ್ಧತಿಯು.

ಮಾನವನ ಚಿಕಿತ್ಸಕ ಬುದ್ಧಿಯೂ ನಿರೀಕ್ಷಣಶಕ್ತಿಯೂ ಅದ್ಭುತವಿವೆ. ವಿಶ್ವದ ಹಾಗೂ ವಿಶೇಷತಃ ಆಕಾಶದಲ್ಲಿಯ ಪ್ರಚಂಡ ತೇಜೋಗೋಲಗಳ ವಿಷಯವಾಗಿಯೂ ಕೂಡ ವಿಚಾರಮಾಡಿ ಜ್ಯೋತಿಷಶಾಸ್ತ್ರವನ್ನು ನಿರ್ಮಿಸಿದ್ದಾನೆ. ನಾವಿರುವ ಪೃಥ್ವಿಯು ಜ್ಯೋತಿಷಶಾಸ್ತ್ರದ ಕ್ಷೇತ್ರದಲ್ಲಿ ಬರುವ ಅಖಿಲಬ್ರಹ್ಮಾಂಡದಲ್ಲಿಯ ಒಂದುಕಣವು; ಆದರೆ ಈ ಪೃಥ್ವಿಯ ಮೇಲಿನ ನಿವಾಸಿಯೇ ಅಖಿಲಬ್ರಹ್ಮಾಂಡವನ್ನು ತಿಳಿಯಲೆತ್ನಿ

ಸುವ ಮಾನವನು. ಆದುದರಿಂದ ಅದರ ಮಹತ್ವವು ನಮಗೆ ಹೆಚ್ಚಾಗಿದೆ. ವಿಶ್ವದ ವಿಷಯಕ್ಕಿರುವ ಸಾಮಾನ್ಯಜ್ಞಾನಕ್ಕಿಂತಲೂ ಮನುಷ್ಯನು ಪೃಥ್ವಿಯ ವಿಷಯಕ್ಕೆ ಅನೇಕ ಶಾಸ್ತ್ರಗಳನ್ನೇ ನಿರ್ಮಿಸಿರುವನು. ಅವುಗಳಲ್ಲಿ ಮುಖ್ಯವಾದವು ಎರಡು. ಒಂದು ಭೂಗೋಲಶಾಸ್ತ್ರ ಇನ್ನೊಂದು ಭೂಗರ್ಭಶಾಸ್ತ್ರ. ಮೊದಲನೆಯದು ಭೂಪೃಷ್ಠದ ನೈಸರ್ಗಿಕ ರಚನೆ, ಮನುಷ್ಯನ ವಾಸಕ್ಕೆ ಇರುವ ಸಂಬಂಧವನ್ನು ಸೂಚಿಸುವದು. ಸಮುದ್ರಶಾಸ್ತ್ರ (Oceanology), ವಾಯುಮಾನಶಾಸ್ತ್ರ (Climatology), ಭೂವಿಭಾಜನಶಾಸ್ತ್ರ (Geodesy) ಇತ್ಯಾದಿ ಉಪಶಾಸ್ತ್ರಗಳು ಭೂಗೋಲಶಾಸ್ತ್ರಕ್ಕೆ ಸಂಬಂಧಪಟ್ಟವು. ಭೂಗರ್ಭಶಾಸ್ತ್ರವು ಪೃಥ್ವಿಯ ಅಂತರ್ಭಾಗದಲ್ಲಿಯ ರಚನೆಯ ವಿಶೇಷವಾಗಿ ಒಳಗಿರುವ ಮಣ್ಣಿನ ಥರಗಳು ಇವೇ ಮೊದಲಾದ ವಿಷಯಗಳನ್ನು ವರ್ಣಿಸುತ್ತದೆ. ಈ ಶಾಸ್ತ್ರಕ್ಕೆ ಖನಿಜಶಾಸ್ತ್ರ (minerology), ಧಾತುವಿಜ್ಞಾನ (metallurgy), ಜೀವಾವಶೇಷಶಾಸ್ತ್ರ (Palaeontology) ಇತ್ಯಾದಿ ಅನೇಕ ಶಾಸ್ತ್ರಗಳು ಉಪಾಂಗಗಳಾಗಿವೆ. ಇವುಗಳ ಮಹತ್ವವು ದಿನದಿನಕ್ಕೆ ಬೆಳೆಯಹತ್ತಿದೆ.

ಪೃಥ್ವಿಯ ವಿಷಯವಾಗಿ ಪೂರ್ಣವಾಗಿ ವಿಚಾರ ಮಾಡಿದನಂತರ ಅದರ ಮೇಲಿರುವ ವಸ್ತುಗಳ ವಿಷಯವಾಗಿ ವಿಚಾರಮಾಡುವದು ಕ್ರಮಪ್ರಾಪ್ತವಾಗುವದು. ಭೂಮಿಯ ಮೇಲಿನ ವಸ್ತುಗಳನ್ನು ನೋಡಿದರೆ, ಅದರಲ್ಲಿ ಜೀವ ಹಾಗು ಜಡ ಎಂದು ಎರಡು ಭಾಗಗಳು ಒಡೆದು ಕಾಣುತ್ತವೆ. ಜಡಸೃಷ್ಟಿಯಲ್ಲಿಯೂ ಇಬ್ಭಾಗವನ್ನು ಮಾಡಬಹುದು. ಮೊದಲನೇಯದು ದ್ರವ್ಯ; ಉಷ್ಣತೆ, ಬೆಳಕು, ವಿದ್ಯುತ್ ಮೊದಲಾದ ಶಕ್ತಿಗಳು ಎರಡನೇಯವು. ಈ ದ್ರವ್ಯ ಹಾಗು ಶಕ್ತಿಗಳ ಪರಸ್ಪರ ಸಂಬಂಧವನ್ನು ವಿವರಿಸುವ ಶಾಸ್ತ್ರವೇ ಪದಾರ್ಥವಿಜ್ಞಾನಶಾಸ್ತ್ರವು (Physics). ಈ ಶಾಸ್ತ್ರವು ಪ್ರಚಂಡವಿದ್ದು ಅತ್ಯಂತ ಮಹತ್ವದ್ದಿದೆ. ಆಧುನಿಕ ಸುಖಸಾಮಗ್ರಿಗಳೆಲ್ಲವೂ ಈ ಶಾಸ್ತ್ರದಿಂದಲೇ ಹುಟ್ಟಿವೆ. ಪದಾರ್ಥಗಳ ಗತಿ ಹಾಗು ಸ್ಥಿತಿಗಳನ್ನು ವಿಚಾರಮಾಡಿ, ಗತಿಶಾಸ್ತ್ರ (Dynamics), ಸ್ಥಿತಿಶಾಸ್ತ್ರ (Statics), ವಹಗತಿಶಾಸ್ತ್ರ (Hydrodynamics), ವಹ

ಸ್ಥಿತಿಶಾಸ್ತ್ರ (Hydrostatics) ಮೊದಲಾದ ಅನೇಕ ಉಪಶಾಸ್ತ್ರಗಳನ್ನು ಶಾಸ್ತ್ರಜ್ಞರು ನಿರ್ಮಿಸಿದ್ದಾರೆ. ಈ ಎಲ್ಲ ಶಾಸ್ತ್ರಗಳಿಗೆ ಗಣಿತ ಶಾಸ್ತ್ರದ ನೆರವು ಬೇಕು. ಗಣಿತಶಾಸ್ತ್ರವು ಬಹು ಪ್ರಾಚೀನವಿದೆ. ವ್ಯವಹಾರದ ಆವಶ್ಯಕತೆಯಿಂದ ಇದು ಜನ್ಮ ತಾಳಿತು. ಮುಂದೆ ಜ್ಯೋತಿಷದಲ್ಲಿಯೂ ಭೂಮಾಪನದಲ್ಲಿಯೂ ಇದರ ಬೆಳವಣಿಗೆಯಾಯಿತು. ಜ್ಯೋತಿಷಕ್ಕೆ ಮೊದಲಿನ ಕಾಲದಿಂದಲೂ ಗಣಿತದ ಉತ್ತಮ ಜ್ಞಾನ ಬೇಕಾಗುತ್ತದೆ. ಉತ್ತಮ ಗಣಿತಜ್ಞರಾದ ಭಾರತೀಯರೆಲ್ಲರೂ ಜ್ಯೋತಿಷಿಗಳಿದ್ದರು. ಮುಂದೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಗಣಿತಶಾಸ್ತ್ರದ ಬೆಳೆವಣಿಗೆಯು ಸ್ವತಂತ್ರ ರೀತಿಯಿಂದಾಯಿತು. ಸರ್ವ ಶಾಖೆಗಳಲ್ಲಿಯೂ ಅದು ಪರಿಪೂರ್ಣಾವಸ್ಥೆಗೆ ಮುಟ್ಟಿದೆ ಎಂದು ಹೇಳಬಹುದು.

ಪದಾರ್ಥವಿಜ್ಞಾನದಂತೆ, ಮನುಷ್ಯನ ಸುಖಸಾಧನೆಗಳನ್ನು ಹೆಚ್ಚಿಸಿದ ಇನ್ನೊಂದು ಶಾಸ್ತ್ರವೆಂದರೆ, ರಸಾಯನಶಾಸ್ತ್ರವು (Chemistry). ಪದಾರ್ಥಗಳ ಅಂತರ್ಗತ ಘಟನೆ ಮತ್ತು ಆ ಘಟನೆಗಳಲ್ಲಿ ಆಗುವ ಹೆಚ್ಚುಕಡಿಮೆಗಳಿಂದುಂಟಾಗುವ ಬೇರೆ ವಸ್ತುವಿನ ವರ್ಣನೆಯನ್ನು ಮಾಡುವದೇ ರಸಾಯನದ ಕ್ಷೇತ್ರವು. ಇದಕ್ಕೂ ಪದಾರ್ಥವಿಜ್ಞಾನಕ್ಕೂ ನಿಕಟಸಂಬಂಧವಿದೆ.

## ಜೀವಶಾಸ್ತ್ರ

ಜಡಪದಾರ್ಥಗಳನ್ನು ವಿವರಿಸುವ ಶಾಸ್ತ್ರಗಳನ್ನು ಹೇಳಿದ್ದಾಯಿತು. ಇನ್ನು ಎರಡನೇ ಭಾಗವೆಂದರೆ, ಜೀವಕೋಟಿಯ ವಿಷಯವಾಗಿ. ಜೀವಕೋಟಿಯನ್ನು ಸರ್ವರೀತಿಯಿಂದ ವಿಚಾರಿಸುವ ಶಾಸ್ತ್ರವೇ ಜೀವಶಾಸ್ತ್ರ (Biology). ಸರ್ವಜೀವಿಗಳ ವಿಷಯವಾಗಿ ಈ ಶಾಸ್ತ್ರದಲ್ಲಿ ಸಾಮಾನ್ಯವಿಚಾರಗಳು ಬರುವದರಿಂದ ಮುಗಿಯಲಿಲ್ಲ. ಜೀವಸೃಷ್ಟಿಯಲ್ಲಿ ಎರಡು ಭಾಗಗಳಿವೆ. ವನಸ್ಪತಿಗಳು, ಹಾಗು ಪ್ರಾಣಿಗಳು. ಈ ಎರಡೂ ಜೀವನಗಳಲ್ಲಿ ಅನೇಕ ಸಂಗತಿಗಳು ಸಾಮಾನ್ಯವಿದ್ದರೂ ಅವುಗಳ ರಚನೆ, ವಿಶ್ವಾಸ, ವ್ಯಾಪಾರಗಳಲ್ಲಿ ಬಹಳ ಅಂತರವಿದೆ. ಅರ್ಥಾತ್ ವನಸ್ಪತಿಗಳ ವಿಚಾರಮಾಡುವ ವನಸ್ಪತಿಶಾಸ್ತ್ರ (Botany), ಹಾಗು ಪ್ರಾಣಿಗಳ

ವಿಚಾರವನ್ನು ಮಾಡುವ ಪ್ರಾಣಿಶಾಸ್ತ್ರ (Zoology) ಎಂಬ ಎರಡು ಶಾಖೆಗಳು ಹುಟ್ಟಿವೆ.

ಜೀವಕೋಟಿಯಲ್ಲಿ ಮಾನವನೇ ಶ್ರೇಷ್ಠನ ಅರ್ಥಾತ್ ಜೀವ ಶಾಸ್ತ್ರದ ನಂತರ ಮಾನವನ ವಿಚಾರವನ್ನು ಮಾಡುವದೇ ಎರಡನೇ ಮೆಟ್ಟಲು. ಶಾಸ್ತ್ರವನ್ನು ನಿರ್ಮಿಸುವವನು ಮಾನವನೇ ಇರುವದರಿಂದ ಸ್ವಂತ ಜೀವನದ ವಿಷಯವಾಗಿ ಸೂಕ್ಷ್ಮ ರೀತಿಯಿಂದ ನಿರೀಕ್ಷಿಸಿ ಮಾನವೀ ಜೀವನದ ಸಮ್ಯಕ್‌ಜ್ಞಾನ ಮಾಡಿಕೊಡುವ ಅನೇಕ ಶಾಸ್ತ್ರ ಗಳನ್ನು ನಿರ್ಮಿಸುವದು ಸ್ವಾಭಾವಿಕವಿದೆ. ಇಸಾಪ ನೀತಿಯಲ್ಲಿಯ ಸಿಂಹ ಹಾಗು ಮನುಷ್ಯನ ಕತೆಯಂತೆಯೇ ಇದು ಇದೆ. ಒಂದುವೇಳೆ ಸಿಂಹವೇ ಶಾಸ್ತ್ರವನ್ನು ರಚಿಸುತ್ತಿದ್ದರೆ, ಮನುಷ್ಯನನ್ನು ಕೂಡ ಪ್ರಾಣಿ ವರ್ಗದಲ್ಲಿ ಸೇರಿಸಿ, ಪ್ರಾಣಿಶಾಸ್ತ್ರವನ್ನು ನಿರ್ಮಿಸುತ್ತಿತ್ತು.. ಮತ್ತು ಸಿಂಹದ ಜೀವನವನ್ನು ಮಾತ್ರ ಸರ್ವ ವಿಧದಿಂದ ಸೂಕ್ಷ್ಮ ರೀತಿಯಿಂದ ನಿರೀಕ್ಷಿಸಿ, ಅನೇಕ ಶಾಸ್ತ್ರಗಳನ್ನು ರಚಿಸುತ್ತಿದ್ದಿತು. ಇರಲಿ, ಮಾನವನೇ ಶಾಸ್ತ್ರನಿರ್ಮಾಣಕನಾದುದರಿಂದ ಅವನದೇ ಸಾಮ್ರಾಜ್ಯವಾಗಿದೆ.

ನಮ್ಮ ವೇದಾಂತದಲ್ಲಿಯ ಆತ್ಮತತ್ವವೊಂದನ್ನು ಬಿಟ್ಟರೆ, ಮಾನವನ ಶರೀರ ಹಾಗು ಮನ ಈ ಎರಡೇ ಘಟಕಗಳು ಕಾಣುತ್ತವೆ. ಶರೀರ ಹಾಗು ಮನಸ್ಸಿನ ಸಂಬಂಧವು ನಿಕಟವಿದ್ದರೂ ಎರಡೂ ಘಟಕಗಳ ಗುಣ ಧರ್ಮಗಳು ತೀರ ಭಿನ್ನವಿವೆ. ಇವುಗಳ ವಿಷಯವಾಗಿ ಶರೀರಶಾಸ್ತ್ರ ಹಾಗು ಮಾನವಶಾಸ್ತ್ರಗಳೆಂದು ಎರಡು ಭಿನ್ನಶಾಸ್ತ್ರಗಳೇ ನಿರ್ಮಾಣ ವಾಗಿವೆ. ಶರೀರಶಾಸ್ತ್ರದಲ್ಲಿ, ಶರೀರದ ಅಂತರ್ಗತ ರಚನೆಯನ್ನು ವಿವರಿ ಸುವ ಶರೀರರಚನಾಶಾಸ್ತ್ರ (Anotomy) ಹಾಗು ಶರೀರದ ಘಟಕ ಗಳ ಗುಣಧರ್ಮ, ಅವುಗಳ ಕ್ರಿಯೆ, ಹಾಗು ವ್ಯಾಪಾರ ಇವುಗಳನ್ನು ವಿವೇಚಿಸುವ ಶರೀರವ್ಯಾಪಾರಶಾಸ್ತ್ರ (physiology) ಈ ಎರಡು ಮುಖ್ಯವಾದವುಗಳು. ಇವೆರಡೂ ಜೀವನಶಾಸ್ತ್ರದಲ್ಲಿ ಅಡಕವಾಗು ವವು. ಯಾಕೆಂದರೆ, ಸರ್ವ ಜೀವಿಗಳಿಗೆ ಶರೀರವು ಇದ್ದೇ ಇದೆ. ಆ ಶಾಸ್ತ್ರದಲ್ಲಿ ಅದರ ವಿಮರ್ಶೆ ಆಗಲೇಬೇಕು.

ಇವೆಲ್ಲವೂ ಶರೀರವು ನಿರೋಗಿಯಿದ್ದಾಗಿನ ಮಾತಾಯಿತು. ಶರೀರ

ದಲ್ಲಿ ಏನಾದರೂ ವಿಕೃತಿಯಾದರೆ, ಆಗ ಶರೀರ ಸ್ಥಿತಿಯು ಹೇಗಿರುವದೆಂಬುದನ್ನು ವಿವರಿಸುವ ಶಾಸ್ತ್ರಕ್ಕೆ 'ಶರೀರವಿಕೃತಿಶಾಸ್ತ್ರ (pathology) ವೆನ್ನುವರು. ಅದರ ಮುಂದಿನ ಶಾಸ್ತ್ರವೆಂದರೆ, ರೋಗನಿವಾರಣಶಾಸ್ತ್ರ. ಔಷಧಿಗಳ ಗುಣಧರ್ಮವನ್ನು ಹೇಳುವ, ಪ್ರತ್ಯಕ್ಷ ರೋಗಕ್ಕೆ ಉಪಚಾರಮಾಡುವ ಶಾಸ್ತ್ರ (Therapeutics). ಹೀಗೆ ಬೇನೆಗಳನ್ನು ಕಳೆಯುವ ಅನೇಕ ಶಾಸ್ತ್ರಗಳಿವೆ. ಅವೆಲ್ಲವೂ 'ವೈದ್ಯಕ' ವೆಂಬುದರಲ್ಲಿ ಸೇರುತ್ತವೆ. ಇವೆಲ್ಲ ರೋಗನಿವಾರಣೋಪಾಯಗಳಾದವು. ಆದರೆ ರೋಗವೇ ನಿರ್ಮಾಣವಾಗದಂತೆ, ಶರೀರವನ್ನಿಟ್ಟುಕೊಳ್ಳುವ ಶಾಸ್ತ್ರಕ್ಕೆ (Hygiene) ಎನ್ನುವರು. ಇದಕ್ಕೆ ನಮ್ಮಲ್ಲಿ ಆರೋಗ್ಯಶಾಸ್ತ್ರವೆನ್ನುವರು.

ಶರೀರದ ವ್ಯಾಪಾರಕ್ಕಿಂತಲೂ ಮನಸ್ಸಿನ ವ್ಯಾಪಾರಗಳು ಅನೇಕ ವಿಧ, ಗೂಢ ಹಾಗು ಮನೋರಂಜಕವಿರುತ್ತವೆ. ಮನಸ್ಸಿನ ಸ್ವರೂಪ ಹಾಗು ಅದರ ವ್ಯಾಪಾರ ಇವೆರಡನ್ನೂ ವಿಚಾರಮಾಡುವ ಶಾಸ್ತ್ರಕ್ಕೆ (Phychology) ಮಾನಸಶಾಸ್ತ್ರವೆನ್ನುವರು. ಈ ಶಾಸ್ತ್ರವು ಮಹತ್ವದ್ದಿದ್ದು ಆಧುನಿಕ ಪ್ರಯೋಗಗಳಿಂದ ದಿನದಿನಕ್ಕೆ ಬೆಳೆಯುತೊಡಗಿದೆ. ಮೊದಲು ಗೊತ್ತಿದ್ದ ಸಂಗತಿಗಳಿಂದ ಗೊತ್ತಿಲ್ಲದ ಸಂಗತಿಗಳ ಜ್ಞಾನ ಮಾಡಿಕೊಡುವ ಶಾಸ್ತ್ರವೆಂದರೆ ತರ್ಕಶಾಸ್ತ್ರವು (Logic). ಯಾವ ಬುದ್ಧಿಯ ವ್ಯಾಪಾರದಿಂದ ಈ ಜ್ಞಾನವಾಗುವದೋ ಆ ವ್ಯಾಪಾರಕ್ಕೆ ಅನುಮಾನವೆನ್ನುವರು. ತರ್ಕವನ್ನು ಹೇಗೆ ಮಾಡಬೇಕು? ಎರಡನೆಯವರ ತರ್ಕವು ಸರಿಯಿದೆಯೋ ಇಲ್ಲವೋ ಎಂಬ ಈ ಎಲ್ಲ ಸಂಗತಿಗಳನ್ನು ತರ್ಕಶಾಸ್ತ್ರವು ಹೇಳುತ್ತದೆ.

ಭಾವನಾವಶವಾಗುವ ಹಾಗು ಸೌಂದರ್ಯದಿಂದ ಆಕರ್ಷಿಸಲ್ಪಡುವ ಮನಸ್ಸಿನ ವಿವೇಚನೆಯನ್ನೂ ಅನೇಕರು ಮಾಡಿದ್ದಾರೆ. ಅದಕ್ಕೆ ರಸಶಾಸ್ತ್ರ ಅಥವಾ ಸೌಂದಯುಶಾಸ್ತ್ರ (Aesthetics) ವೆನ್ನುವರು. ಶಿಲ್ಪ, ಸಂಗೀತ, ವಾಙ್ಮಯ ಇತ್ಯಾದಿ ಲಲಿತಕಲೆಗಳೆಲ್ಲ ಇದರ ಕ್ಷೇತ್ರದಲ್ಲಿ ಬರುತ್ತವೆ. ಅರ್ಥಾತ್ ವಾಙ್ಮಯದಲ್ಲಿಯ ಸೌಂದರ್ಯನಿರೀಕ್ಷಣ ಹಾಗು ಸ್ಪಷ್ಟೀಕರಣ ಮಾಡುವ ವಿಮರ್ಶೆ (Literary criticism) ಹಾಗು

ಅಲಂಕಾರ (Rhetoric) ಗಳು ಸೌಂದರ್ಯಶಾಸ್ತ್ರದಲ್ಲಿಯೇ ಅಡಕವಾಗುತ್ತವೆ.

ಮಾನವನ ಮನಸ್ಸು ಸುಸಂಸ್ಕೃತವಾಗಿ ಕಾರ್ಯಕ್ಷಮವಾಗುವಂತೆಯೂ ಶಾಸ್ತ್ರಗಳ ಜ್ಞಾನವು ಮನುಷ್ಯನಿಗೆ ಚೆನ್ನಾಗಿ ತಿಳಿಯುವಂತೆಯೂ ಮಾಡುವ ಶಾಸ್ತ್ರಕ್ಕೆ 'ಶಿಕ್ಷಣಶಾಸ್ತ್ರ'ವೆನ್ನುವರು. ಇದೂ ಮಾನಸಶಾಸ್ತ್ರದ ಆಧಾರದ ಮೇಲೆಯೇ ರಚಿಸಲ್ಪಟ್ಟಿರುತ್ತದೆ. ಶಿಕ್ಷಣ ಶಾಸ್ತ್ರದಲ್ಲಿ ಪ್ರವೀಣರೂ ಅಂತಃಕರಣಪೂರ್ವಕವಾಗಿ ವಿದ್ಯಾರ್ಥಿಗಳ ಕಲ್ಯಾಣವಾಗಬೇಕೆನ್ನುವ ಬುದ್ಧಿಯುಳ್ಳವರೂ ಆದ ಶಿಕ್ಷಕರ ಅಭಾವದ ಮೂಲಕ ಹಿಂದೀ ರಾಷ್ಟ್ರಕ್ಕೆ ಭಯಂಕರ ಹಾನಿಯಾಗತೊಡಗಿದೆ.

ಭಾಷೆಯು ಮನೋವ್ಯಾಪಾರವನ್ನೇ ಅವಲಂಬಿಸಿರುವದರಿಂದ ಭಾಷಾಶಾಸ್ತ್ರದ ಉಲ್ಲೇಖವನ್ನು ಇಲ್ಲಿ ಮಾಡಲು ಅಡ್ಡಿಯಿಲ್ಲ. ಭಾಷೆಯು ಮುಖದ ಮುಖಾಂತರ ಹೊರಬೀಳುವದರಿಂದ ಅದಕ್ಕೆ ಶರೀರ ಶಾಸ್ತ್ರದ ಸಂಬಂಧವು ಬಹಳ ಬರುತ್ತದೆ. ಅದರಂತೆ ಸಮಾಜದ ಹಾಗು ವ್ಯಕ್ತಿಯ ವ್ಯವಹಾರಗಳು ಭಾಷೆಯ ಮುಖಾಂತರವಾಗಿಯೇ ಸಾಗುವದರಿಂದ ಸಮಾಜಶಾಸ್ತ್ರಕ್ಕೂ ಭಾಷಾಶಾಸ್ತ್ರಕ್ಕೂ ಸಂಬಂಧವಿದೆ.

ಮನುಷ್ಯನ ಮಾನಸಿಕ ಶಕ್ತಿಗಳ ವಿಚಾರವಾಯಿತು. ಶಾಸ್ತ್ರಜ್ಞರು ಗುಂಪುಕಟ್ಟಿಕೊಂಡು ಜೀವಿಸುವ ಪ್ರಾಣಿಗಳ ಒಂದು ವರ್ಗವನ್ನೇ ಮಾಡಿದ್ದಾರೆ. ಅದರಲ್ಲಿ ಮಾನವನು ಬರುವನು. ಮನುಷ್ಯನು ಎಷ್ಟೋ ಸಾವಿರ ವರ್ಷಗಳಿಂದ ಸಮಾಜಪ್ರಿಯನಾಗಿದ್ದಾನೆ. ಅರ್ಥಾತ್ ಮಾನವನು ಕಟ್ಟಿದ ಸಮಾಜದ ಹಾಗು ವ್ಯಕ್ತಿಗಳ ಸಂಬಂಧವನ್ನು ಹೇಳುವ ಅನೇಕ ಶಾಸ್ತ್ರಗಳು ಹುಟ್ಟಿವೆ. ಈ ಸುಧಾರಣೆಯ ಯುಗದಲ್ಲಿಯಂತೂ ವ್ಯಕ್ತಿಗಳ ಪರಸ್ಪರ ಸಂಬಂಧವು ಅತ್ಯಂತ ತೊಡಕಿನದಾಗಿದೆ. ಅದರಂತೆ ಸಮಾಜ ಸಮಾಜಗಳ ಸಂಬಂಧವು ಕೂಡ ತೊಡಕಿನದೂ ಮಹತ್ವದ್ದೂ ಆಗಿದೆ. ಈ ಎಲ್ಲ ವ್ಯವಹಾರಗಳನ್ನು ಶಾಸ್ತ್ರಶುದ್ಧವಾಗಿ ಅರಿಯುದಹೊರತು ಒಳ್ಳೇ ರೀತಿಯಿಂದ ಬಾಳಲು ಬಾರದು. ವ್ಯಕ್ತಿವ್ಯಕ್ತಿಗಳ ಸಂಬಂಧದ ಒಳಿತು ಕೇಡುಗಳನ್ನು ನಿರ್ಣಯಿಸುವ ಶಾಸ್ತ್ರಕ್ಕೆ 'ನೀತಿಶಾಸ್ತ್ರ' (Ethics) ವೆನ್ನುವರು. ನೀತಿಯು ವ್ಯಕ್ತಿವ್ಯಕ್ತಿಗಳ ಸಂಬಂಧದ ಪ್ರಶ್ನೆಯಿದ್ದರೂ

ಮನುಷ್ಯನ ವೈಯ್ಯಕ್ತಿಕ ವಿವೇಕವನ್ನು ಅವಲಂಬಿಸಿದ್ದರೂ ಅದನ್ನು ಮಾನಸಶಾಸ್ತ್ರದಲ್ಲಿ ಸೇರಿಸುವ ಪರಿಪಾಠವುಂಟು. ಆದರೆ ಸಮಾಜದ ಕಲ್ಯಾಣಕ್ಕಾಗಿ ಮನುಷ್ಯನು ತನ್ನ ಸದಸದ್ವಿವೇಕ ಬುದ್ಧಿಗೆ ಸಂಬಂಧವಿಲ್ಲದ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಅವುಗಳನ್ನು ವಿವರಿಸುವ ಶಾಸ್ತ್ರಕ್ಕೆ 'ಶಾಸನಶಾಸ್ತ್ರ' (Jurisprudence) ವೆನ್ನುವರು. ಕಾಯಿದೆಗಳು ಈ ಶಾಸನಶಾಸ್ತ್ರದ ವಿವಿಧರೂಪಗಳು. ಈ ಕಾಯಿದೆಗಳ ಅಧಿಕಾರ ನಡೆಸುವ, ಸರ್ವ ಸಮಾಜಗಳನ್ನು ನಿಯಂತ್ರಿಸುವ ಒಂದು ಸಂಸ್ಥೆಯು ಸಮಾಜದಲ್ಲಿರುತ್ತದೆ.ಅದೇ ರಾಜಸಂಸ್ಥೆಯು.ರಾಜಸಂಸ್ಥೆಯ ಸಂಬಂಧವಾಗಿ, ತಾತ್ವಿಕದೃಷ್ಟಿಯಿಂದ ವಿವರಿಸುವ ಶಾಸ್ತ್ರಕ್ಕೆ ರ್‍ಯಾಜ್ಯ ಶಾಸ್ತ್ರ (Politics)ವೆನ್ನುವರು. ಸಮಾಜದ ರಾಜಕೀಯ ಸ್ಥಿತಿಯೊಡನೆಯೇ ಸಾಂಪತ್ತಿಕಸ್ಥಿತಿಯೂ ಬರುತ್ತದೆ. ಇದನ್ನು ವಿವರಿಸುವ ಶಾಸ್ತ್ರಕ್ಕೆ ಅರ್ಥಶಾಸ್ತ್ರ ( Economics ) ವೆನ್ನುವರು.

ಈ ಶಾಸ್ತ್ರಗಳಲ್ಲದೆ ಸಮಾಜದ ಬೇರೆ ಬೇರೆ ಅಂಗಗಳ ವಿಚಾರವು ಹೊಸದಾಗಿ ಪ್ರಾರಂಭವಾಗಿದೆ. ಅವುಗಳ ವಿಷಯವಾಗಿಯೂ ಶಾಸ್ತ್ರಗಳು ಹುಟ್ಟಿರುವವಲ್ಲದೆ ಅವುಗಳ ಮಹತ್ವವೂ ಹೆಚ್ಚಾಗತೊಡಗಿದೆ. ಈ ಹೊಸ ಶಾಸ್ತ್ರಗಳಲ್ಲಿ 'ಮಾನವಶಾಸ್ತ್ರ'(Anthropology) ಮೊದಲನೆಯದು. ಪ್ರಾಚೀನ ಕಾಲದಲ್ಲಿಯ ಮಾನವ ಹಾಗು ಅವನ ಸಂಸ್ಕೃತಿ, ಜೀವನಗಳನ್ನು ವಿವರಿಸುತ್ತದೆ. ಮಾನವರಲ್ಲಿಯ ಭಿನ್ನ ಭಿನ್ನ ವಂಶಗಳು ಆ ವಂಶಗಳ ಸ್ವರೂಪ, ಹಾಗು ಅವುಗಳ ಸ್ಥಿತಿಗಳನ್ನು ವಿಚಾರಿಸುವ ಶಾಸ್ತ್ರಕ್ಕೆ 'ಮಾನವವಂಶಶಾಸ್ತ್ರ' (Ethnology) ವೆನ್ನುವರು. ಇದು ಮಾನವಶಾಸ್ತ್ರದ ಒಂದು ಭಾಗವು. ಅದರಂತೆಯೇ 'ಪುರಾಣವಸ್ತು ಶಾಸ್ತ್ರ' ವು(Archaeology) ಪೂರ್ವಕಾಲದಲ್ಲಿಯ ಮನುಷ್ಯ ನಿರ್ಮಿತ ವಸ್ತುಗಳ ಅವಶೇಷಗಳನ್ನು ಹುಡುಕಿತೆಗೆದು ಅವುಗಳಿಂದ ಪ್ರಾಚೀನ ಇತಿಹಾಸವನ್ನು ನಿರ್ಮಿಸುವದೇ ಈ ಶಾಸ್ತ್ರದ ಕಾರ್ಯವು. ವಿಶ್ವಸನೀಯ ಲೇಖಗಳ ಆಧಾರದಿಂದ ರಚಿತವಾದ ಪೂರ್ವವೃತ್ತಾಂತವು ಇತಿಹಾಸವೆನಿಸುವದು. ಹೀಗೆ, ಇತಿಹಾಸ, ಹಾಗು ಪುರಾಣವಸ್ತುಶಾಸ್ತ್ರಗಳ ಕ್ಷೇತ್ರಗಳು ಭಿನ್ನ ವಿರುತ್ತವೆ.

ಮಾನಸಶಾಸ್ತ್ರವು ಮನುಷ್ಯನು ಒಂದು ಪ್ರಾಣಿಯೆಂದು ತಿಳಿದು ಅವನ ಪ್ರಗತಿಯ ವಿಷಯಕ್ಕೆ ವಿಚಾರ ಮಾಡಿದರೆ, ಸಮಾಜಶಾಸ್ತ್ರವು (Sociology) ಆಧುನಿಕ ಸುಸಂಸ್ಕೃತ ಸಮಾಜದ ವಿಷಯಕ್ಕೆ ವಿಚಾರಮಾಡುತ್ತದೆ. ಸಮಾಜಲ್ಲಿಯ ವ್ಯಕ್ತಿಯು ಶರೀರದಿಂದಲೂ ಮನಸ್ಸಿನಿಂದಲೂ ಚನ್ನಾಗಿ ಇದ್ದಂಥವರು ಹೇಗೆ ಹುಟ್ಟುವರು ಎಂಬುದನ್ನು ವಿಚಾರಮಾಡುವ ಶಾಸ್ತ್ರಕ್ಕೆ 'ಸುಪ್ರಜಾಜನನಶಾಸ್ತ್ರ' (Eugenics) ವೆನ್ನುವರು. ಇದು ಅತ್ಯಂತ ಮಹತ್ವದ ಸಾಮಾಜಿಕ ಶಾಸ್ತ್ರವು. ಸಮಾಜಶಾಸ್ತ್ರವು ಸದ್ಯದ ಇರುವಿಕೆಯನ್ನು ಹೇಳಿದರೆ ಸುಪ್ರಜಾಜನನಶಾಸ್ತ್ರವು ನಮ್ಮ ಭವಿಷ್ಯವನ್ನು ವಿಚಾರಿಸುವದು. ಇದಲ್ಲದೆ, ಅಪರಾಧಶಾಸ್ತ್ರ (Criminology) ಹಾಗು ಅಪರಾಧಗಳಿಗೆ ದಂಡ ವಿಧಿಸುವ ದಂಡಶಾಸ್ತ್ರ (penology) ಇವು ಕೂಡ ಸಮಾಜಶಾಸ್ತ್ರದ ಶಾಖೆಗಳೇ. ಇದಲ್ಲದೆ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರಗಳ ಸಂಬಂಧವು ಸಮಾಜಶಾಸ್ತ್ರಕ್ಕೆ ನಿಕಟವಾಗಿದೆ. ಹೀಗೆ ಹೇಳುತ್ತ ಹೋದರೆ ಯಾವ ಶಾಸ್ತ್ರಕ್ಕೆ ಯಾವ ಶಾಸ್ತ್ರದ ಸಂಬಂಧವಿಲ್ಲ! ಎಲ್ಲ ಶಾಸ್ತ್ರಗಳ ಸಂಬಂಧವನ್ನು ಹಚ್ಚಲು ಬರುವದು. ಭೂಗೋಲ ಶಾಸ್ತ್ರಕ್ಕೆ ಇತ್ತ ಭೂಗರ್ಭಶಾಸ್ತ್ರದ ಸಂಬಂಧವು ಒಂದೆಡೆಗೆ ಬಂದರೆ, ಇನ್ನೊಂದೆಡೆಗೆ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಇತ್ಯಾದಿಗಳ ಸಂಬಂಧವೂ ಇದೆ. ಸಮಾಜಶಾಸ್ತ್ರದ ಹಾಗು ಮಾನವ ವಿಷಯಕ ಸರ್ವಶಾಸ್ತ್ರಗಳ ನಿಕಟಸಂಬಂಧವಿದ್ದರೆ, ಜೀವಶಾಸ್ತ್ರಕ್ಕೆ ಎಲ್ಲವುಗಳ ಸಂಬಂಧವಿದೆ.

ಜ್ಯೋತಿಷ್ಯಶಾಸ್ತ್ರಕ್ಕೂ ಹಾಗು ಭೂಗರ್ಭಶಾಸ್ತ್ರ ಹಾಗು ಸಮಾಜಶಾಸ್ತ್ರಗಳಿಗೂ ನಿಕಟಸಂಬಂಧವಿರುವದನ್ನು ಬಹು ಸ್ವಲ್ಪ ಜನರು ಒಪ್ಪಬಹುದು. ಆದರೆ ಈ ಮಾತು ಸತ್ಯವಿದೆ. ಸೂರ್ಯ, ಚಂದ್ರರ ಗತಿಯ ಮೇಲೆಯೇ ಪೃಥ್ವಿಯಲ್ಲಿಯ ಪರಿಳಿತಗಳೂ ಮಳೆಬೆಳೆಗಳೂ ಅವಲಂಬಿಸಿರುತ್ತವೆ. ಅದರಂತೆಯೇ ಭೂಗರ್ಭದಲ್ಲಿರುವ ಮಣ್ಣಿನ ಥರಗಳ ಹಾಗು ಗುಣಧರ್ಮಗಳ ಮೇಲೆಯೇ ಭೂಪೃಷ್ಠದ ಮೇಲಿನ ನದಿಗಳು, ಬೈಲುಗಳು, ಭೂಮಿಯ ಬೆಳೆ, ಖನಿಜಸಂಪತ್ತು ಮೊದಲಾದವುಗಳು ಅವಲಂಬಿಸಿರುತ್ತವೆ. ಈ ಎಲ್ಲ ಮೇಲಿನ ಸಂಗತಿಗಳನ್ನು ಮಾನವನ ಜೀವನವು

ಅವಲಂಬಿಸಿರುತ್ತದೆ. ಅಂದಮೇಲೆ ಜ್ಯೋತಿಷ್ಯಶಾಸ್ತ್ರಕ್ಕೂ, ಭೂಗರ್ಭ ಹಾಗು ಸಮಾಜಶಾಸ್ತ್ರಕ್ಕೂ ಸಂಬಂಧವಿಲ್ಲೆಂದು ಹೇಳುವ ಬಗೆ ಹೇಗೆ ? ಇಷ್ಟೆಲ್ಲ ವಿವರಣೆಯ ಉದ್ದೇಶವಿಷ್ಟೇ ! ಸರ್ವ ಜ್ಞಾನವು ಒಂದೇ ಇದೆ. ಮಾನವನು ತನ್ನ ಅನುಕೂಲತೆಗಾಗಿ ಶಾಸ್ತ್ರಗಳನ್ನು ನಿರ್ಮಿಸಿದ್ದಾನೆ. ಸೃಷ್ಟಿಯ ವ್ಯಾಪಾರದ ಗೂಢವನ್ನು ಸ್ಪಷ್ಟೀಕರಿಸಲು ಎಲ್ಲ ಶಾಸ್ತ್ರಗಳು ಪ್ರವೃತ್ತವಾಗಿವೆ.

ಸರ್ವ ಶಾಸ್ತ್ರಗಳು ಕೂಡಿಯಾದರೂ ಈ ಸೃಷ್ಟಿಯ ಸ್ವರೂಪ, ಹಾಗು ಕಾರ್ಯ–ಕಾರಣಗಳ ಸಮ್ಯಕ್‌ಜ್ಞಾನವನ್ನು ಕೊಡಬಲ್ಲವೇ ? ಪ್ರತಿಯೊಂದು ಶಾಸ್ತ್ರವು ತನ್ನ ಕ್ಷೇತ್ರದಲ್ಲಿ ಅಲ್ಪಸ್ವಲ್ಪ ಬೆಳಕನ್ನು ಕೆಡವ ಬಹುದು. ಆದರೆ ಈ ಪ್ರಚಂಡವಾದ ವಿಶ್ವವು ಕಣ್ಣು ಮುಂದೆ ನಿಂತಾಗ ಈ ಮಿಣಿಮಿಣಿ ಬೆಳಕಿನಿಂದ, ಅರ್ಧಮರ್ಧ ಜ್ಞಾನದಿಂದ ಉಪಯೋಗ ವೇನು ? ಮದುವೆಗಾಗಿ ಕಾತುರಳಾದ ತರುಣಿಗೆ, ಐದುಐದು ವರುಷದ ಐದು ಚಿಕ್ಕ ಬಾಲಕರನ್ನು ತೋರಿಸಿದರೆ ಸಮಾಧಾನವಾಗಬಹುದೇ ? ಅದ ರಂತೆಯೇ ಅಖಂಡವಿಶ್ವದ ಮೂಲಕ್ಕೇ ಕೈಹಾಕಿದತಾತ್ವಿಕ-ಜಿಜ್ಞಾಸು ವಿಗೆ ಈ ಹರುಕುಮುರುಕು ಭೌತಿಕ ವಿದ್ಯೆಯಿಂದ ಹೇಗೆ ತೃಪ್ತಿಯಾಗ ಬೇಕು ? ಜಗತ್ತಿನ ಹುಟ್ಟು ಹೇಗೆ ? ಯಾಕೆ ಹುಟ್ಟಿತು ? ಜಗತ್ತಿನ ಈ ಆಟವು ಏತಕ್ಕಾಗಿ ? ಇವೆಲ್ಲ ಪ್ರಶ್ನೆಗಳಿಗೆ ಉತ್ತರವನ್ನೀಯಬಾರದ ಈ ಶಾಸ್ತ್ರಗಳನ್ನು ದಾಟಿ ತತ್ವ-ಜಿಜ್ಞಾಸೆಯು ಮುಂದೆ ಸಾಗಿ, ಸೃಷ್ಟಿಯ ಸ್ವರೂಪದ ಹಾಗು ಆದಿಕಾರಣದ ವಿಷಯವಾಗಿ ಮಾಡಿದ ವಿಚಾರಕ್ಕೆ ತತ್ವಜ್ಞಾನ (Metaphysics) ವೆನ್ನುವರು. 'ಮೆಟಾಫಿಜಿಕ್ಸ' ಈ ಶಬ್ದದ ಧಾತ್ವರ್ಥವು 'ಭೌತಿಕಶಾಸ್ತ್ರ'ದನಂತರದ ಮುಂದಿನ ಹೆಜ್ಜೆ ಎಂದು ಇಂಗ್ಲೀಷಿನಲ್ಲಿ ಈ ಶಾಸ್ತ್ರಕ್ಕೆ (Philosophy) ಎಂದೂ ಅನ್ನುತ್ತಾರೆ. ತತ್ವಜ್ಞಾನವು ಶಾಸ್ತ್ರದ ಶಾಸ್ತ್ರವೆಂದು ವರ್ಣಿಸಲ್ಪಡುತ್ತದೆ.

ಆದರೆ ಈ ತತ್ವಜ್ಞಾನವನ್ನು ಅಭ್ಯಾಸಮಾಡಿದನಂತರವೂ ಮುಂದೆ ಏನು ? ಎಂಬ ಪ್ರಶ್ನೆಯು ಉಳಿದೇ ಉಳಿಯುತ್ತದೆ. ಜಗತ್ತಿನ ಈ ಒಗಟವು ಯಾರಿಗೂ ಒಡೆದಿಲ್ಲ. ತತ್ವಜ್ಞಾನದ ವಿಚಾರಕ್ಕೂ ಕೂಡ ಮಾನವನ ಬುದ್ಧಿಯೆ ಆಧಾರವಲ್ಲವೇ ? ಎಲ್ಲಿ ಸರ್ವಸೃಷ್ಟಿಯು ಅರ್ಥಾತ್ ಮಾನವ

ಬುದ್ಧಿಸಹಿತವಾದ ಸೃಷ್ಟಿಯ ಮೂಲವನ್ನು ಗೊತ್ತುಹಚ್ಚುವದಿದೆಯೋ ಅಲ್ಲಿ ಮಾನವಬುದ್ಧಿಯಿಂದ ನಿರ್ಮಿತವಾದ ತತ್ವಜ್ಞಾನದ ಪಾಡೇನು ? ಅದು ಬಹಳವಾದರೆ, ಜಗತ್ತಿನ ಕಾರಣದ ವಿಷಯವಾಗಿ, ಸ್ವರೂಪದ ವಿಷಯವಾಗಿ ಒಂದೆರಡು ತರ್ಕಗಳನ್ನು ಮಾಡಬಲ್ಲದು. '**ಯೇನ ವಿಜ್ಞಾತೇನ ಸರ್ವಮಿದಂ ವಿಜ್ಞಾತಂ ಭವತಿ**' ಯಾವುದನ್ನು ತಿಳಿಯುವದರಿಂದ ಸರ್ವವೂ ತಿಳಿಯುವದೋ, ಅಂತಹ ಸರ್ವಸಂಶಯಪರಿಹಾರಕವಾದ 'ಪರಮತತ್ವದ' ಜ್ಞಾನವು ತತ್ವಜ್ಞಾನದಿಂದ ಆಗುವದಿಲ್ಲ. ಅವನ ಹಸಿವು ಹಿಂಗುವದಿಲ್ಲ.

ಬುದ್ಧಿಯ ಬಲದಿಂದ ಇಷ್ಟು ದೂರ ಬಂದಸಂತರವೂ ಪೂರ್ಣ ಸಮಾಧಾನದ, ನಿರಾಮಯಸ್ಥಿತಿಯು ಸಿಗದ ಮೇಲೆ ಮುಂದೇನು ಎಂಬ ಪ್ರಶ್ನೆಯು ಉಳಿಯುವದು ಸ್ವಾಭಾವಿಕವಿದೆ. ಆಗ ಮನುಷ್ಯನು ಶ್ರದ್ಧೆಯನ್ನು ಆಶ್ರಯಿಸುವನು.

**ಶ್ರದ್ಧಾವಾನ್ ಲಭತೆ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥** ಗೀತಾ ೪-೩೯.

ಗೀತೆಯ ವಚನದಂತೆ, ಶ್ರದ್ಧಾವಂತನಿಗೆ, ಸತ್ಯಜ್ಞಾನವಾಗಿ ಅವನು ಪರಮಶಾಂತಿಯನ್ನು ಹೊಂದುತ್ತಾನೆ. ಸಾಧಕನು ಶ್ರದ್ಧೆಯಿಂದ ಅನುಸರಿಸಬೇಕಾದ ಅನೇಕ ಸಂಪ್ರದಾಯಗಳು ಉತ್ಪನ್ನವಾಗಿವೆ. ಈ ಪಾರಮಾರ್ಥಿಕ ಸಂಪ್ರದಾಯಗಳು ಅಂತಃಸ್ಫೂರ್ತಿಯ (Intuition) ಆಧಾರದ ಮೇಲೆ ರಚಿಸಲ್ಪಟ್ಟಿವೆ. ಮಹಾಪುರುಷರು ತಮ್ಮ ಅಂತಃಸ್ಫೂರ್ತಿಯಿಂದ ವಿಶಿಷ್ಟಮಾರ್ಗವನ್ನು ಉಪದೇಶಿಸುತ್ತಾರೆ. ಆ ಮಾರ್ಗದಂತೆ, ಶ್ರದ್ಧೆಯಿಂದ ಸಾಧಕರು ಸಾಗುತ್ತಾರೆ. ಇಂಗ್ಲೀಷಿನಲ್ಲಿ ಈ ಮೋಕ್ಷಮಾರ್ಗಕ್ಕೆ (Theology) ಈಶ್ವರವಿಷಯಕಶಾಸ್ತ್ರವೆನ್ನುತ್ತಾರೆ. ಆದರೆ ನಾವು ವರ್ಣಿಸಿದ ಶಾಸ್ತ್ರದ ವ್ಯಾಖ್ಯೆಯ ಚೌಕಟ್ಟಿನಲ್ಲಿ ಈ ತತ್ವಜ್ಞಾನವು ಕೂಡುವದಿಲ್ಲ. ಪ್ರತ್ಯಕ್ಷ ನಿರೀಕ್ಷಣ, ತರ್ಕಶುದ್ಧ ವಿಚಾರ ಹಾಗು ಉಪಪತ್ತಿಗಳು ಶಾಸ್ತ್ರದ ತಳಹದಿಗಳು. ಇದರ ವಿರುದ್ಧವಾಗಿ, ಶ್ರದ್ಧೆ,ವಿಶ್ವಾಸಗಳು ಪಾರಮಾರ್ಥಿಕ ಜ್ಞಾನದ ಮೂಲಗಳು. ಮಾನವನ ಸರ್ವ ಶಕ್ತಿಗಳು ದಣಿದ ಮೇಲೆ, ಜಗನ್ಮಾತೆಯ ತೊಡೆಯಲ್ಲಿ, ವಿಶ್ವಾಸದಿಂದ ಮಲ

ಗಿದ ಪೂರ್ಣ ಸಮಾಧಾನಕ ನಿದ್ರೆಯಿದು. ಶ್ರದ್ಧೆಯಿಂದ ಚಿರಶಾಂತಿಯು ದೊರೆಯುವದೆಂದು ಅನೇಕ ಅನುಭವಿಗಳ ಅನುಭವವು. ಇದರಿಂದ ತಾರ್ಕಿಕ ಬುದ್ಧಿಯ ಆಧಾರದ ಮೇಲೆ ರಚಿಸಲ್ಪಟ್ಟ ಪ್ರಕೃತಿ ಶಾಸ್ತ್ರಗಳು ನಿರುಪಯೋಗಿಯೆಂದು ಅರ್ಥವಲ್ಲ. ಇಷ್ಟೇ ಅಲ್ಲ—ಈ ಎಲ್ಲ ಶಾಸ್ತ್ರಗಳ ಜ್ಞಾನವಾದ ನಂತರವೇ ಪರಮಾರ್ಥದ ಅಧಿಕಾರ ಬರುವದು. ಸರ್ವ ಶಾಸ್ತ್ರಗಳು—ವಿದ್ಯೆಗಳು—ಕಲೆಗಳು ಮಾನವನ ಬುದ್ಧಿಯ ಆಟಗಳು. ಸೃಷ್ಟಿಯ ಸಂಸಾರದಲ್ಲಿ ಮಾನವನು ಹೂಡಿದ ಆಟಗಳಿವು. ಬಾಲಕನು ದಿನವೆಲ್ಲ ಆಡಿ ಸಂಜೆಗೆ ಬಂದು ತಾಯಿಯ ತೊಡೆಯ ಮೇಲೆ ಮಲಗಿದರೂ ತಾಯಿಯು ಆ ಹುಡುಗನ ಆಟಗಳನ್ನೂ ಉಲಕೋಚಿತನವನ್ನೂ ಮರೆಯುವದಿಲ್ಲ. ಇಷ್ಟೇ ಅಲ್ಲ ಅದರಿಂದ ಆಕೆಗೆ ಆನಂದವಾಗುತ್ತದೆ. ಅದರಿಂದ ಸೃಷ್ಟಿಯ ಆದಿಕಾರಣವಾದ ಶಕ್ತಿಗೆ, ಮನುಷ್ಯನ ಬುದ್ಧಿಯ ಆಟಗಳನ್ನೂ ಉಲಕೋಚಿತನವನ್ನೂ ಮಾಡಿದ ಬಾಲಕನ ಪ್ರಕೃತಿಯು ಸದೃಢವಾಗುತ್ತದೆ. ಹಾಗು ರಾತ್ರಿ ನಿದ್ರೆಯು ಚನ್ನಾಗಿ ಹತ್ತುತ್ತದೆ. ಶಾಸ್ತ್ರಗಳ ಆಟಗಳನ್ನು ಆಡಿ ಮಾನವನು ತನ್ನ ಬುದ್ಧಿಯನ್ನು ಸದೃಢ ಹಾಗು ಪ್ರಭಾವಶಾಲಿಯನ್ನಾಗಿ ಮಾಡಿದ್ದಾನೆ. ಇದನ್ನು ಕಂಡು ಆದಿ ಶಕ್ತಿಯು ವಾತ್ಸಲ್ಯದಿಂದ ಮಾನವನ ಕೌತುಕವನ್ನು ಮಾಡಬಹುದು. ಹಾಗು ಅವನಿಗೆ ಪೂರ್ಣ ಶಾಂತಿಯ ವರವನ್ನು ಕೊಡಬಹುದು.

---

# ಎಂಟನೆಯ ಮೆಟ್ಟಲು

## ಶಾಸ್ತ್ರಗಳ ರೂಪರೇಷೆಗಳು, ಜಡವಿಜ್ಞಾನ.

### (೧) ಜ್ಯೋತಿಷ್ಯಶಾಸ್ತ್ರ

ಅದ್ಭುತವಾದ ವಿಶ್ವದ ರಚನೆಯ ವಿಷಯವಾಗಿ ವಿಚಾರಮಾಡುವ ಜ್ಯೋತಿಷ್ಯಶಾಸ್ತ್ರವು ಅತ್ಯಂತ ಪ್ರಾಚೀನಕಾಲದಲ್ಲಿಯೇ ಹುಟ್ಟಿದೆ. ಮಾನವನಿಗೆ ತನ್ನ ಸುತ್ತುಮುತ್ತಲಿನ ಪರಿಸ್ಥಿತಿಯನ್ನು ನಿರೀಕ್ಷಿಸುವ ಬುದ್ಧಿಯು ಉತ್ಪನ್ನವಾದಾಗಲೇ ಹಗಲು ರಾತ್ರಿಗಳು, ಸೂರ್ಯೋದಯ-ಸೂರ್ಯಾಸ್ತಗಳು, ಚಂದ್ರನ ಕ್ಷಯ-ವೃದ್ಧಿಗಳು, ಅಸಂಖ್ಯಾತ ನಕ್ಷತ್ರಗಳು ಅವನ ಕಣ್ಣಿಗೆ ಬಿದ್ದು, ಅವನು ಆಶ್ಚರ್ಯಚಕಿತನಾಗಿ, ಅವುಗಳ ಕಡೆಗೆ ಕುತೂಹಲ ದೃಷ್ಟಿಯಿಂದ ನೋಡಿರಲು ಸಾಕು. ಅವನಲ್ಲಿ ಚಿಕಿತ್ಸಕ ಬುದ್ಧಿಯು ಹುಟ್ಟುವ ಮೊದಲೇ ಆಕಾಶದಲ್ಲಿಯ ಈ ಚಮತ್ಕಾರಗಳು ಅವನ ಕಲ್ಪನಾಶಕ್ತಿಯನ್ನು ಅರಳಿಸಿ, ಅನೇಕ ಅದ್ಭುತರಮ್ಯ ದಂತಕಥೆಗಳನ್ನು ಕಟ್ಟಲು ಹಚ್ಚಿರಬೇಕು. ಇಂತಹ ಕಥೆಗಳು ವೇದದಲ್ಲಿ ಅನೇಕ ಕಾಣುತ್ತವೆ. (ಸೂರ್ಯನು ಸುವರ್ಣಮಯಹಂಸನು, ಅವನು ಉಷೆಯ ಬೆನ್ನು ಹತ್ತಿ ತಿರುಗುವ ಕಾಮುಕನು ಇತ್ಯಾದಿ.) ಪುರಾಣಗಳಲ್ಲಿಯೂ ಇಂತಹ ಕಥೆಗಳುಂಟು. ಚಂದ್ರನು ಅಮೃತವನ್ನು ಕುಡಿದು ದಿನಾಲು ಬೆಳೆಯುತ್ತಾನೆ. ಬೃಹಸ್ಪತಿಯ ತಾರಿಕೆಯನ್ನು ಚಂದ್ರನು ವಶಮಾಡಿಕೊಂಡು ಆಕೆಯಲ್ಲಿ ಅತಿಶಯವಾಗಿ ಆಸಕ್ತನಾದುದರಿಂದ ಅವನಿಗೆ ಕ್ಷಯ ಹತ್ತಿತು ಇತ್ಯಾದಿ ರಮಣೀಯ ಕಥೆಗಳು ಮೊದಲು ನಮ್ಮಲ್ಲಿ ಹುಟ್ಟಿದವು.

ಇಂತಹ ಕವಿಕಲ್ಪನೆಗಳಿಂದ ಜಿಜ್ಞಾಸುಗಳಿಗೆ ಸಮಾಧಾನವಾಗುವ ಬಗೆ ಹೇಗೆ? ಆಕಾಶದಲ್ಲಿಯ ಚಮತ್ಕಾರಗಳನ್ನು ಕಂಡು ಅವರ ಚಿಕಿ

ತ್ಸಕ ಬುದ್ಧಿಯು ಜಾಗ್ರತವಾಗಿರಬೇಕು. ಅವರು ಆಕಾಶದಲ್ಲಿಯ ಜ್ಯೋತಿಗಳನ್ನು ಸೂಕ್ಷ್ಮರೀತಿಯಿಂದ, ದೃಢಮನಸ್ಸಿನಿಂದ ನಿರೀಕ್ಷಿಸಿದಂತೆ ಅವರಿಗೆ ಸೂರ್ಯಚಂದ್ರಾದಿಗಳ ಗತಿಗಳ ವಿಷಯವಾಗಿ ಜ್ಞಾನೋದಯವಾಗಿರಬೇಕು. ಇದೇ ಜ್ಯೋತಿಷಶಾಸ್ತ್ರದ ತಳಹದಿಯು. ಇದು ಮೊದಲಿನ ವಸ್ತುಸ್ಥಿತಿಯು. ಮುಂದೆ ಜ್ಯೋತಿಷ್ಯದ ಜ್ಞಾನ ಸಂಗ್ರಹವಾಗಿ ಕಾಲಗಣನೆಯ ಪದ್ಧತಿ ಅಸ್ತಿತ್ವದಲ್ಲಿ ಬಂದನಂತರ, ಸ್ವಾಭಾವಿಕವಾಗಿಯೇ ಇಂತಹ ಕಾರ್ಯವನ್ನು ಇಂತಹ ಗ್ರಹಸ್ಥಿತಿಯಲ್ಲಿಯೇ ಮಾಡಬೇಕೆಂಬ ಧಾರ್ಮಿಕ ಕಲ್ಪನೆಯು ಅದರಲ್ಲಿ ಸೇರಿತು. ಕೂಡಲೇ ಗ್ರಹಗಳಿಗೆ ದೇವತೆಗಳು ಕಲ್ಪಿಸಲ್ಪಟ್ಟವು. ಹೀಗೆ ಧರ್ಮವು ಜ್ಯೋತಿಷ್ಯದಲ್ಲಿ ಹೊಕ್ಕು, ಆ ಶಾಸ್ತ್ರದ ಅಭ್ಯಾಸಕ್ಕೆ ಮೊದಮೊದಲು ಶಕ್ತಿಯನ್ನೀಯಿತು. ಅದರಂತೆಯೇ ಗ್ರಹಾದಿಗಳ ಭವಿಷ್ಯತ್ಕಾಲದ ಸ್ಥಿತಿಗತಿಗಳನ್ನು ಅರಿಯಲು ಶಕ್ಯವಿದ್ದರೆ, ಮಾನವನ ಸ್ಥಿತಿಗತಿಗಳು ನಮಗೆ ಏಕೆ ತಿಳಿಯಬಾರದು ? ಎಂಬ ಬುದ್ಧಿಯು ಹುಟ್ಟಿ ಗ್ರಹಗಳ ಸ್ಥಿತಿಯೇ ಮನುಷ್ಯನ ಸ್ಥಿತಿಯ ಸೂಚಕವಾಗಬಹುದೇ ? ಎಂಬ ಪ್ರಯತ್ನಕ್ಕೆ ಪ್ರಾರಂಭವಾಯಿತು. ಹೀಗೆ ಫಲಜ್ಯೋತಿಷ್ಯವು ಜನ್ಮತಾಳಿ ಜ್ಯೋತಿಷ್ಯಶಾಸ್ತ್ರಕ್ಕೆ ಹೆಚ್ಚಿನ ಚಾಲನೆಯನ್ನು ಪ್ರಾರಂಭಕ್ಕೆ ಕೊಟ್ಟಿತು.

**ಮಿಸರಿ ಜನರ ಜ್ಯೋತಿಷ್ಯ**

ಪಾಶ್ಚಾತ್ಯರಿಗೆ ಜ್ಯೋತಿಷ್ಯದ ಪರಂಪರೆಯು ಇಜಿಪ್ತ, ಬಾಬಿಲೋನಗಳಿಂದ ಬಂದಿದೆ. ಇಜಿಪ್ತದ ಅರ್ಥಾತ್ ಮಿಸರಿ ಜನರ ಜ್ಯೋತಿಷ್ಯಜ್ಞಾನವು ತೀರ ಕಡಿಮೆ. ಅವರು ಸೂರ್ಯೋಪಾಸಕರಿದ್ದುದರಿಂದ ತಮ್ಮ ಕಾಲಗಣನೆಯನ್ನು ಸೌರಮಾನದಂತೆ ಮಾಡುತ್ತಿದ್ದರು. ಕರ್ಕಸಂಕ್ರಮಣವು ಅವರ ವರ್ಷಾರಂಭವು. ಒಂದು ಕರ್ಕಸಂಕ್ರಮಣದಿಂದ ಇನ್ನೊಂದು ಕರ್ಕಸಂಕ್ರಮಣದ ವರೆಗೆ ಸಂಪೂರ್ಣ ಸೂರ್ಯಪ್ರದಕ್ಷಿಣೆಯ ಕಾಲವು ಅವರಿಗೆ ಗೊತ್ತಿರಲಿಲ್ಲ. ವರ್ಷಕ್ಕೆ ೧೨ ತಿಂಗಳು, ತಿಂಗಳಿಗೆ ೩೦ ದಿವಸದ ಕಾಲವಿಭಾಗವನ್ನು ಮಾತ್ರ ಅವರು ಪಾಲಿಸುತ್ತಿದ್ದರು. ಆದರೆ ಒಂದು ಸೌರವರ್ಷದ ನಿಜವಾದ ಅವಧಿಯು ೩೬೫ಕ್ಕ ದಿವಸವಿದ್ದುದರಿಂದ ಪ್ರತಿವರ್ಷ ಅವರ ವರ್ಷಾರಂಭವು ೫ಕ್ಕ ದಿವಸ ಹಿಂದೆ

ಬೀಳಹತ್ತಿತು. ಈ ತಪ್ಪು ಅವರಿಗೆ ತಿಳಿದೊಡನೆಯೇ ಪ್ರತಿ ವರ್ಷದ ಕೊನೆಗೆ ೫ ದಿವಸಗಳನ್ನು ಕೂಡಿಸಲು ಉಪಕ್ರಮಿಸಿದರು. ಆದರೂ ¼ ದಿವಸದ ತಪ್ಪು ಹಾಗೇ ಉಳಿಯಿತು. ಮಿಸರಿ ಜನರಿಗೆ ಈ ತಪ್ಪನ್ನು ತಿದ್ದಿಕೊಳ್ಳಲಾಗಲಿಲ್ಲ. ಮುಂದೆ ಕ್ರಿ. ಶ. ಪೂ. ೨ನೇ ಶತಕದಲ್ಲಿ ಅಲೇಕ್ಸಾಂಡ್ರಿಯಾದಲ್ಲಿಯ ಗ್ರೀಕ ಪಂಡಿತರು ೪ ವರ್ಷಕ್ಕೆ ೧ ದಿವಸ ವನ್ನು ಹೆಚ್ಚು ಕೂಡಿಸುವ ಪದ್ಧತಿಯನ್ನು ಗೊತ್ತುಮಾಡಿ ಈ ತಪ್ಪನ್ನು ತಿದ್ದಿದರು. ಜ್ಯೂಲಿಯಸ ಸೀಝರನು ಪ್ರಾರಂಭಿಸಿದ ಪಂಚಾಂಗದಲ್ಲಿ ಈ ನಾಲ್ಕುವರ್ಷಕ್ಕೆ ಒಂದ ದಿನ ಹೆಚ್ಚು ಹಿಡಿಯುವ (ಲೀಫ ಇಯರ) ಪದ್ಧತಿಯನ್ನು ಹಾಕಿದನು. ಅದೇ ಇನ್ನೂ ಯುರೋಪದಲ್ಲಿ ನಡೆ ಯುತ್ತಲಿದೆ.

ಬಾಬಿಲೋನಿಯನ್ನರು ಮಿಸರಿ ಜನಾಂಗಕ್ಕಿಂತಲೂ ಜ್ಯೋತಿಷ್ಯ ವನ್ನು ಹೆಚ್ಚಾಗಿ ಅರಿತಿದ್ದರು. ಅವರು ಸೌರಮಾನದ ವರ್ಷ ಹಾಗು ಚಾಂದ್ರಮಾನದ ತಿಂಗಳುಗಳನ್ನು (ತಿಂಗಳಿಗೆ ೩೦ ದಿವಸ) ಮನ್ನಿಸು ತ್ತಿದ್ದರು. ವರ್ಷಕ್ಕೆ ಕಡಿಮೆ ಬೀಳುವ ೫¼ ದಿವಸಗಳನ್ನು ತುಂಬುವ ದಕ್ಕಾಗಿ ೬ ವರ್ಷಕ್ಕೊಮ್ಮೆ ಅಧಿಕಮಾಸವನ್ನು ಹಿಡಿಯುತ್ತಿದ್ದರು. ಕ್ರಾಂತಿವೃತ್ತವನ್ನು ಅಂದರೆ ಸೂರ್ಯನ ಗಮನಮಾರ್ಗವನ್ನು ೧೨ ವಿಭಾಗ ಮಾಡಿದ್ದರು. ಅವೇ ಜಗತ್ತಿನಲ್ಲೆಲ್ಲ ರಾಶಿಗಳೆಂದು ಪ್ರಸಿದ್ಧ ವಿವೆ. ಸಪ್ತಗ್ರಹಗಳು ಅವರಿಗೆ ಚನ್ನಾಗಿ ಗೊತ್ತಿದ್ದವಲ್ಲದೆ, ೭ ದಿವಸ ಗಳಿಗೆ ಒಂದು ವಾರವೆನ್ನಹತ್ತಿದರು. ಕೊನೆಯ ವಾರ ಬಿಡುವು ಬಿಡುವ ಪದ್ಧತಿಯನ್ನು ಇವರೇ ಪ್ರಾರಂಭಿಸಿದವರು. ಅವರ ನಂತರ ಹಿಬ್ರೂ ಜನರೂ ಅವರಿಂದ ಕ್ರಿಸ್ತಿಗಳೂ ಇದನ್ನು ಸ್ವೀಕರಿಸಿದರು. ಇಂದು ಬಿಡುವಿನ ಪದ್ಧತಿಯು ಜಗತ್ತನ್ನೇ ವ್ಯಾಪಿಸಿದೆ.

ಮಿಸರಿ ಹಾಗು ಬಾಬಿಲೋನ ಸಂಸ್ಕೃತಿಯ ಹಕ್ಕು ಗ್ರೀಕರ ಕಡೆಗೆ ಬಂದಿತು. ಅರ್ಥಾತ್ ಗ್ರೀಕರು ತಮ್ಮ ಸ್ವಭಾವಕ್ಕನುಸರಿಸಿ ಜ್ಯೋತಿಷ್ಯದಲ್ಲಿ ಆಶ್ಚರ್ಯಕಾರಕ ಕ್ರಾಂತಿಗಳನ್ನು ಉಂಟುಮಾಡಿದರು. ಯಾವುದೇ ಸಂಗತಿಯನ್ನು ತರ್ಕಶುದ್ಧರೀತಿಯಿಂದ ವಿಚಾರಮಾಡಿ ಅದಕ್ಕೆ

ಶಾಸ್ತ್ರದ ಸ್ವರೂಪವನ್ನು ಕೊಡುವದು ಗ್ರೀಕರ ವೈಶಿಷ್ಟ್ಯವು. ಈಗಿನಂತೆ ಆ ಕಾಲಕ್ಕೆ ಅವಲೋಕಿಸಲು ಸೂಕ್ಷ್ಮ ಯಂತ್ರಗಳು ಇಲ್ಲದಿದ್ದರೂ ಕೂಡ, ಆಧುನಿಕ ಜ್ಯೋತಿಷಿಯಾದ ಕೊಪರ್ನಿಕಸನು ಶೋಧಿಸಿದ ಶೋಧವನ್ನು ೧೮ ನೂರು ವರ್ಷಗಳ ಹಿಂದೆಯೇ ಒಬ್ಬ ಗ್ರೀಕ ಪಂಡಿತನು ಗೊತ್ತುಹಚ್ಚಿದ್ದನು. ಜ್ಯೋತಿಷ್ಯಶಾಸ್ತ್ರದ ಇತಿಹಾಸದಲ್ಲಿ ಈ ಸಂಗತಿಯೇನು ಕಡಿಮೆ ಬೆಲೆಯುದ್ದಲ್ಲ. ಕ್ರಿ. ಶ. ಪೂ. ೬ನೇ ಶತಮಾನದಲ್ಲಿ ಮಹಾನ್ ಜ್ಯೋತಿಷಿಯಾದ ಪಾಯಥಾಗೋರಸನು ಪೃಥ್ವಿಯು ದುಂಡಗಿದ್ದು ಅದು ಸೂರ್ಯನ ಸುತ್ತಲೂ ತಿರುಗುತ್ತದೆ ಎಂದು ಗೊತ್ತುಹಚ್ಚಿದನು. ಆದರೆ ಅರಿಸ್ಟಾಟಲನು ಪೃಥ್ವಿಯು ಸ್ಥಿರವಿರುವದೆಂದು ಆಗ್ರಹದಿಂದ ಪ್ರತಿಪಾದಿಸಿದನು. ಅವನ ನಂತರ ಅರಿಸ್ಟಾರ್ಕಸನು (ಕ್ರಿ.ಪೂ. ೨೫೦) ಪೃಥ್ವಿಯು ಸ್ಥಿರವಿರದೆ ಸೂರ್ಯನ ಸುತ್ತಲೂ ತಿರುಗುತ್ತದೆ ಎಂದು ಮತ್ತೆ ಪ್ರತಿಪಾದಿಸಿದನು. ಆದರೆ ದುರ್ದೈವದಿಂದ ಈ ಕ್ರಾಂತಿಕಾರಕ ವಿಚಾರವು ಆ ಕಾಲಕ್ಕೆ ಮಾನ್ಯವಾಗಲಿಲ್ಲ. ಮುಂದೆ ಅದೇ ಸಿದ್ಧಾಂತವು ಕೊಪರ್ನಿಕಸನಿಂದ ಮುಂದೆ ಬಂದಿತು. ಮುಂದೆ ಎರಾಟೋಸ್ಥೇನೀಸನು ಪೃಥ್ವಿಯ ಪರಿಘವನ್ನು ಅಳೆಯುವ ಹಾಗು ಕ್ರಾಂತಿವೃತ್ತವು ವಿಷವೃತ್ತವನ್ನು ಎಷ್ಟು ಅಂಶದಿಂದ ಛೇದಿಸುವದೆಂಬುದನ್ನು ಹುಡುಕಿ ತೆಗೆದನು. ಅವನ ನಂತರ ಕ್ರಿ.ಶ.ಪೂ. ೧೬೦ ಸುಮಾರಿಗೆ, ಹಿಪಾರ್ಕಸನೆಂಬ ಪ್ರಖ್ಯಾತ ಜ್ಯೋತಿಷಿಯು ಜನ್ಮವೆತ್ತಿದನು. ಅವನು ಸೂರ್ಯನ ಮಾರ್ಗಚ್ಯುತಿಯ ಉಪಪತ್ತಿಯು ಅಪಚಕ್ರ (epicycles) ಸಿದ್ಧಮಾಡಿ ತೋರಿಸಿದನು. ಸೌರಮಾನ ವರ್ಷದ ಎಣಿಕೆಮಾಡಿ ಸರಿಪಡಿಸಿದನು. ಸಂಪಾತಚಲನೆಗಳ ಶೋಧಮಾಡಿದ್ದಲ್ಲದೆ ಆಕಾಶದಲ್ಲಿಯ ೧೦೮೦ ನಕ್ಷತ್ರಗಳನ್ನು ತೋರಿಸುವ ನಕಾಶವನ್ನು ಸಿದ್ಧಮಾಡಿದನು. ಇವನೇ ಗ್ರೀಕರ ಕೊನೆಯ ಪ್ರಖ್ಯಾತ ಜ್ಯೋತಿಷಿಯು. ಇವನ ನಂತರ ಟಾಲೆಮಿಯು ಬಂದನು. ಅವನು ಇದ್ದ ಜ್ಞಾನ ಸಂಗ್ರಹಮಾಡಿದನೇ ಹೊರ್ತು ಹೊಸ ಶೋಧಗಳನ್ನು ಮಾಡಲಿಲ್ಲ. ಕೊಪರ್ನಿಕಸನು ಬರುವ ವರೆಗೆ ಅಂದರೆ ಸುಮಾರು ೧೪೦೦ ವರ್ಷ ಟಾಲೆಮಿಯ ಗ್ರಂಥವೇ ಯುರೋಪಿಯರಿಗೆ ಆಧಾರವಾಗಿತ್ತು.

## (೨) ಜ್ಯೋತಿರ್ಗಣಿತ

ಜ್ಯೋತಿಷ್ಯಶಾಸ್ತ್ರದಲ್ಲಿ ಜ್ಯೋತಿರ್ಗಣಿತ, ತಾತ್ವಿಕಜ್ಯೋತಿಷವೆಂಬೆರಡು ಅಂಗಗಳು. ಕಾಲಗಣನೆಗೆ ಸೂರ್ಯಚಂದ್ರ ಮೊದಲಾದ ಗ್ರಹಗಳ ದೈನಂದಿನ, ಮಾಸಿಕ, ವಾರ್ಷಿಕ ಗತಿಗಳನ್ನು ಸರಿಯಾಗಿ ಸೂಕ್ಷ್ಮವಾಗಿ ಮಾಡುವ ಗಣಿತಕ್ಕೆ ಜ್ಯೋತಿರ್ಗಣಿತವೆನ್ನುವರು. ಮಿಸರಿ, ಬಾಬಿಲೋನ, ಭಾರತರಾಷ್ಟ್ರಗಳಲ್ಲಿ ಜ್ಯೋತಿರ್ಗಣಿತವು ಚನ್ನಾಗಿ ಫಲಿಸಿತ್ತು; ಗ್ರೀಕರು ಚನ್ನಾಗಿ ಬೆಳೆಸಿದರು.. ಆದರೆ ಅವರು ಅಷ್ಟಕ್ಕೆ ನಿಲ್ಲದೆ ಪೃಥ್ವಿಯ ಆಕಾರ, ಅದರ ಪರಿಘ, ಗ್ರಹಮಾಲೆಗಳ ಸ್ವರೂಪ ಇತ್ಯಾದಿಗಳ ಮಹತ್ವದ ಶೋಧನೆಗೆ ಕೈಹಾಕಿ ತಾತ್ವಿಕ ಜ್ಯೋತಿಷದ ತಳಹದಿಯನ್ನು ಹಾಕಿದರು.

### ತಾತ್ವಿಕ ಜ್ಯೋತಿಷ್ಯ

ಆಕಾಶದಲ್ಲಿಯ ಜ್ಯೋತಿಗಳ ಸ್ವರೂಪಜ್ಞಾನ ಮಾಡಿಕೊಡುವದೇ ತಾತ್ವಿಕಜ್ಯೋತಿಷ್ಯದ ಕಾರ್ಯವು. ಇದರ ಉಪಯೋಗವು ವ್ಯವಹಾರದಲ್ಲಿ ತೀರ ಕಡಿಮೆ. ಗ್ರೀಕರು ಇದರಲ್ಲಿಯೂ ತುಸು ಬೆಳೆವಣಿಗೆಯನ್ನು ಮಾಡಿದರೂ ಅದೆಲ್ಲವು ಕಾಲನಿಗೆ ತುತ್ತಾಯಿತು. ನಿಜವಾದ ತಾತ್ವಿಕ ಜ್ಯೋತಿಷ್ಯದುದಯವು ಕೊಪರ್ನಿಕಸನಿಂದಲೇ (ಇ. ಸ. ೧೫೪೩) ಎಂದು ಹೇಳಬಹುದು. ಅಂದಿನಿಂದ ಅವ್ಯಾಹತವಾಗಿ ಅದು ಬೆಳೆಯುತ್ತಿದೆ. ಕೇವಲ ಗ್ರಹಮಾಲೆಗಳನ್ನೇ ಏಕೆ? ಇಡೀ ವಿಶ್ವದ ರಚನೆಗೆ ಕೈಹಾಕಿ ಅನೇಕ ಆಶ್ಚರ್ಯಕಾರಕ ಶೋಧಗಳನ್ನು ಶಾಸ್ತ್ರಜ್ಞರು ಮಾಡಿದ್ದಾರೆ. ಕೊಪರ್ನಿಕಸ, ಕೆಪ್ಲರ, ಗ್ಯಾಲಿಲಿಯೋ, ನ್ಯೂಟನ್, ಹರ್ಶಲ, ಲಾಗ್ರಾಂಜ, ಲಾಪ್ಲಾಸ, ಆ್ಯಡಾಮ್ಸ, ಲಾಕಿಯರ ಮೊದಲಾದ ಶೋಧಕರ ಹೆಸರುಗಳು ಜ್ಯೋತಿಷ್ಯಶಾಸ್ತ್ರದ ಇತಿಹಾಸದಲ್ಲಿ ವಿಖ್ಯಾತವಿವೆ.

### ವಿಶ್ವದ ಅದ್ಭುತ ರಚನೆ

ಅಖಿಲಾಂಡಕೋಟಿ ಬ್ರಹ್ಮಾಂಡವು ಅನಾದ್ಯನಂತವಾದ ಆಕಾಶದಲ್ಲಿ ತುಂಬಿದೆಯೆಂದು ಆಧುನಿಕ ಸಂಶೋಧನಗಳಿಂದ ಗೊತ್ತಾಗಿದೆ. ಈ ಆಕಾಶದಲ್ಲಿ ಒಂದರಿಂದೊಂದು ಎಷ್ಟೋ ಪರಾರ್ಧ ಮೈಲುಗಳ ಅಂತರಗಳಲ್ಲಿ ಅತ್ಯಂತ ತೇಜಸ್ವಿಗಳಾದ ಪ್ರಚಂಡ ಗೋಲಗಳಿವೆ. ಅವುಗಳಿಗೆ

ನಾವು ನಕ್ಷತ್ರವೆನ್ನುತ್ತೇವೆ. ಪ್ರತಿಯೊಂದು ನಕ್ಷತ್ರವು ಪ್ರಚಂಡ ವಿದ್ದು ಅದರ ವ್ಯಾಸವು ಲಕ್ಷಾವಧಿ ಮೈಲು ಇರಲು ಶಕ್ಯವಿದೆ. ಈ ನಕ್ಷತ್ರಗಳು ಅಸಂಖ್ಯಾತವಿದ್ದು, ಎಲ್ಲವುಗಳಿಗೆ ಗತಿಯಿದೆ. ಆಕಾಶದಲ್ಲಿ ಎತ್ತೆತ್ತಕಡೆಗೋ ಬಲ್ಲೇ ವೇಗದಿಂದ ಅವು ಹೊರಟಿವೆ. ಈ ನಕ್ಷತ್ರಗಳಲ್ಲದೆ ಕೋಟ್ಯಾವಧಿ ಮೈಲುಗಳ ಅಂತರಗಳಮೇಲೆ, ಹಬ್ಬಿದ ಲಕ್ಷಾವಧಿ ತೇಜೋಮೇಘಗಳು ಆಕಾಶದಲ್ಲಿವೆ. ಈ ಮೇಘಗಳಲ್ಲಿ ನಿಜವಾಗಿ ಎಷ್ಟೋ ಮೇಘಗಳಿರದೆ, ಅಸಂಖ್ಯಾತ ನಕ್ಷತ್ರಗಳಿಂದ ತುಂಬಿದ ಬೇರೆ ಬೇರೆಯಾದ ವಿಶ್ವಗಳೇ ಇವೆ. ಅವುಗಳಿಗೂ ನಮಗೂ ಕಲ್ಪನೆಮೀರಿ ಅಂತರವಿರುವದರಿಂದ ತೇಜೋಮಯವಾದ ಮಂಡಲಗಳಂತೆ ಅವು ನಮ್ಮ ಕಣ್ಣಿಗೆ ಕಾಣುತ್ತವೆ. ಉಳಿದ ತೇಜೋಮೇಘಗಳು, ಪೃಥ್ವಿಯಲ್ಲಿ ದೊರೆ ಯುವ ಅನೇಕ ತೇಜೋಮಯ ಪದಾರ್ಥಗಳ ಉಗಿಯಿಂದ ತುಂಬಿದ್ದು, ಅವುಗಳಲ್ಲಿಯ ವಾಯುರೂಪ ದ್ರವ್ಯಗಳು ಒಂದೆಡೆಯಾಗಿ ಘನರೂಪ ಹೊಂದಿ ನಕ್ಷತ್ರಗಳಾಗುವ ಕ್ರಿಯೆಯು ಮೆಲ್ಲಗೆ ಸಾಗಿದೆ.

ನಮ್ಮ ಸೂರ್ಯನು ಕೂಡ ಬಹು ಪ್ರಾಚೀನ ಕಾಲದಲ್ಲಿ ಇಂಥ ಒಂದು ತೇಜೋಮೇಘದಿಂದ ಉಂಟಾದ ಪ್ರಕಾಶಮಾನವಾದ ನಕ್ಷತ್ರ ಗಳಲ್ಲ ಒಂದು ಸಣ್ಣ ನಕ್ಷತ್ರವು. ಅದು ಪೃಥ್ವಿಯಲ್ಲಿ ದೊರೆಯುವ ದ್ರವ್ಯ ಗಳಿಂದಲೇ ಸೂರ್ಯಗ್ರಹವಾಗಿದ್ದು, ಪೃಥ್ವಿಗಿಂತಲೂ ಎಷ್ಟೋ ಪಟ್ಟು ಪ್ರಚಂಡವಾದ ಗೋಲವಿದೆ. ಹಾಗು ತನ್ನ ಸುತ್ತಲೂ ಒಂದೇ ಸಮನೆ ತಿರುಗುತ್ತದೆ. ಅದರ ವ್ಯಾಸವು ೮೬೬೦೦೦ ಮೈಲು ಇದ್ದು, ಅದು ಪೃಥ್ವಿ ಯಿಂದ ೯ ಕೋಟಿ ೩೦ ಲಕ್ಷ ಮೈಲು ದೂರವಿದೆ. ಭಯಂಕರವಾದ ಉಷ್ಣತೆಯಿಂದಲೂ ವಾಯುರೂಪದ್ರವ್ಯಗಳಿಂದಲೂ ಕೂಡಿದೆ. ಸೂರ್ಯನ ದ್ರವ್ಯನದಲ್ಲಿ ಕಬ್ಬಿಣ, ಬೆಳ್ಳಿ, ಸೀಸ ಮೊದಲಾದ ಧಾತುಗಳೂ, ಕಾರ್ಬನ್ ಹೇಲಿಯಮ್, ಹಾಯಡ್ರೋಜನ್ ಇತ್ಯಾದಿ ಇತರ ದ್ರವ್ಯಗಳೂ ಇರು ವವೆಂದು ಶಾಸ್ತ್ರಜ್ಞರ ಅಭಿಪ್ರಾಯವಿದೆ. ಸೂರ್ಯನ ಸುತ್ತಲೂ ಅನೇಕ ಗ್ರಹಗಳು ತಿರುಗುತ್ತಿದ್ದು ಅವುಗಳಲ್ಲಿ ಪೃಥ್ವಿಯೂ ಒಂದು ಎಂಬುದು ಎಲ್ಲರಿಗೂ ತಿಳಿದ ವಿಷಯ. ೮೦೦೦ ಮೈಲು ವ್ಯಾಸವುಳ್ಳ ಈ ಪೃಥ್ವಿಯು ೧ ಇಂಚು ವ್ಯಾಸವುಳ್ಳ ಒಂದು ಗೋಲವೆಂದು ಕಲ್ಪಿಸಿದರೆ, ಅದೇ ಪ್ರಮಾಣ

ದಲ್ಲಿ ಸೂರ್ಯನು ಪೃಥ್ವಿಯಿಂದ ೩೨೨ ಯಾರ್ಡಿನ ಮೇಲೆ ಅಂದರೆ, ೬೬೪ ಮೊಳ ಎತ್ತರದಲ್ಲಿ ೯ ಫೂಟು ವ್ಯಾಸವುಳ್ಳಗೋಲವಾಗುವನು. ಚಂದ್ರನು ಕಡ್ಡಿಕಾಳಿನಷ್ಟಾಗಿ ಪೃಥ್ವಿಯಿಂದ ೩೦ ಇಂಚು ದೂರ ಕಾಣುವನು. ಅದ ರಂತೆ, ಬುಧಶುಕ್ರರು ಸೂರ್ಯನಿಂದ ಅನುಕ್ರಮವಾಗಿ ೧೨೪ ಹಾಗು ೨೩೨ ಯಾರ್ಡು ದೂರವಿರುವ ಚಿಕ್ಕಗೋಲಕಗಳಾಗುವರು. ಪೃಥ್ವಿ ಯಿಂದ ದೂರವಿರುವ ಮಂಗಳ, ಗುರು, ಶನಿ, ವರುಣ(Urams)ಹಾಗು ಪ್ರಜಾಪತಿ (Neptune) ಇವರು ಸೂರ್ಯನಿಂದ ಅನುಕ್ರಮವಾಗಿ ೪೮೮, ೧೬೭೨, ೩೦೬೭, ೬೧೬೯, ೯೬೬೬ ಯಾರ್ಡಿನ ಅಂತರದ ಮೇಲೆ ಕಾಣುವರು. ಪೃಥ್ವಿಗೆ ತೀರ ಸಮೀಪವಿರುವ ಆಲ್ಫಾಸೆಟಾರಿ ನಕ್ಷತ್ರವು ಪೃಥ್ವಿಯಿಂದ ೧೯ ಸಾವಿರ ಅಬ್ಜ ಮೈಲು ದೂರವಿದೆ. ಇಂತಹ ಅಸಂ ಖ್ಯಾತ ನಕ್ಷತ್ರಗಳುಳ್ಳ ಈ ವಿಶ್ವದ ರಚನೆಯು ಮಾನವನಿಗೆ ಹುಚ್ಚು ಹಿಡಿ ಸುತ್ತದೆ.

ದೂರದರ್ಶಕ (Telescope) ಹಾಗು ಪ್ರಕಾಶ ಪೃಥಕ್ಕಾರಕ (Spectroscope) ಈ ಎರಡು ಯಂತ್ರಗಳು ಆಕಾಶದಲ್ಲಿಯ ಜ್ಯೋತಿ ಗಳ ಜ್ಞಾನವನ್ನು ಮಾಡಿಕೊಳ್ಳಲು ಬಹಳ ಸಹಾಯಕಗಳಾಗಿವೆ. ದೂರ ದರ್ಶಕಯಂತ್ರದಿಂದ ದೂರದ ವಸ್ತುವು ತೀರ ಸಮೀಪಕ್ಕೆ ಕಾಣುತ್ತದೆ. ಎಲ್ಲಕ್ಕೂ ಮೊದಲು ಇದರ ಉಪಯೋಗವನ್ನು ಮಾಡಿದವನು ಗ್ಯಾಲಿ ಲಿಯೊ. ಪ್ರಕಾಶ ಪೃಥಕ್ಕಾರಕವು ಪ್ರಕಾಶದ ಪ್ರಥಕ್ಕರಣಮಾಡಿ ಅದ ರಲ್ಲಿಯ ಬಣ್ಣಗಳ ಪಟ್ಟಿಯನ್ನು ತೋರಿಸುವದು. ಭಿನ್ನಭಿನ್ನ ಧಾತು ಗಳು ಹಾಗು ಇತರ ವಸ್ತುಗಳು ಕಾಯ್ದು ಪ್ರಕಾಶಮಾನವಾದಾಗ ಅದರ ವರ್ಣಪಟ್ಟಕಗಳು (Spectrum) ಭಿನ್ನಭಿನ್ನವಾಗಿ ಕಾಣುತ್ತವೆ. ಇದರ ಉಪಯೋಗದಿಂದ ಸೂರ್ಯ ಮೊದಲಾದ ಗ್ರಹಗಳಲ್ಲಿ ಯಾವ ಯಾವ ಧಾತುಗಳಿರುವವೆಂಬುದನ್ನೂ, ಅವುಗಳ ಗತಿ ಹಾಗು ಉಷ್ಣತೆಯನ್ನೂ ಗೊತ್ತುಹಚ್ಚಲು ಅನುಕೂಲವಾಗಿದೆ.

**ಫಲಜ್ಯೋತಿಷ್ಯ**

ಜ್ಯೋತಿಷ್ಯ ಶಾಸ್ತ್ರದವ್ಯಾವಹಾರಿಕ ಉಪಯೋಗವೇನೂ ಇರದಿ ದ್ದರೂ ಅದರ ಬೆನ್ನುಹತ್ತಿ ನೂರಾರು ವರ್ಷಗಳಲ್ಲಿ ಪಾಶ್ಚಾತ್ಯರುಮಾಡಿದ

ಶೋಧಗಳನ್ನು ನೋಡಿದರೆ ಆಶ್ಚರ್ಯವಾಗುವದು. ಆದರೆ ಅದರ ವಿರುದ್ಧ ವಾಗಿ ಜ್ಯೋತಿಷವೆಂದೊಡನೆ ವೇಧಶಾಲೆ, ದೂರದರ್ಶಕಯಂತ್ರ, ಗಣಿತ ಶಾಸ್ತ್ರಜ್ಞರು ಇವೇ ಮೊದಲಾದ ಯಾವ ಕಲ್ಪನೆಗಳೂ ಬರದೆ ಪಂಚಾಂಗ ಅಥವಾ ಕೈನೋಡುವ ಭಟ್ಟರ ಅಥವಾ ಮುಂಬಯಿಯಂಥ ಪಟ್ಟಣಗಳಲ್ಲಿ ದಲಾಲಿ ವ್ಯಾಪಾರಿಗಳಲ್ಲಿಯೂ, ಜೂಜಾಟಗಳಲ್ಲಿಯೂ ಅನ್ಯಾಯಕ್ಕೆ ಪ್ರೋತ್ಸಾಹನವೀಯುವ ಜ್ಯೋತಿರ್ಮಾರ್ತಾಂಡರ ಚಿತ್ರವು ನಮ್ಮ ಕಣ್ಣಿಗೆ ಕಟ್ಟುತ್ತದೆ ಇದರ ಕಾರಣವಿಷ್ಟೇ—ಫಲಜ್ಯೋತಿಷದ ಹಾವಳಿಯು ನಮ್ಮಲ್ಲಿ ವಿಶೇಷವಾಗಿ ಬೆಳೆದಿದೆ. ವಿಚಾರಮಾಡಿದರೆ, ಭವಿಷ್ಯಸೂಚಕ ರಾದ ಇವರು ಜ್ಯೋತಿಷಿಗಳೇ! ಸೂರ್ಯ ಚಂದ್ರ ಮೊದಲಾದ ಗ್ರಹಗಳ ಗತಿ, ಸ್ವರೂಪ, ಸ್ಥಿತಿಗಳನ್ನು ತಿಳಿಸುವ ಶಾಸ್ತ್ರವೇ ನಿಜವಾದ ಜ್ಯೋತಿಷ್ಯವು. ಆದರೆ, ಭವಿಷ್ಯವನ್ನು ಹೇಳುವ ವಿದ್ಯೆಯು ಜ್ಯೋತಿಷ್ಯದಿಂದ ಬೇರೆ ಇದ್ದು, ಅದು ಫಲಜ್ಯೋತಿಷವೆಂದು ಬೇರೆಯೇ ಇದೆ. ಇದಕ್ಕೆ ಇಂಗ್ಲೀಷಿನಲ್ಲಿ Astrology ಎಂದೂ, ಜ್ಯೋತಿಷ್ಯಶಾಸ್ತ್ರಕ್ಕೆ Astronomy ಎಂದೂ ಅನ್ನುತ್ತಾರೆ—Astrology ಶಬ್ದಕ್ಕೆ ಇಂಗ್ಲಿಷ ಕೋಶದಲ್ಲಿ ಈ ಅರ್ಥವಿದೆ. 'The pseudo science which pretends to enable men to discover effects and influnces of the heavenly bodies on human affairs and to foretell the future.'' ಪಾಶ್ಚಾತ್ಯರು ಈ ಜ್ಞಾನಕ್ಕೆ ನಾಮಧಾರಿ ಅಥವಾ ಸುಳ್ಳು ಶಾಸ್ತ್ರವೆಂದು ತಿಳಿಯುತ್ತಾರೆ. ಆದರೆ ಗ್ರಹಗಳಗತಿಯಿಂದ ಮನುಷ್ಯನ ಭವಿಷ್ಯನೋಡುವ ಪದ್ಧತಿಯು ಮೊದ ಲಿಗೆ ಪ್ರಾರಂಭವಾಗಿತ್ತೆಂದು ಹಿಂದೆ ಹೇಳಿದೆ. ಅಥರ್ವಣವೇದದಲ್ಲಿ ಜಾರಣ-ಮಾರಣ ವಿದ್ಯೆಯ ಹಾಗು ಗ್ರಹಗಳಿಂದ ಸುಖ-ದುಃಖಗಳು ಮನುಷ್ಯನ ಜೀವನದಲ್ಲಿ ಉಂಟಾಗುವ ಉಲ್ಲೇಖಗಳು ಕಾಣುತ್ತವೆ. ಮೊದಮೊದಲು ಗ್ರಹಗಳ ಗತಿಯನ್ನೇ ಚನ್ನಾಗಿ ತೆಗೆಯಲು ಬರುತ್ತಿದ್ದಿಲ್ಲವಾದ್ದರಿಂದ ಫಲಜ್ಯೋತಿಷ್ಯವು ಅಷ್ಟು ಪ್ರಗತಿಯನ್ನು ಹೊಂದಿದಂತೆ ಕಾಣುವದಿಲ್ಲ. ವರಾಹಮಿಹಿರನಿಂದ ಮುಂದಿನ ಜ್ಯೋತಿಷಿಗಳು ಶಾಸ್ತ್ರವನ್ನು ಬಿಟ್ಟು ಈ ಕಡೆಗೆ ವಿಶೇಷ ಲಕ್ಷ್ಯಕೊಟ್ಟಂತೆ ಕಾಣುತ್ತದೆ. ಯಾಕೆಂದರೆ ಫಲ ಜ್ಯೋತಿಷ್ಯದ ಮೇಲೆ ಅನೇಕ ಗ್ರಂಥಗಳು ಹೊರಟಿವೆ.

ಧರ್ಮಾಚಾರದಲ್ಲಿ ತಿಥಿ, ನಕ್ಷತ್ರಗಳ ಆವಶ್ಯಕತೆಯನ್ನು ಸೇರಿಸಿದ್ದರಿಂದ ಧಾರ್ಮಿಕ, ಪೌರಾಣಿಕಭಾಗವೂ ಜ್ಯೋತಿಷದಲ್ಲಿ ಸೇರಿಕೊಂಡಿತು. ಧರ್ಮದ ಹಾಗು ಫಲಜ್ಯೋತಿಷಿಗಳು ಕೇವಲ ಶ್ರದ್ಧೆಯ ವಿಷಯಗಳಾದ್ದರಿಂದ ಧರ್ಮಮೂಢ ಜನಸಮೂಹವು ಇದರ ಬೆನ್ನುಹತ್ತುವದು ಸ್ವಾಭಾವಿಕವು. ಇದರ ಪ್ರಾಬಲ್ಯದಲ್ಲಿ ನಿಜವಾದ ಜ್ಯೋತಿಷವು ಮೂಲೆಗೆ ಬಿದ್ದಿತು. ಅದರ ಅಭ್ಯಾಸವು ಕಡಿಮೆಯಾಯಿತು. ಭಾಸ್ಕರಾಚಾರ್ಯ ಹಾಗು ಗಣೇಶದೈವಜ್ಞರ ನಂತರ ಮೊದಲನೇ ತರಗತಿಯ ಶೋಧಕ ಬುದ್ಧಿಯ ಜ್ಯೋತಿಷಿಗಳು ನಮ್ಮ ದೇಶದಲ್ಲಿ ಹುಟ್ಟಲೇ ಇಲ್ಲ. ಆದರೆ ಫಲಜ್ಯೋತಿಷದ ಹಾವಳಿಯು ಮಾತ್ರ ವಿಶೇಷ ಬೆಳೆಯಿತು. ಅದರ ಪರಿಣಾಮವು ವಿಪರೀತವಾಗಿ, ಮುಹೂರ್ತ ನೋಡುವ, ಲಗ್ನ ಹಾಗು ವ್ರತ ಉದ್ಯಾಪನೆಗಳನ್ನು ಯಾವಾಗಮಾಡಬೇಕೆಂಬುದನ್ನು ಹೇಳುವ ಮಹಾನ್ ಪಂಡಿತರೇ ಜ್ಯೋತಿಷಿಗಳಾಗಿ ಕುಳಿತರು. ಇಂಗ್ಲೀಷ ಶಿಕ್ಷಣಪ್ರಾರಂಭವಾದ ಮೇಲೆಯೂ ಈ ಜ್ಯೋತಿಷದ ಹಾವಳಿಯು ಕಡಿಮೆಯಾಗದೆ ಹೆಚ್ಚಾಗುತ್ತಿರುವದನ್ನು ಕಂಡು ವಿಷಾದವಾಗುತ್ತದೆ. ಫಲಜ್ಯೋತಿಷವೇನು ಶಾಸ್ತ್ರವಲ್ಲ. ಭವಿಷ್ಯವನ್ನವಲಂಬಿಸಿಯೇ ಯಾವ ರಾಷ್ಟ್ರವೂ ಮುಂದೆ ಬಂದ ಉದಾಹರಣೆಗಳಿಲ್ಲ. ಇದರ ವಿರುದ್ಧವಾಗಿ ಭವಿಷ್ಯದಿಂದ ಆಲಸ್ಯವೂ ನಿಷ್ಕ್ರಿಯತೆಯೂ ಹೇಡಿತನವೂ ಮಾತ್ರ ರಾಷ್ಟ್ರದಲ್ಲಿ ಬೆಳೆದು ಪ್ರಗತಿಗೆ ತಡೆಯಾಗುವ ಸಂಭವವಿದೆ. ೧೬ನೆಯ ಶತಮಾನದಲ್ಲಿ ಯುರೋಪದೊಳಗೆ ಫಲಜ್ಯೋತಿಷದ ಹಾವಳಿಯೇ ಇದ್ದಿತು. ಆದರೆ ಅಲ್ಲಿಯ ತರುಣರು ಮುಂದೆ ನಿಜವಾದ ಶಾಸ್ತ್ರದ ಬೆನ್ನುಹತ್ತಿ ವಿದ್ಯೆಯ ಪ್ರತಿಯೊಂದು ಶಾಖೆಯಲ್ಲಿಯೂ ಮುಂದುವರಿದರಲ್ಲದೆ ಜ್ಯೋತಿಷಶಾಸ್ತ್ರದಲ್ಲಿ ಕೂಡ ವಿಲಕ್ಷಣ ಪ್ರಗತಿಯನ್ನು ಮಾಡಿ ತೋರಿಸಿದರು. ನಮ್ಮ ತರುಣರೂ ಭವಿಷ್ಯದ ಜಾಲದಲ್ಲಿ ಬೀಳದೆ, ಉತ್ಸಾಹ, ಸ್ವಾವಲಂಬನ, ಧೈರ್ಯದಿಂದ ಜ್ಞಾನಮಾರ್ಗದಲ್ಲಿ ಮುಂದರಿಯುವದೇ ಭಾರತದ ಉದ್ಧಾರದಮಾರ್ಗವು.

ನಮ್ಮಲ್ಲಿಯ ವಿಶ್ವವಿದ್ಯಾಲಯಗಳಲ್ಲಿಯೂ ನಿರೀಕ್ಷಣಯುಕ್ತ ಜ್ಯೋತಿಷ ಅಭ್ಯಾಸವಾರಂಭವಾಗಬೇಕು. ಈಗ ಗಣಿತ ಸಂಬಂಧವಾದ ವಿಷಯ ಮಾತ್ರ ಅಭ್ಯಾಸಕ್ರಮದಲ್ಲಿದೆ ಎಂದರೆ ತಪ್ಪಾಗದು. ಈ ಸ್ಥಿತಿಯು

ಬದಲಾಗಿ ನಮ್ಮ ವಿದ್ಯಾಲಯಗಳಲ್ಲಿ ಜ್ಯೋತಿಷದ ಅಭ್ಯಾಸವು ಸಶಾಸ್ತ್ರ ವಾಗಿ ಪ್ರಾರಂಭವಾಗಿ, ಜ್ಞಾನಿಗಳಾದ ತರುಣರು ಹೊರಬಂದು ಫಲ ಜ್ಯೋತಿಷದ ಬಂಡನ್ನು ಅಡಗಿಸುವ ಆವಶ್ಯಕತೆಯಿದೆ.

## ೨ ಭೂಗೋಲಶಾಸ್ತ್ರ (ಅ) ಭೂಪೃಷ್ಠಶಾಸ್ತ್ರ

ಆಕಾಶದಲ್ಲಿರುವ ಗೋಲಗಳ, ಇತರ ವಸ್ತುಗಳ ವಿಚಾರಮಾಡುವ ಜ್ಯೋತಿಷಶಾಸ್ತ್ರವೊಂದನ್ನು ಬಿಟ್ಟರೆ, ಉಳಿದೆಲ್ಲ ಶಾಸ್ತ್ರಗಳು ಅಪಾರವಾದ ವಿಶ್ವದಲ್ಲಿಯ ಒಂದು ಕಣವಾದ ಪೃಥ್ವಿಯ ಬಗ್ಗೆ ಇವೆ. ನಾವು ಸಮಷ್ಟಿ ಯಿಂದ ವ್ಯಷ್ಟಿಯ ಕಡೆಗೆ ಸಾಗುವ ಪದ್ಧತಿಯನ್ನು ಅವಲಂಬಿಸಿದ್ದರಿಂದ ಪೃಥ್ವಿಯ ವಿಷಯಕ್ಕೆ ಸಂಬಂಧಿಸಿದ ಶಾಸ್ತ್ರಗಳನ್ನೆಲ್ಲ ಸಾಕಲ್ಯದಿಂದ ವಿಚಾರಮಾಡುವದು ಕ್ರಮಪ್ರಾಪ್ತವಾಗಿದೆ. ಈ ಶಾಸ್ತ್ರಗಳಲ್ಲಿ ಭೂಗೋಲ ಶಾಸ್ತ್ರ ಮತ್ತು ಭೂಗರ್ಭಶಾಸ್ತ್ರ (ಭೂಸ್ತರ) ಗಳು ಮಹತ್ವವಿವೆ. ಇಂಗ್ಲೀಷಿನಲ್ಲಿ ಯಾವುದಕ್ಕೆ (Geography) ಎನ್ನುವರೋ ಅದಕ್ಕೆ ನಾವು ಭೂಗೋಲಶಾಸ್ತ್ರ ಅಥವಾ ಭೂಗೋಲವೆನ್ನುವೆವು. ಆದರೆ, ಈ ಹೆಸರು ಬಹಳ ವ್ಯಾಪಕವಿದ್ದು ಯಥಾರ್ಥವಿಲ್ಲ. ಇದಕ್ಕಿಂತ ಭೂಪೃಷ್ಠ ಶಾಸ್ತ್ರವೆಂದು ಅದಕ್ಕೆ ಕರೆದರೆ ಸರಿಯಾಗುವದು. ಯಾಕಂದರೆ, ಇದರಲ್ಲಿ ಭೂಪೃಷ್ಠದ ವಿಚಾರವನ್ನಷ್ಟೆ ಮಾಡುತ್ತೇವೆ. ಆದುದರಿಂದ ಭೂಪೃಷ್ಠ ಶಾಸ್ತ್ರ, ಹಾಗು ಭೂಸ್ತರಶಾಸ್ತ್ರವೆಂದು ನಾವು ಕರೆದರೆ ಈ ಹೆಸರುಗಳು ಅನ್ವರ್ಥಕವಾಗುವವು.

### ಭೂಗೋಲಶಾಸ್ತ್ರದ ವಿಸ್ತಾರ

ಪೃಥ್ವಿಯ ಮೇಲ್ಭಾಗದಲ್ಲಿ ನಿಸರ್ಗ ಹಾಗು ಮನುಷ್ಯಕೃತಿಗಳಿಂದ ಉಂಟಾಗುವ ಘಟನೆಗಳ ವಿಷಯವಾಗಿ ವಿಚಾರಮಾಡುವದೇ ಭೂಪೃಷ್ಠ ಶಾಸ್ತ್ರದ ಕರ್ತವ್ಯವು. ಈ ಶಾಸ್ತ್ರವು ಅತ್ಯಂತ ಮಹತ್ವವಾದುದೂ ಮನೋರಂಜಕವಾದುದೂ ಇರುತ್ತದೆ. ಆದರೆ ಈ ಶಾಸ್ತ್ರದ ವಿಷಯ ವಾಗಿ ನಮಗೆ ಇರುವ ಪಾಂಡಿತ್ಯವನ್ನು ಕಂಡು ಅತ್ಯಂತ ವಿಷಾದವಾಗು ತ್ತದೆ. ಕನ್ನಡ ಹಾಗು ಇಂಗ್ಲಿಷಿನ ೩-೪ ಈಯತ್ತೆಗಳಲ್ಲಿ ನಮ್ಮಿಂದ ಬಾಯಿಪಾಠ ಮಾಡಿಸುವ ಜ್ಞಾನವೇ ನಮ್ಮ ಜ್ಞಾನ. ಮುಂದೆ ಅದಕ್ಕೂ

ನಮಗೂ ಸಂಬಂಧವೇ ಉಳಿಯುವದಿಲ್ಲ. ಧಾರವಾಡದಿಂದ ಕಾರವಾರವು ಯಾವ ದಿಕ್ಕಿಗೆ ಇದೆ? ವಿಜಾಪುರದ ಹವೆಯು ಧಾರವಾಡಕ್ಕಿಂತ ಹೆಚ್ಚು ಉಷ್ಣವೇಕೆ? ಈ ಪ್ರಶ್ನೆಗಳ ಉತ್ತರಗಳನ್ನು ಕಾಲೇಜ ವಿದ್ಯಾರ್ಥಿಗಳಿಗೆ ಸರಿಯಾಗಿ ಹೇಳಲುಬಂದರೆ ನಮ್ಮ ಪುಣ್ಯವೆಂದು ತಿಳಿಯಬೇಕು. ಇದು ನಿತ್ಯದ ಅನುಭವವು. ಅಂದಮೇಲೆ, ಇಂತಹ ಪರಿಸ್ಥಿತಿಯಲ್ಲಿ ಮಂಗೋ ಪಾರ್ಕ, ಲಿವ್ಹಿಂಗಸ್ಟನ್, ಕ್ಯಾಪ್ಟನ್ ಕುಕ್, ಆ್ಯಮಂಡಸೇನರಂಥವರು ನಮ್ಮಲ್ಲಿ ಹೇಗೆ ಹುಟ್ಟಬೇಕು?

ಭೂಪೃಷ್ಠದ ವಿಷಯವಾಗಿ ಎಷ್ಟು ಬಗೆಯಿಂದ ವಿಚಾರಮಾಡಲು ಶಕ್ಯವಿದೆಯೋ,—ಈಗ ವಿಚಾರವಾಗಿದೆಯೋ ಅಷ್ಟು ಶಾಖೆಗಳು ಈ ಶಾಸ್ತ್ರದಲ್ಲಿ ಹೊರಟಿವೆ. ಗಣಿತೀಯ ಭೂಪೃಷ್ಠಶಾಸ್ತ್ರವು ಅದರಲ್ಲಿ ಮೊದಲಿನದು. ಪೃಥ್ವಿಯ ಆಕಾರ, ಸೂರ್ಯಪ್ರದಕ್ಷಿಣೆ, ರೇಖಾಂಶ, ಅದರ ಉಪಯೋಗ, ಯಾವುದೇ ಭೂಪ್ರದೇಶದ ಕ್ಷೇತ್ರಫಲ ತೆಗೆಯುವದು, ಎತ್ತರವನ್ನು ಅಳೆಯುವದು, ನಕಾಶವನ್ನು ಸಿದ್ಧಪಡಿಸುವ ರೀತಿ ಇವೇ ಮೊದಲಾದ ಸಂಗತಿಗಳನ್ನು ಗಣಿತದ ಸಹಾಯದಿಂದ ಸಿದ್ಧವಾಗುವ ಅನೇಕ ಸಂಗತಿಗಳು ಈ ಶಾಖೆಯಲ್ಲಿ ಸಮಾವೇಶವಾಗುತ್ತವೆ. ಎರಡನೇ ಶಾಖೆಯೆಂದರೆ, 'ನೈಸರ್ಗಿಕ ಭೂಪೃಷ್ಠಶಾಸ್ತ್ರ (Physical Geography)ವು. ಇದೇ ಎಲ್ಲಕ್ಕೂ ಮಹತ್ವವಾದುದು. ಭೂಪೃಷ್ಠಭಾಗಕ್ಕೆ ಸಂಬಂಧಿಸಿದ ಭೂಮಿ, ನೀರು-ಹವೆ ಈ ಮೂರೂ ಸಂಗತಿಗಳ ವಿಚಾರವು ಈ ಶಾಖೆಯಲ್ಲಿ ಬರುತ್ತದೆ. ಭೂಮಿ ಹಾಗು ನೀರುಗಳನ್ನು ವಿಂಗಡಿಸುವದು, ಭೂಮಿಗಳ ಪ್ರಕಾರಗಳು, ಅವುಗಳ ಸ್ಥಿತಿ, ಪರ್ವತಗಳು, ನೀರಿನ ಪ್ರವಾಹಗಳು, ಜಲಾಶಯಗಳು, ಅರಣ್ಯಗಳು, ಉಸುಬಿನಪ್ರದೇಶಗಳು, ಬೆಳೆಯುಳ್ಳ ಭೂಮಿಗಳು ಇತ್ಯಾದಿ ಸರ್ವ ವಿಷಯಗಳು ಈ ಭಾಗದಲ್ಲಿ ವಿಚಾರಿಸಲ್ಪಡುತ್ತವೆ. ಅದರಂತೆ ಸಮುದ್ರಸ್ವರೂಪದ ವರ್ಣನೆಯು ಇದರಲ್ಲಿಯೇ ಬರುವದು. ಇದಕ್ಕಾಗಿ ಸಮುದ್ರಶಾಸ್ತ್ರವು ಪ್ರತ್ಯೇಕ ನಿರ್ಮಾಣವಾಗಿದೆ. ಹವೆಯ ವಿಚಾರವನ್ನು ಕುರಿತು ವಾಯುಶಾಸ್ತ್ರವೇ ಜನ್ಮವೆತ್ತಿದೆ. ಬೇರೆ ಬೇರೆ ಸ್ಥಳಗಳ ಹವೆ, ಮಳೆ, ಗಾಳಿ, ಚಳಿ ಮೊದಲಾದವುಗಳನ್ನು ಸೋಪಪತ್ತಿಕವಾಗಿ ವಿವರಿಸುವುದೇ ಈ ಶಾಸ್ತ್ರದ ಉದ್ದೇ

ಶವು. ಸಮುದ್ರಶಾಸ್ತ್ರ, ವಾಯುಶಾಸ್ತ್ರಗಳು ಭೂಪೃಷ್ಠಶಾಸ್ತ್ರದ ಭಾಗಗಳು. ಆದರೆ, ಅವುಗಳ ವಿಕಾಸವು ಹೆಚ್ಚಾಗಿ ಸ್ವತಂತ್ರ ಶಾಸ್ತ್ರಗಳೇ ಆದವು. ಇನ್ನು ಭೂಪೃಷ್ಠದ ಮೇಲಿರುವ ಗಿಡಗಂಟಿ, ಪ್ರಾಣಿ, ವನಸ್ಪತಿ ಇವುಗಳನ್ನು ಸಾಧಾರವಾಗಿ ವಿವರಿಸುವ ಜೀವವಿಷಯಕ ಭೂಪೃಷ್ಠಶಾಸ್ತ್ರವೂ ಇದೆ. ಇನ್ನು ನಾಲ್ಕನೆಯ ವಿಭಾಗವೆಂದರೆ, ಮಾನವೀಯ ಭೂಪೃಷ್ಠಶಾಸ್ತ್ರವು. ಇದರ ಸಂಬಂಧವು ಮಾನವಶಾಸ್ತ್ರಕ್ಕೆ ಬರುವದದಲ್ಲದೆ ಇದರಲ್ಲಿ ಭೂಮಿಯ ಮೇಲೆ ಜನವಸತಿಯು ಎಲ್ಲೆಲ್ಲಿ ಎಷ್ಟೆಷ್ಟು ಯಿದೆ? ಭಿನ್ನ ಭಿನ್ನ ಜಾತಿಗಳು ಎಲ್ಲೆಲ್ಲಿ ಹೇಗೆ ಹಬ್ಬಿವೆ? ಪರಿಸ್ಥಿತಿಯ ಪರಿಣಾಮವು ಮನುಷ್ಯನ ಮೇಲೆ ಹೇಗೆ ಆಗುತ್ತವೆ? ಇವೇ ಮೊದಲಾದ ಪ್ರಶ್ನೆಗಳು ಇದರಲ್ಲಿ ಬಿಡಿಸಲ್ಪಟ್ಟಿರುತ್ತವೆ. ಇದಲ್ಲದೆ ಭೂಪೃಷ್ಠಶಾಸ್ತ್ರದಲ್ಲಿ ಇನ್ನೂ ಎರಡು ಭಾಗಗಳಿವೆ. ರಾಜಕೀಯ ಹಾಗು ವ್ಯಾಪಾರಿ ಭೂವರ್ಣನೆಗಳು. ಭೂಮಿಯ ಮೇಲಿನ ರಾಜಕೀಯ ವಿಭಾಗಗಳು, ಅವುಗಳಲ್ಲಿಯ ಜನಸಂಖ್ಯೆ, ರಾಜ್ಯಪದ್ಧತಿ; ಸ್ವಭಾವ ವಿಶೇಷಗಳನ್ನು ರಾಜಕೀಯ ಭೂವರ್ಣನೆಯು ವಿವರಿಸುತ್ತದೆ. ಎರಡನೆಯದರಲ್ಲಿ ಉದ್ಯೋಗ ವ್ಯವಸಾಯಗಳು, ವ್ಯಾಪಾರ, ಕಲಾಕೌಶಲ್ಯ, ಕಳಿಸುವ ಮಾರ್ಗಗಳು, ದೊಡ್ಡ ಪಟ್ಟಣಗಳು, ಹಳ್ಳಿಗಳು ಅವುಗಳ ಸ್ಥಿತಿ, ಸಾಂಪತ್ತಿಕಸ್ಥಿತಿ ಮೊದಲಾದವುಗಳು ವರ್ಣಿಸಲ್ಪಟ್ಟಿರುತ್ತವೆ.

ಹೀಗೆ ಈ ಶಾಸ್ತ್ರವು ಅತ್ಯಂತ ಮನೋರಂಜಕವಿದ್ದು ಬೋಧಪ್ರದವಿದೆ. ಇದರ ಕ್ಷೇತ್ರವು ಅತ್ಯಂತ ವಿಸ್ತಾರವಿದ್ದು, ಜೀವಶಾಸ್ತ್ರ, ಮಾನಸಶಾಸ್ತ್ರ, ಗಣಿತಶಾಸ್ತ್ರ ಮೊದಲಾದವುಗಳ ನಿಕಟಸಂಬಂಧವೂ ಇದೆ.

## ಭೂಗೋಲಜ್ಞಾನದ ಪ್ರಗತಿ

ಜ್ಯೋತಿಷಶಾಸ್ತ್ರದಂತೆ, ಭೂಗೋಲಶಾಸ್ತ್ರವು ಪ್ರಾಚೀನವೆಂದು ಹೇಳಲು ಬರುವದಿಲ್ಲ. ವಿಸ್ತಾರವಾದ ಭೂಪ್ರದೇಶದಲ್ಲಿಯ ನದಿಗಳೂ ಪರ್ವತಗಳೂ ವಿಚಿತ್ರ ದೃಶ್ಯಗಳೂ ಮಾನವನ ಮನಸ್ಸಿನ ಮೇಲೆ ಏನೂ ಪರಿಣಾಮವನ್ನು ಮಾಡಲಿಲ್ಲವೆ? ಪರಿಣಾಮವು ಆಗದೆ ಏನು? ಆದರೆ ಆದರಿಂದ ಚಿಕಿತ್ಸಕ ಬುದ್ಧಿಯು ಜಾಗೃತವಾಗದೆ ಸೃಷ್ಟಿಯ ಬಗ್ಗೆ

ಅದ್ಭುತರಮ್ಯ ಕಲ್ಪನೆಗಳು ಮಾತ್ರ ಹುಟ್ಟಹತ್ತಿದವು. ಅದರ ಫಲವಾಗಿ ಅನೇಕ ಪೌರಾಣಿಕ ಕಥೆಗಳು ಕಟ್ಟಲ್ಪಟ್ಟವು. ಪೃಥ್ವಿಯು ವಿಸ್ತಾರವಾದ ಚಚ್ಚೌಕಾದ ಭೂಪ್ರದೇಶವು. ಅದರ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಕಂಬಗಳಿದ್ದು ಅದರ ಮೇಲೆ ಆಕಾಶವು ನಿಂತಿದೆ ಎಂದು ಮಿಸರ ಜನರ ಕಲ್ಪನೆಯಿದ್ದಿತು. ನಮ್ಮ ಪುರಾಣಗಳಲ್ಲಿಯ ಜಗದ್ರಚನೆಯ ವಿಷಯವಂತೂ ಎಲ್ಲರೂ ಬಲ್ಲರು. ಜಗತ್ತಿನಲ್ಲಿ ಏಳು ಸ್ವರ್ಗಗಳು ಏಳು ಪಾತಾಳಗಳು ಉಂಟು. ಭೂಃ ಭುವಃ ಸ್ವಃ ಮಹಃ ಜನಃ ತಪಃ ಸತ್ಯಮ್ ಎಂಬ ಏಳು ಸ್ವರ್ಗಗಳಿದ್ದು, ಭೂಲೋಕವೆಂದರೆ ಮೃತ್ಯುಜನರು ವಾಸಿಸುವ ಈ ಪೃಥ್ವಿಯು. ಈ ಪೃಥ್ವಿಯಲ್ಲಿ ಜಂಬು, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಹಾಗು ಪುಷ್ಕರವೆಂಬ ಏಳು ದ್ವೀಪಗಳಿದ್ದು, ಪ್ರತಿಯೊಂದು ದ್ವೀಪದ ಸುತ್ತಲೂ ಒಂದೊಂದು ಸಮುದ್ರವಿದೆ. ಇವುಗಳಲ್ಲಿ ಎಲ್ಲಕ್ಕೂ ನಡುವಿರುವ ಜಂಬೂದ್ವೀಪವೇ ನಮ್ಮ ವಸತಿಸ್ಥಾನವು. ಹೀಗೆ ಈ ತರದ ಕಾಲ್ಪನಿಕ ವಿಸ್ತಾರವು ಅನೇಕ ಪುರಾಣಗಳಲ್ಲಿ ಅಲ್ಲಲ್ಲಿ ದೊರೆಯುತ್ತದೆ.

ಪಾಶ್ಚಾತ್ಯರಲ್ಲಿ ಭೂಗೋಲಶಾಸ್ತ್ರದ ತಳಹದಿಯು ಗ್ರೀಕರಿಂದಲೇ ಹಾಕಲ್ಪಟ್ಟಿತು. ಪೃಥ್ವಿಯು ದೀರ್ಘಗೋಲಾಕಾರವಾದ ತಾಟಿನಂತಿದೆ ಎಂದು ಹಿಕ್‌ಟಿಯುಸ್ ಮತ್ತು ಹಿರಾಡೋಟಸರು ತಮ್ಮ ಭೂಗೋಲ ಗ್ರಂಥಗಳಲ್ಲಿ ಬರೆದಿದ್ದಾರೆ. ಇವರೇ ಈ ಶಾಸ್ತ್ರದ ಆದ್ಯಗ್ರಂಥಕಾರರು. ಹಿರಾಡೋಟಸರು ಯುರೋಪ, ಏಶಿಯಾ, ಆಫ್ರಿಕಾ ಈ ಮೂರು ಖಂಡಗಳೇ ಜ್ಞಾತಪೃಥ್ವಿಯೆಂದು ಉಲ್ಲೇಖಿಸಿದ್ದಾರೆ. ಅರಿಸ್ಟಾಟಲನು ಈ ಈ ವಿದ್ಯೆಯನ್ನೆಲ್ಲ ಸಂಗ್ರಹಿಸಿ ಆದಕ್ಕೆ ಶಾಸ್ತ್ರದ ಸ್ವರೂಪವನ್ನು ಕೊಟ್ಟನು. ಅವನು ಪೃಥ್ವಿಯು ಗೋಲಾಕಾರವಿರುವದೆಂದು ಸಪ್ರಮಾಣವಾಗಿ ಸಿದ್ಧ ಮಾಡಿದನು. ಕಟಿಬಂಧವನ್ನು ಸ್ಪಷ್ಟವಾಗಿ ವರ್ಣಿಸಿದನು. ಪ್ರಾಣಿಗಳು ಹಾಗು ವನಸ್ಪತಿಗಳು ಪರಿಸ್ಥಿತಿಗೆ ತಕ್ಕಂತೆ ಹೇಗೆ ಬೆಳೆಯುತ್ತವೆಂಬುದನ್ನು ತೋರಿಸಿಕೊಟ್ಟನು. ಭಿನ್ನ ಭಿನ್ನ ಪರಿಸ್ಥಿತಿಯಲ್ಲಿ ವಾಸಿಸುವ ಜನಾಂಗಗಳ ಸ್ವಭಾವದಲ್ಲಿ ಹಾಗು ರಾಜಕಾರಣಗಳಲ್ಲಿ ಹೇಗೆ ಅಂತರವಾಗುತ್ತದೆ ಎಂಬುದನ್ನು ವಿವರಿಸಿದನು.

ಸ್ಟ್ರಬೊನೆಯು (ಕ್ರಿ ಪೂ. ೫೦. ಇ.ಸ. ೩೪)ಭೂಗೋಲದ ವರ್ಣನಾ

ತ್ಮಕ ಭಾಗವನ್ನೇ ಮುಖ್ಯವಾಗಿಟ್ಟುಕೊಂಡು ಭೂಮಧ್ಯಸಮುದ್ರಕ್ಕೆ ಹೊಂದಿರುವ ಸರ್ವ ದೇಶಗಳ ವರ್ಣನೆಗಳುಳ್ಳ ಗ್ರಂಥವನ್ನು ರಚಿಸಿದನು. ಟಾಲೆಮಿಯು ಭೂಗೋಲ ವಿಷಯಕ್ಕಿರುವ ಎಲ್ಲ ಜ್ಞಾನವನ್ನು ಸಂಗ್ರಹಿಸಿದನು. ಭೂಭಾಗದಲ್ಲಿರುವ ಅನೇಕ ಸ್ಥಳಗಳ ಪರಸ್ಪರ ಅಂತರವನ್ನು ಗೊತ್ತುಹಚ್ಚುವದಲ್ಲದೆ, ಅವುಗಳ ಅಕ್ಷಾಂಶ, ರೇಖಾಂಶಗಳನ್ನು ನಿಶ್ಚಯಿಸುವದಕ್ಕಾಗಿ ಬಹು ಶ್ರಮಪಟ್ಟನು.

ಮುಂದೆ ಅಜ್ಞಾನಯುಗದಲ್ಲಿ ಯುರೋಪವು ಇದ್ದ ಜ್ಞಾನವನ್ನೆಲ್ಲ ಕಳೆದುಕೊಂಡು ಕಾಡುಸ್ಥಿತಿಗೆ ಮುಟ್ಟಿತು. ಮತ್ತೆ ೧೫ನೆಯ ಶತಮಾನದಲ್ಲಿ ಆದ ವಿಚಾರಕ್ರಾಂತಿಯಿಂದ ಜನರ ಕಣ್ಣುಗಳು ತೆರೆದವು. ಪೃಥ್ವಿಯು ದುಂಡಗಿರುವದೆಂಬ ಅರಿಸ್ಟಾಟಲನ ಸಿದ್ಧಾಂತವನ್ನು ನಂಬಿ ಕೋಲಂಬಸನು ಪಶ್ಚಿಮಕ್ಕಿರುವ ಹಿಂದುಸ್ಥಾನದ ಮಾರ್ಗವನ್ನು ಹುಡುಕಲು ಹೊರಟನು. ಅದೇ ತತ್ವದ ಮೇಲೆ ವಿಶ್ವಾಸವಿಟ್ಟು (೧೫೨೦) ಮ್ಯಾಜಿಲನನೆಂಬ ಪೋರ್ತುಗೀಜ ಸಾಹಸಿಯು ಪೃಥ್ವಿಯ ಪ್ರದಕ್ಷಿಣೆಯನ್ನು ಮಾಡಿದನು. ಆಗ ಎಲ್ಲರಿಗೂ ಪೃಥ್ವಿಯು ದುಂಡಗಿರುವದೆಂದು ಮನವರಿಕೆಯಾಯಿತು. ಅಲ್ಲದೆ ಇದರಿಂದ ಭೂಗೋಲಜ್ಞಾನಕ್ಕೆ ಪುಟಕೊಟ್ಟಂತಾಯಿತು. ಕುತೂಹಲ ಬುದ್ಧಿಯು ಜಾಗೃತವಾಗಿ ಜಗದ್ವರ್ಣನೆಯ ಅನೇಕ ಗ್ರಂಥಗಳು ಉದಯವಾದವು. ಈ ಕುತೂಹಲ ಬುದ್ಧಿಯಿಂದ ಶಾಸ್ತ್ರೀಯ ದೃಷ್ಟಿಯು ಹುಟ್ಟಲು ಬಹಳ ವೇಳೆ ಹಿಡಿಯಲಿಲ್ಲ. ೧೭ನೇ ಶತಮಾನದಲ್ಲಿಯೇ ವ್ಹರೇನಿಯಸನೆಂಬ ಜರ್ಮನ್ ಗ್ರಹಸ್ಥನು ಶಾಸ್ತ್ರೀಯ ದೃಷ್ಟಿಯಿಂದ ಒಂದು ಗ್ರಂಥವನ್ನು ರಚಿಸಿದನು. ವ್ಹರೇನಿಯಸನು ಭೂಗೋಲ ಶಾಸ್ತ್ರದಲ್ಲಿ ಸಾಮಾನ್ಯ ಹಾಗು ವಿಶಿಷ್ಟ ಎಂದು ಎರಡು ಭಾಗಗಳನ್ನು ಮಾಡಿ, ಸಾಮಾನ್ಯ ಭಾಗದಲ್ಲಿ ಭೂಪೃಷ್ಠದ ಸ್ವರೂಪವರ್ಣನೆ ಹಾಗು ನೈಸರ್ಗಿಕ ಘಟನೆಗಳ ವರ್ಣನೆಗಳನ್ನು ಸಾಧಾರವಾಗಿ ಮಾಡಿದ್ದಾನೆ. ವಿಶಿಷ್ಟಭಾಗದಲ್ಲಿ ಬೇರೆ ಬೇರೆ ದೇಶಗಳ ವರ್ಣನೆಗಳನ್ನು ಹೇಳಿದ್ದಾನೆ. ಇವನ ನಂತರ ಈ ಶಾಸ್ತ್ರದಲ್ಲಿ ಪ್ರಗತಿಯನ್ನು ಮಾಡಿದ ಜರ್ಮನ್ ಪಂಡಿತನಾದ ಕಾಂಟನ ಹೆಸರನ್ನು ಮರೆಯುವದೇ ಶಕ್ಯವಿಲ್ಲ. ಕೋನಿಂಗ್ಸಬರ್ಗದ ವಿದ್ಯಾಪೀಠದಲ್ಲಿ 'ನಿಜವಾದ ಭೂಗೋಲ' ವೆಂಬ ವಿಷಯವಾಗಿ

೧೭೬೫ರಲ್ಲಿ ಇವನು ವ್ಯಾಖ್ಯಾನ ಕೊಟ್ಟನು. ಆದರಲ್ಲಿ ಈ ಶಾಸ್ತ್ರದ ಮಹತ್ವವನ್ನು ವರ್ಣಿಸಿ, ಅದರಲ್ಲಿ ೫ ಭಾಗಗಳನ್ನು ಮಾಡಿದನು. ೧. ಗಣಿತೀಯ ಭೂಗೋಲ, ೨. ನೈತಿಕಭೂಗೋಲ, ೩. ರಾಜಕೀಯ ಭೂಗೋಲ, ೪. ವ್ಯಾಪಾರಿ ಭೂಗೋಲ, ೫. ಧಾರ್ಮಿಕ ಭೂಗೋಲ ಎಂದು. ಮುಂದೆ ೧೮ನೇ ಶತಮಾನದ ಉತ್ತರಾರ್ಧದಲ್ಲಿ ಕ್ಯಾಪ್ಟನ್ ಕುಕ್‌ನ ಪ್ಯಾಸಿಫಿಕ ಮಹಾಸಾಗರದ ಪ್ರವಾಸದಿಂದ ಈ ಜ್ಞಾನಕ್ಕೆ ಮತ್ತೆ ಕಳೆಯೇರಿತು.

ಭೂಗೋಲಶಾಸ್ತ್ರದ ಇತಿಹಾಸದಲ್ಲಿ ಅಲೇಕ್ಝಾಂಡರಫ್ಯಾನಹಮ್ಬೋಲ್ಟನ (೧೭೬೯-೧೮೫೯)ಹೆಸರು ಅಜರಾಮರವಾಗಿದೆ. ಪ್ರವಾಸಿ,ಶಾಸ್ತ್ರಜ್ಞ, ಹಾಗು ಶೋಧಕನೆಂದು ಇವನ ಪ್ರಸಿದ್ಧಿಯು. ಇವನು ೧೭೯೯ರಿಂದ ೧೮೦೪ರ ವರೆಗೆ ಅಮೇರಿಕೆಯಲ್ಲಿ ಪ್ರವಾಸಮಾಡಿ ಅಮಾಝೋನನದಿಯ ದಂಡೆಯ ಪ್ರದೇಶವನ್ನೆಲ್ಲ ಬೈಲಿಗೆ ತಂದನು. ೧೮೨೯ ಸೈಬೇರಿಯಾ ಭೂಮಿಯಲ್ಲಿ ಸಂಚರಿಸಿ, ಅಲ್ಲಿರುವ ಸಂಗತಿಗಳನ್ನೆಲ್ಲ ಹೊರಗೆಡವಿದನು. ಈ ಪ್ರವಾಸದಲ್ಲಿ ಅವನ ವೇಗವು ಅದ್ವಿತೀಯವಾದುದು. ೨೫ ವಾರಗಳಲ್ಲಿ ೯೬೧೪ ಮೈಲು ಪ್ರವಾಸವನ್ನು ಮಾಡಿದನು. ಅವನ ಶಾಸ್ತ್ರೀಯ ಶೋಧಗಳು ಬಹಳ ಮಹತ್ವವುಳ್ಳವು ಇವೆ. ಭಿನ್ನ ಭಿನ್ನ ಸ್ಥಳಗಳ ಹವೆಯಲ್ಲಿ ಏಕೆ ಹೆಚ್ಚುಕಡಿಮೆ ಇರುತ್ತದೆ ಎಂಬ ಇವನ ಶೋಧವು ಅತ್ಯಂತ ಮಹತ್ವವಾದುದು. ಇವನ ಕಾಸ್ಮಾಸ್ (ವಿಶ್ವ) ಎಂಬ ಸೃಷ್ಟಿಯನ್ನು ವರ್ಣಿಸುವ ಪ್ರಚಂಡಗ್ರಂಥವು ೧೮೪೪ರಲ್ಲಿ ಖಂಡಶಃ ಪ್ರಸಿದ್ಧವಾಗಲು ಪ್ರಾರಂಭವಾಗಿ ಇವನು ಜೀವಂತವಿರುವ ವರೆಗೆ, ೫ ಖಂಡಗಳು ಮಾತ್ರ ಪ್ರಸಿದ್ಧವಾದವು. ಅದು ಕೊನೆಗೆ ಅಪೂರ್ಣವುಳಿಯಿತು.

೧೮ನೇಶತಮಾನದ ಕೊನೆಗೆ ಹಾಗು ೧೯ನೇಶತಮಾನದ ಪ್ರಾರಂಭದಲ್ಲಿ ಶಾಸ್ತ್ರೀಯ ವಿಚಾರದ ಬೆಳೆವಣಿಗೆಯು ಒಂದೇ ಸವನೆ ಪ್ರಚಂಡವಾಗಿ ಬೆಳೆಯತೊಡಗಿದ್ದರಿಂದಲೂ ಸೃಷ್ಟಿಯ ನಿರೀಕ್ಷಣವು ಎಲ್ಲ ದೃಷ್ಟಿಯಿಂದ ಪ್ರಾರಂಭವಾದುದರಿಂದಲೂ ಭೂಗೋಲಶಾಸ್ತ್ರವು ಕಲ್ಪನಾತೀತವಾಗಿ ಬೆಳೆಯಿತು. ಜ್ಞಾನದ ಸಂಚಯವು ಹೆಚ್ಚಾದಂತೆ, ವಿಷಯಗಳ ಕ್ಷೇತ್ರಗಳು ಭಿನ್ನಭಿನ್ನವಾಗಿ ಸ್ವತಂತ್ರ ಶಾಸ್ತ್ರಗಳೇ ಹುಟ್ಟಹತ್ತಿದವು. ಭೂಪೃಷ್ಠದ ಜ್ಞಾನವು ಚನ್ನಾಗಿ ಆಗಬೇಕಾದರೆ ಭೂಗರ್ಭದ ಜ್ಞಾನವೂ

ಅವಶ್ಯವೆನಿಸಹತ್ತಿತು. ಅದೇ ವಿಚಾರವು ಬೆಳೆದು ಭೂಗರ್ಭಶಾಸ್ತ್ರದ ಉಗಮವಾಯಿತು. ಇದರಂತೆಯೇ, ಸಮುದ್ರಶಾಸ್ತ್ರ, ವಾಯುಶಾಸ್ತ್ರ, ಭೂಮಿಮಾಪನಶಾಸ್ತ್ರ ಮೊದಲಾದ ಶಾಖೆಗಳು ಹುಟ್ಟಿದವು. ಹೀಗೆ ಶಾಖೆಗಳು ಸ್ವತಂತ್ರವಾದ ಮೇಲೆ, ಭೂಗೋಲಶಾಸ್ತ್ರಕ್ಕೆ ಸ್ಥಾನವೆಲ್ಲಿ ಎಂದು ಕೇಳಬಹುದು. ಆದರೆ ಭೂಪೃಷ್ಠದ ಸಮ್ಯಕ್‌ಜ್ಞಾನವನ್ನು ಮಾಡಿಕೊಟ್ಟು ಭೂಪೃಷ್ಠ ಹಾಗು ಮನುಷ್ಯಪ್ರಾಣಿಯ ಸಂಬಂಧವನ್ನು ಪರಸ್ಪರವಾಗಿ ಮಾಡಿಕೊಡುವ ಒಂದು ಜ್ಞಾನಶಾಖೆಯ ಅವಶ್ಯಕತೆಯು ಇಷ್ಟೆಲ್ಲ ಶಾಸ್ತ್ರಗಳು ಹುಟ್ಟಿದರೂ ಉಳಿದೇ ಉಳಿಯುತ್ತದೆ. ಆ ಜ್ಞಾನ ಶಾಖೆಯೆಂದರೆ ಭೂಪೃಷ್ಠಶಾಸ್ತ್ರವು.

## (ಬ) ಭೂಗರ್ಭಶಾಸ್ತ್ರ(ಭೂಸ್ತರಶಾಸ್ತ್ರ)

ಭೂಗೋಲಶಾಸ್ತ್ರವನ್ನು ಅಭ್ಯಾಸಮಾಡುವಾಗ ಹುಟ್ಟಿದ ಶಾಸ್ತ್ರಗಳಲ್ಲಿ ಭೂಸ್ತರಶಾಸ್ತ್ರವು ಅತ್ಯಂತ ಮಹತ್ವವಾದುದು. ಇದಕ್ಕೆ ಭೂಗರ್ಭಶಾಸ್ತ್ರವೆಂದೂ ಹೆಸರು. ಆದರೆ, ಈ ಶಾಸ್ತ್ರದಲ್ಲಿ ಭೂಪೃಷ್ಠದಿಂದ ಕೆಳಗೆ ೨೫-೩೦ ಮೈಲುಗಳ ವರೆಗಿನ ಕವಚ ಅಥವಾ ಸ್ತರವನ್ನಷ್ಟೇ ವಿಚಾರ ಮಾಡುವೆವು. ಭೂಗರ್ಭದ ವರೆಗೆ ನಾವು ಹೋಗುವದಿಲ್ಲ. ಈ ೨೫-೩೦ ಮೈಲು ಕೂಡ ಶಾಸ್ತ್ರಜ್ಞರು ಕೆಳಗಿಳಿದು ಶೋಧಿಸುತ್ತಾರೆಂದು ತಿಳಿಯ ಕೂಡದು. ಪೃಥ್ವಿಯಲ್ಲಿ ನಡೆಯುವ ಚಲನವಲನಗಳಿಂದ ಕೆಳಭಾಗವು ಮೇಲೆ ಬಂದು ಅಭ್ಯಾಸಕ್ಕೆ ಅನುಕೂಲವಾಗುವದು. ಆದುದರಿಂದ ಭೂಗರ್ಭಕ್ಕಿಂತ ಭೂಸ್ತರಶಾಸ್ತ್ರವೆಂದು ಕರೆಯುವದೇ ಸಮರ್ಪಕ.

ಈ ಶಾಸ್ತ್ರವು ತೀರ ಇತ್ತೀಚಿನದಾದರೂ ಅದು ಬಹು ವಿಸ್ತಾರವಾಗಿದೆ. ಜೇಮ್ಸ್‌ಹಟನ್ ಎಂಬ ಆಂಗ್ಲ ಪಂಡಿತನೂ ವರ್ನರನೆಂಬ ಜರ್ಮನ್‌ಶಾಸ್ತ್ರಜ್ಞನೂ ಈ ಇಬ್ಬರು ೧೮ನೆಯ ಶತಮಾನದ ಕೊನೆಯಲ್ಲಿ ಈ ಶಾಸ್ತ್ರದ ತಳಹದಿಯನ್ನು ಹಾಕಿದರು. ಪೃಥ್ವಿಯ ಮೇಲ್ಪದರು ಮುಖ್ಯವಾಗಿ ಸಮುದ್ರದ ತಳದಲ್ಲಿರುವ ಕೊಳಚಿಯಿಂದಾಗಿದೆ. ಜ್ವಾಲಾಮುಖಿಗಳಿಂದಾಗಲಿ ಅಥವಾ ಭೂಗರ್ಭದಲ್ಲಿರುವ ಉಷ್ಣತೆಯಿಂದಾಗಲಿ ಅದು ಸ್ಫೋಟವಾಗಿ ಮೇಲೆ ಬಂದಿರುತ್ತದೆ ಎಂದು ಹಟನ್ನನ ಸಿದ್ಧಾಂತ.

ವರ್ನರನು ಈ ಉಪಪತ್ತಿಯನ್ನು ತೀವ್ರವಾಗಿ ವಿರೋಧಿಸಿದನು. ಅತ್ಯಂತ ಪ್ರಾಚೀನಕಾಲದಲ್ಲಿ ಪೃಥ್ವಿಯಲ್ಲೆಲ್ಲ ಕಾದು ಎಸರು ಬಂದ ನೀರೇ ಇದ್ದಿತು. ಅದರಲ್ಲಿಯೇ ದ್ರವರೂಪದಲ್ಲಿರುವ ಎಲ್ಲ ದ್ರವ್ಯಗಳು ಕೂಡಿದ್ದವು. ಮುಂದೆ ನೀರು ಆರಿ ಆರಿದಂತೆ, ಅದರಲ್ಲಿರುವ ದ್ರವ್ಯಗಳು ಘಟ್ಟಿಯಾಗಿ ಕಲ್ಲುಗಳಾದವು. ನೀರು ಬೇರೆಯಾಗಿ ಸಮುದ್ರವಾಯಿತು ಎಂದು ಅವನ ಅಭಿಪ್ರಾಯ. ಈ ಎರಡೂ ಸಿದ್ಧಾಂತಗಳ ನಡುವೆ ಒಳ್ಳೇ ಚಕಮಕಿಯಾಗಿ, ಹಟನ್ನನ ಸಿದ್ಧಾಂತವು ಉಳಿದುಕೊಂಡಿತು. ಮುಂದೆ ಲಾಯೇಲನೆಂಬ ಶಾಸ್ತ್ರಜ್ಞನು ಪೃಥ್ವಿಯ ಭೂಪೃಷ್ಠದ ಮೇಲೆ ಯಾವಾಗಲೂ ವಿಧಾಯಕ ಹಾಗು ವಿನಾಶಕ ಘಟನೆಗಳು ನಡೆದಿರುತ್ತವೆಂದು ಸಿದ್ಧಮಾಡಿದನು. ಆಗಾಸೀಝನು ಹಿಮನದಿಗಳಿಂದ ಭೂಮಿಯ ಮೇಲ್ಪದರಿನ ಮೇಲೆ ಯಾವ ಪರಿಣಾಮವಾಗುವದೆಂಬುದನ್ನು ವಿಶೇಷವಾಗಿ ಅಭ್ಯಾಸಮಾಡಿದನು. ಇದೇ ಸಮಯಕ್ಕೆ ಪ್ರಾಣಿಶಾಸ್ತ್ರಜ್ಞರು ಈ ಪದರುಗಳಲ್ಲಿ ದೊರೆಯುವ ಪ್ರಾಣಿಗಳ ಅವಶೇಷಗಳ ಅಭ್ಯಾಸವನ್ನು ಪ್ರಾರಂಭಮಾಡಿದರು. ಇದರಿಂದ ಲಕ್ಷಾವಧಿ ವರ್ಷ ಪೂರ್ವದಲ್ಲಿ ಭೂಮಿಯ ಮೇಲೆ ಯಾವ ಯಾವ ಪ್ರಾಣಿಗಳು ಬಾಳಿ ಹೋದವೆಂಬ ಇತಿಹಾಸವೇ ನಿರ್ಮಾಣವಾಯಿತು. ಮುಂದೆ ಡಾರ್ವಿನ್ನನು ತನ್ನ ವಿಕಾಸವಾದದ ಸಿದ್ಧಾಂತವನ್ನು ಸ್ಥಾಪಿಸಿದನಂತರ ಈ ಶಾಸ್ತ್ರಕ್ಕೆ ಸಹಾಯವಾಗಿ ವನಸ್ಪತಿಗಳು ಹಾಗು ಪ್ರಾಣಿಗಳ ವಿಕಾಸವು ಭಿನ್ನಭಿನ್ನ ಯುಗಗಳಲ್ಲಿ ಹೇಗಾಯಿತು ಎಂಬುದನ್ನು ತಿಳಿದುಕೊಳ್ಳಲು ಅನುಕೂಲವಾಯಿತು.

**ಭೂಗರ್ಭ**

ಕೆಲವೊಂದು ಫೂಟುಗಳ ಕೆಳಗಿರುವ ಮಣ್ಣಿನ ಆವರಣ ತೀರಿದ ಮೇಲೆ ಪೃಥ್ವಿಯ ಎಲ್ಲ ಭಾಗದಲ್ಲಿ ಕಲ್ಲಿನ ಕವಚವಿರುವದು. ಪೃಥ್ವಿಯ ಮಧ್ಯಬಿಂದುವಿನಿಂದ ಭೂಪೃಷ್ಠದ ವರೆಗೆ ೪೦೦೦ ಮೈಲು ಅಂತರದಲ್ಲಿ ೨೫–೩೦ ಮೈಲು ಮಾತ್ರ ಕಲ್ಲು-ಮಣ್ಣು ಪದರುಗಳ ಕವಚವಿರುವದು. ಉಳಿದ ಪಳ್ಳೆಲ್ಲ ಜಡವಾದ ಸೀಸ, ಕಬ್ಬಿಣ ಮೊದಲಾದ ಜಡಧಾತುಗಳಿಂದ ತುಂಬಿದೆ ಎಂದು ಶಾಸ್ತ್ರಜ್ಞರ ಮತ. ಆದರೆ, ಈ ಕಬ್ಬಿಣ, ಹಾಗು ಸೀಸಗಳು ಯಾವ ಸ್ವರೂಪದಲ್ಲಿರುವವೆಂಬುದನ್ನು ಶಾಸ್ತ್ರಜ್ಞರಿಗೂ ಹೇಳಲು

ಕಠಿಣವಾಗಿದೆ. ಕೆಲವರು ಭೂಗರ್ಭದಲ್ಲಿ ಅತ್ಯಂತ ಉಷ್ಣತೆಯಿದ್ದುದರಿಂದ ಎಲ್ಲ ಧಾತುಗಳು ರಸರೂಪದಲ್ಲಿರುವವೆಂದೂ, ಕೆಲವರು ಕೆಲವೊಂದು ಅಂತರದ ವರೆಗೆ ರಸರೂಪವಿದ್ದು, ಅದರ ಗರ್ಭವು ಹೆಚ್ಚಾದ ಉಷ್ಣತೆಯುಳ್ಳದ್ದಿರುವದರಿಂದ ಅಲ್ಲಿ ಎಲ್ಲ ದ್ರವ್ಯಗಳು ವಾಯುರೂಪದಲ್ಲಿರುವವೆಂದೆನ್ನುವರು. ಮತ್ತೆ ಕೆಲವರು, ಪೃಥ್ವಿಯ ಮಧ್ಯಭಾಗದ ವರೆಗೆ, ಅದರುಗಳಂತೆ ಕಠಿಣ ದ್ರವ್ಯದಿಂದ ತುಂಬಿರಬೇಕು. ಅದರ ಮೇಲೆ ನೂರಾರು ಮೈಲು ಘನದ್ರವ್ಯವು ಬಿಡಿ ತುಂಡುಗಳಿಂದಾಗಿರಬೇಕು. ಅದರ ಮೇಲೆ ಕೆಲವೊಂದು ಭಾಗ ಅತ್ಯಂತ ತಪ್ತವಾದ ದ್ರವ್ಯದಿಂದಾಗಿರಬೇಕು. ಮತ್ತು ಎಲ್ಲಕ್ಕಿಂತಲೂ ಮೇಲ್ಭಾಗವು ೨೦-೩೫ ಮೈಲು ಕಲ್ಲುಗಳ ಥರಗಳ ಕವಚವಿರಬೇಕು ಎನ್ನುವರು. ಈ ಕೊನೆಯ ಮತವು ಬಹುಜನ ಶಾಸ್ತ್ರಜ್ಞರಿಗೆ ಮಾನ್ಯವಾಗಿದೆ.

## ಕಲ್ಲುಗಳು ಹೇಗೆ ಹುಟ್ಟುವವು

ಕೋಟ್ಯಾವಧಿ ವರುಷಗಳಿಂದ ಭೂಪೃಷ್ಠದ ಮೇಲೆ ಅನೇಕಘಟನೆಗಳು ನಡೆದುಹೋಗಿವೆ. ಇವು ಇಬ್ಬಗೆಯಾಗಿವೆ. ಮಳೆ, ಗಾಳಿ, ಚಳಿ ಮೊದಲಾದ ಹೊರಗಿನ ಶಕ್ತಿಯ ಪರಿಣಾಮಗಳು ಒಂದು. ಭೂಕಂಪ ಜ್ವಾಲಾಮುಖಿ ಮೊದಲಾದ ಅಂತಃಶಕ್ತಿಯ ಪರಿಣಾಮಗಳು ಎರಡನೆಯದು. ಬಿಸಿಲಿನಿಂದ ಕಲ್ಲುಗಳು ಸಿಡಿದು, ಗಾಳಿಗಳಿಂದ ತುಂಡುಗಳಾಗಿ, ಮಳೆಗಳಿಂದ ಸವೆದು ಸಣ್ಣ ಚೂರುಗಳೂ ಉಸುಕೂ ಹುಡಿಯೂ ಉಂಟಾಗುತ್ತವೆ. ಈ ಸರ್ವ ಪದಾರ್ಥಗಳು ಹೊಳೆಹಳ್ಳಗಳ ಮುಖಾಂತರ ಹರಿದು ಕೊನೆಗೆ ಸಮುದ್ರವನ್ನು ಸೇರುತ್ತವೆ. ಸಣ್ಣ ಧೂಳಿಯು ಸದಿಯು ನೀರಲ್ಲಿ ಬೆರೆತು ಸಮುದ್ರದಲ್ಲಿ ಬಹು ದೂರದ ವರೆಗೆ ಹೋಗಿ ತಳಕ್ಕೆ ಕೂಡುತ್ತದೆ. ಅದರಂತೆ ಸಮುದ್ರದಲ್ಲಿ ಸತ್ತ ಪ್ರಾಣಿಗಳ ಶರೀರಗಳೂ ತಳಕ್ಕೆ ಹೋಗುತ್ತವೆ. ಹೀಗೆ ಕೆಳಗಿನ ಕೊಳಚಿಯು ಬೆಳೆಯುತ್ತ ಬೆಳೆಯುತ್ತ ಹೋಗುವದು. ಅದರ ಮೇಲೆ ನೀರಿನ ವಿಪರೀತ ಭಾರವಿರುವದರಿಂದ ಅದು ಘಟ್ಟಿಕಲ್ಲಾಗುತ್ತದೆ. ಇದೇ ಬೆಳೆದು ನೀರಿನ ಮೇಲೆ ಬಂದರೆ, ಅದು ಭೂಮಿಯಾಗುವದು. ಅಲ್ಲಿದ್ದ ನೀರು ಸರಿದು ತೆನ್ನುಗ್ಗ

ವ್ಯಾಪಿಸುವದು. ಇಲ್ಲವೆ ಕೆಲವೊಂದು ಸಮಯದಲ್ಲಿ ಭೂಗರ್ಭದ ಒತ್ತಡ ದಿಂದ ಸಮುದ್ರದ ತಳವು ಮೇಲಕ್ಕೆ ಏಳುತ್ತದೆ. ಈ ಬಗೆಯಾಗಿ ಸಮುದ್ರ ತಳದಲ್ಲಿರುವ ಕೊಳಚಿಯಿಂದಾದ ಕಲ್ಲುಗಳು ಮೇಲೆ ಬರುತ್ತವೆ. ಪುನರಪಿ ಮಳಿ, ಚಳಿ, ಗಾಳಿಗಳಿಂದ ಸಮುದ್ರದ ತಳವನ್ನು ಸೇರುತ್ತವೆ. ಹೀಗೆ ಸೃಷ್ಟಿಯ ಚಕ್ರವು ನಡೆಯುತ್ತಲೇ ಇದೆ.

ಸೃಷ್ಟಿಯ ಈ ಪ್ರಚಂಡವಾದ ಘಟನೆಯನ್ನು ಮನಗಾಣಬೇಕಾ ದರೆ, ನಮ್ಮ ಕಲ್ಪನಾಶಕ್ತಿಯು ಲಕ್ಷಾವಧಿ ವರ್ಷಗಳ ಘಟನೆಗಳನ್ನು ಧಾರಣಮಾಡುವಷ್ಟು ಸಾಮರ್ಥ್ಯ ಉಳ್ಳದ್ದಾಗಬೇಕು. ಸಕೃದ್ದರ್ಶನಕ್ಕೆ ನಾವು ನೋಡುವ ಭೂಪೃಷ್ಠವೆಲ್ಲವೂ ಸಮುದ್ರ ತಳದಿಂದ ಆದುದು. ಮತ್ತೆ ಅದು ಸಮುದ್ರತಳಕ್ಕೇ ಹೋಗುವದು ಎಂದರೆ, ಯಾರೂ ನಂಬ ಲಾರರು. ಆದರೆ, ಹಳ್ಳದ ಸಮೀಪಕ್ಕೆ ಇರುವ ಹಳ್ಳಿಯವರಿಗೆ ಈ ಕಲ್ಪ ನೆಯು (ಅನುಭವವು) ಬೇಗ ಹೊಳೆಯುವದು. ಪ್ರತಿವರ್ಷ ಹಳ್ಳವು ಮಣ್ಣನ್ನು ಹೇಗೆ ಕೊರೆಯುತ್ತ ಹೋಗುವದು, ಹೊಲಗಳಿಗೆ ಹೊಲಗಳೇ ಹೇಗೆ ಹಳ್ಳಕ್ಕೆ ತುತ್ತಾಗುತ್ತವೆ ಎಂಬುದರ ಕಲ್ಪನೆಯುಳ್ಳವರಿಗೆ, ಹಳ್ಳದ ಅಗಣಿತ ಘಟನೆಗಳು ಲಕ್ಷಾವಧಿ ವರ್ಷ ನಡೆದರೆ ಏನು ಪರಿಣಾಮ ವಾಗಬಹುದೆಂಬ ಕಲ್ಪನೆಯು ಅವರಿಗೆ ಚನ್ನಾಗಿ ಹೊಳೆಯದಿರದು. ಸದ್ಯಕ್ಕೆ ಭೂಮಿಯ ಮೇಲಿರುವ ಕಲ್ಲುಗಳು ಸಮುದ್ರದ ಕೊಳಚಿಯಿಂ ದುಂಟಾಗಿವೆ ಎಂದು ಶಾಸ್ತ್ರಜ್ಞರು ಅನೇಕ ಆಧಾರಗಳಿಂದ ಸಿದ್ಧಮಾಡಿ ದ್ದಾರೆ. ಭೂಪೃಷ್ಠದ ಮೇಲಿರುವ ಕಲ್ಲುಗಳಲ್ಲಿ ಆಚರಷ್ಟು ಭಾಗವು ಇದೇ ಬಗೆಯ ಸಂಚಿತ ಥರಗಳಿಂದ (Sedimentary) ಆಗಿವೆ ಎಂದು ಪ್ರತಿ ಪಾದಿಸುತ್ತಾರೆ.

ಈ ಸಂಚಿತಥರಗಳು ಕಲ್ಲಾಗುವ ಕಾಲಕ್ಕೆ ಅದರ ನಡುವೆ ಸಿಕ್ಕ ವನ ಸ್ಪತಿಗಳು ಪ್ರಾಣಿಗಳುಕೂಡ ಕಲ್ಲಿನಷ್ಟೇ ಕಠಿಣವಾಗಿ ನಡುನಡುವೆ ಸಿಕ್ಕಿವೆ ಎಂದು ಹಿಂದೆ ಹೇಳಿದ್ದೇವೆ. ಅವುಗಳ ಅಭ್ಯಾಸದಿಂದ ಪುರಾತನಜೀವಶಾಸ್ತ್ರ (palaeontology) ಎಂಬ ಶಾಸ್ತ್ರವೇ ಹುಟ್ಟಿದೆ. ಅತ್ಯಂತ ಪ್ರಾಚೀನ ಕಾಲದ ಪ್ರಾಥಮಿಕ ಕಲ್ಲುಗಳಲ್ಲಿ ಇಂತಹ ಪ್ರಾಣಿಗಳ ಅವಶೇಷಗಳು ದೊರೆಯುವದಿಲ್ಲ. ಇಂತಹ ಕಲ್ಲುಗಳಿಗೆ (azoic) ಎಂದರೆ ಜೀವರಹಿತ

ಕಲ್ಲುಗಳೆನ್ನುವರು. ಅಂದರೆ ಆ ಕಲ್ಲು ಹುಟ್ಟುವ ಕಾಲಕ್ಕೆ ಪೃಥ್ವಿಯಲ್ಲಿ ವನಸ್ಪತಿಗಳು ಪ್ರಾಣಿಗಳು ಇನ್ನೂ ಹುಟ್ಟಿರಲಿಲ್ಲ. ಯಾವುದರಲ್ಲಿ ಜೀವ ಸೃಷ್ಟಿಯ ಪ್ರಾರಂಭವಾದುದು ಕಂಡುಬರುತ್ತದೆಯೋ ಅದಕ್ಕೆ (proterozoic)ಜೀವಪ್ರಾರಂಭಕಾಲೀನ ಕಲ್ಲುಗಳೆನ್ನುತ್ತಾರೆ. ಅದರ ಮುಂದಿನ ಕಾಲದ ಕಲ್ಲುಗಳಿಗೆ, ಪುರಾತನ ಜೀವಕಾಲೀನ(palaeozoic) ವೆನ್ನುವರು. ಇದರಲ್ಲಿ ಮೀನದಂಥ ಪ್ರಾಣಿಗಳೂ ಸಂಸೃಪಗಳೂ ಅಸ್ತಿತ್ವ ದಲ್ಲಿದ್ದುದಕ್ಕೆ ಸಾಕ್ಷಿಗಳು ದೊರೆಯುತ್ತವೆ. ಮುಂದಿನ ಕಾಲವೆಂದರೆ ಮಧ್ಯ ಜೀವಕಾಲೀನ (mesozoic) ಥರಗಳಲ್ಲಿಯ ಅವಶೇಷಗಳಿಂದ ಆ ಕಾಲ ದಲ್ಲಿ ಪ್ರಚಂಡಶರೀರದ ಸಂಸೃಪಗಳು, ಮೊಂಡಕಾಲುಗಳುಳ್ಳ ಮೊಸಳೆ ಯಂಥ ಪ್ರಾಣಿಗಳು ಪೃಥ್ವಿಯ ಮೇಲೆ ಇದ್ದುದು ಕಾಣುತ್ತದೆ. ಅನಂತ ರದ ಅಂದರೆ 'ಆಧುನಿಕ ಜೀವಕಾಲೀನ (cainozoic) ಥರವು' ಇದ ರಲ್ಲಿ ಸಸ್ತನ ಪ್ರಾಣಿಗಳೂ ಈಗಿರುವಂಥ ಪ್ರಾಣಿಸೃಷ್ಟಿಯೂ ಕಾಣುತ್ತದೆ. ಮೊದಲಿನಿಂದ ಕೊನೆಯ ವರೆಗಿನ ಥರಗಳಲ್ಲಿ ಸಿಗುವ ಅವಶೇಷಗಳಿಂದ ವನಸ್ಪತಿ ಹಾಗು ಪ್ರಾಣಿಗಳಲ್ಲಿ ಆದ ವಿಕಾಸವನ್ನು ಶಾಸ್ತ್ರಜ್ಞರು ಒಳ್ಳೇ ಸುಂದರ ರೀತಿಯಿಂದ ತೋರಿಸಿದ್ದಾರೆ.

ಸಂಚಿತ ಥರದ (sedimentary) ಕಲ್ಲುಗಳಲ್ಲದೆ ಎರಡನೇ ಬಗೆಯ ಅಗ್ನಿನಿರ್ಮಿತ (igneous) ಕಲ್ಲುಗಳು ಇರುವವು. ಇದರಲ್ಲಿ ಕೂಡ ಎರಡು ಜಾತಿಗಳು. ಜ್ವಾಲಾಮುಖಿಯ ಸ್ಫೋಟದೊಡನೆ ಹೊರಬೀಳುವ ಲಾವಾದ್ರವವು ಆರಿದ ನಂತರ ಉಂಟಾಗುವ ಕಲ್ಲುಗಳು (basalt)ದೊಂದು ಜಾತಿ. ಭೂಗರ್ಭದಲ್ಲಿ ಉಷ್ಣತೆಯಿಂದಲೂ ಮೇಲಿನ ಭಾರದಿಂದಲೂ ಕಲ್ಲಾಗಿ ಮುಂದೆ ಯಾವುದೊಂದು ಕಾರಣದಿಂದ ಮೇಲೆ ಬಂದ ಕಲ್ಲುಗಳ (granite) ದು ಎರಡನೆಯ ಜಾತಿ; ಈ ಜಾತಿಗಳಲ್ಲಿ ಕೆಲವೊಂದು ಜಾತಿಗೆ ಟ್ರ್ಯಾಪ ಎಂದು ಇಂಗ್ಲೀಷಿನಲ್ಲಿ ಅನ್ನುತ್ತಾರೆ. ಕರ್ನಾಟಕದಲ್ಲಿ ದೊರೆಯುವ ಕರೆಕಲ್ಲು ಈ ಜಾತಿಯದೇ ಇದ್ದು ಅದಕ್ಕೆ ಡೆಕ್ಕನ್ ಟ್ರ್ಯಾಪ್ ಎಂದೂ ಕರೆಯುವರು.

ಸಂಚಿತಥರದ ಕಲ್ಲುಗಳು, ಸ್ಫೋಟಜನಿತ,ಕಲ್ಲುಗಳು, ಅಗ್ನಿನಿರ್ಮಿತ ಕಲ್ಲುಗಳು ಈ ಮೂರರಲ್ಲಿಯೂ ಕಲ್ಲಿನ ನೂರಾರು ಜಾತಿಗಳು ಹುಟ್ಟಿವೆ.

ಅವುಗಳ ಗುಣಧರ್ಮಗಳೂ, ರಾಸಾಯನಿಕ ಘಟನೆಗಳೂ ಭಿನ್ನಭಿನ್ನವಿವೆ. ಅರ್ಥಾತ್ ಇವುಗಳಿಂದಾದ ಭೂಗುಣವು ಬೇರೆಬೇರೆಯಾಗಿರುವದು ಸ್ವಾಭಾವಿಕವಿದೆ. ಬೆಳೆಯುಳ್ಳ ಗುಣ, ನೀರನ್ನು ಹಿಡಿಯುವ ಗುಣ, ಇವೇ ಮೊದಲಾದವುಗಳ ಜ್ಞಾನವು ಭೂಗರ್ಭಶಾಸ್ತ್ರವನ್ನವಲಂಬಿಸಿವೆ ಎಂಬುದು ಇದರಿಂದ ತಿಳಿಯುವುದು.

ಇದಲ್ಲದೆ ಭೂಕಂಪ, ಜ್ವಾಲಾಮುಖಿ, ಹಿಮನದಿಗಳು, ಪರ್ವತೋತ್ಪತ್ತಿ ಇತ್ಯಾದಿ ಅನೇಕ ಮನೋರಂಜಕ ವಿಷಯಗಳು ಈ ಶಾಸ್ತ್ರದಲ್ಲಿದ್ದು ಅವುಗಳನ್ನು ಉಲ್ಲೇಖಿಸುವದು ಕೂಡ ಅಶಕ್ಯವಾಗಿದೆ. ಅದರಂತೆ ಖನಿಜ ಶಾಸ್ತ್ರ (minerology), ಧಾತುಪರೀಕ್ಷಾಶಾಸ್ತ್ರ (metalurgy), ಪ್ರಸ್ತರಪರೀಕ್ಷಾಶಾಸ್ತ್ರ (perology)ಮೊದಲಾದ ಅನೇಕ ವ್ಯವಹಾರ ಉಪಯುಕ್ತ ಶಾಖೆಗಳೂ ಈ ಶಾಸ್ತ್ರದಲ್ಲಿ ಅಡಕವಾಗುತ್ತವೆ. ಆದರೆ ಮೂಲಶಾಸ್ತ್ರವನ್ನೇ ಅರಿಯದ ನಾವು ಉಳಿದವುಗಳನ್ನು ತಿಳಿಯುವ ದೆಂತು! ಪರಕೀಯರು ಬಂದು ನಮ್ಮಲ್ಲಿ ಖಣಿಗಳನ್ನು ಅಗಿಯುವದು ಪ್ರಾರಂಭವಾದಾಗಲೇ ನಮ್ಮಲ್ಲಿ ಇಂತಹ ಧಾತುವಿದೆ ಎಂಬ ಜ್ಞಾನ ವಾಗುವಾಗ ಭೂಗರ್ಭಶಾಸ್ತ್ರದ ಮಾತಂತೂ ದೂರೇ ಉಳಿಯಿತು.

ಕಾಶಿಯ ಹಿಂದೂ ವಿದ್ಯಾಪೀಠದಲ್ಲಿ ಮಾತ್ರ ಖನಿಜಶಾಸ್ತ್ರ ಹಾಗು ಧಾತುಪರೀಕ್ಷಾಶಾಸ್ತ್ರಗಳು ಕಲಿಸಲ್ಪಡುತ್ತವೆಂದು ಕೇಳುತ್ತೇವೆ. ಆದರೆ ಭಾರತದ ಉಳಿದ ಯಾವ ವಿದ್ಯಾಪೀಠಗಳಲ್ಲಿಯೂ ಭೂಗೋಲ ವಿಷಯಕ ಶಾಸ್ತ್ರಗಳ ಅಭ್ಯಾಸವು ಒಳ್ಳೇ ರೀತಿಯಿಂದ ಮಾಡಿಸಲ್ಪಡುತ್ತದೆಂದು ನಮಗೆ ತೋರುವದಿಲ್ಲ. ವಸುಂಧರೆ, ರತ್ನಗರ್ಭೆ ಎಂದು ಪ್ರಾಚೀನರು ಯಾವ ನಮ್ಮ ಭೂಮಿಗೆ ಕರೆದರೋ ಯಾವ ಭೂಮಿಯನ್ನೇ ನಮ್ಮ ಜೀವಿತವು ಅವಲಂಬಿಸಿರುವದೋ ಅಂತಹ ಭೂಮಾತೆಯ ಜ್ಞಾನವನ್ನು ಚನ್ನಾಗಿ ಮಾಡಿಕೊಳ್ಳುವ ಬುದ್ಧಿಯು ಕೂಡ ನಮ್ಮಲ್ಲಿಲ್ಲ. ಇದಕ್ಕಿಂತ ಶೋಚನೀಯ ಸ್ಥಿತಿಯು ಇನ್ನೇನಿರಬೇಕು? ಭೂಪೃಷ್ಠ ಹಾಗು ಭೂಗರ್ಭಶಾಸ್ತ್ರದ ಅಧ್ಯಯನದಿಂದ ನಮ್ಮ ಜೀವನವು ಎಷ್ಟು ಸುಖಕರ ವಾಗುವದು! ಆದರೆ ಇದನ್ನು ಕೇಳುವವರಾರು?

ಜ್ಯೋತಿಷ್ಯಶಾಸ್ತ್ರದ ಕ್ಷೇತ್ರದಲ್ಲಿಯ ಅಪಾರವಾದ ವಿಶ್ವದಲ್ಲಿಯ

ಭೂಗೋಲಕ್ಕೆ ನಾವು ಒದಿದ್ದೇವೆ. ಇಲ್ಲಿ ನಮ್ಮ ಕಣ್ಣು ಮುಂದೆ ಮನೋಹರವಾದ ಪ್ರದೇಶವು ಕಣ್ಣಿಗೆ ಬೀಳುತ್ತಲಿದೆ. ಪೃಥ್ವಿಯಲ್ಲಿಯ ಜಡಪದಾರ್ಥಗಳು ಒಂದೆಡೆಗೆ ನಮ್ಮ ದಾರಿ ಕಾಯುತ್ತಲಿವೆ. ಇನ್ನೊಂದೆಡೆಗೆ ವನಸ್ಪತಿಗಳು, ಕ್ರಿಮಿಕೀಟಕಗಳು, ಪಶುಪಕ್ಷಿಗಳು ತಮ್ಮೆಡೆ ಒರಲು ಸನ್ನೆ ಮಾಡುತ್ತಲಿವೆ. ನಮ್ಮ ಮನಸ್ಸನ್ನೆಲ್ಲ ಆಕರ್ಷಿಸುವ ಮಾನವ ಜಾತಿಯು ನಮ್ಮೆದುರಿಗೆ ಇದೆ. ಭೂಗೋಲಶಾಸ್ತ್ರದಲ್ಲಿಯ ಹವೆ, ನೀರು, ಭೂಮಿ ಮೊದಲಾದವುಗಳನ್ನು ವಿಚಾರಮಾಡುವಷ್ಟರಲ್ಲಿಯೇ ಪದಾರ್ಥ ವಿಜ್ಞಾನ ಹಾಗು ಅದರ ಮುಂದೆ, ರಸಾಯನ ಶಾಸ್ತ್ರಗಳ ಕ್ಷೇತ್ರಗಳು ಕಾಣುತ್ತವೆ. ಇತ್ತ ಕಡೆಗೆ ಭೂಗರ್ಭಶಾಸ್ತ್ರಾಂತರ್ಗತ ಜೀವಶೇಷಗಳ ಅಭ್ಯಾಸವು ಜೀವಶಾಸ್ತ್ರಕ್ಕೆ ನಿಕಟಸಂಬಂಧವಿದ್ದು ಜೀವಶ್ರೇಷ್ಠನಾದ ಮನುಷ್ಯನ ಅಭ್ಯಾಸಕ್ಕೆ ಪ್ರೋತ್ಸಾಹಿಸುತ್ತಲಿದೆ. ಹೀಗೆ ನಾವು ಆಯ ಕಟ್ಟಿನ ಸ್ಥಳದಲ್ಲಿ ನಿಂತಿದ್ದೇವೆ. ನಾವು ಜಡವಿಜ್ಞಾನದ ಉಳಿದ ಭಾಗ ವನ್ನು ಬೇಗನೆ ಆಕ್ರಮಿಸಿ ಜೀವವಿಜ್ಞಾನದ ಕ್ಷೇತ್ರದಲ್ಲಿ ಕಾಲಿಡೋಣ.

## (ಕ) ಪದಾರ್ಥವಿಜ್ಞಾನ ಹಾಗು ರಸಾಯನ

ಈ ಎರಡೂ ಪ್ರಚಂಡಶಾಸ್ತ್ರಗಳ ವಿಷಯವಾಗಿ ನಮಗೆ ಹೆಚ್ಚಿಗೆ ಹೇಳುವ ಮನಸ್ಸಿಲ್ಲ. ಮೇಲಿನ ಸಂಗತಿಗಳನ್ನು ಹೇಳಬೇಕೆಂದರೂ ಕೂಡ ಈ ಪುಸ್ತಕದಷ್ಟೇ ಇನ್ನೊಂದು ಗ್ರಂಥವಾಗಬಹುದು. ಆದುದರಿಂದ ಈ ಎರಡೂ ಶಾಸ್ತ್ರಗಳು ಅದ್ಭುತ ಹಾಗು ವ್ಯವಹಾರಕ್ಕೆ ಉಪಯುಕ್ತವಿದ್ದರೂ ಕೂಡ ಅವುಗಳ ದರ್ಶನದಿಂದ ತೃಪ್ತರಾಗಬೇಕಾಗಿದೆ.

ಪದಾರ್ಥಗಳ ಅಂತರ್ಗತ ರಚನೆಯನ್ನು ನೋಡುವದೇ ರಸಾಯನ ಶಾಸ್ತ್ರದ ಕೆಲಸವು. ಆದುದರಿಂದ ಈ ಶಾಸ್ತ್ರದಲ್ಲಿ ಪ್ರತಿಯೊಂದು ಪದಾರ್ಥ ವನ್ನು ಹೇಗೆ ಪೃಥಃಕರಿಸಬೇಕೆಂಬುದನ್ನು ಹೇಳಿದೆ. ಯಾವ ಪದಾರ್ಥ ದಲ್ಲಿ ಅದಕ್ಕಿಂತ ಭಿನ್ನವಾದ ಒಂದು ಅಥವಾ ಅದಕ್ಕಿಂತ ಹೆಚ್ಚು ಪದಾರ್ಥ ಗಳ ಸಮಾವೇಶವಾಗಲು ಶಕ್ಯವಿದೆಯೋ ಅಂಥದಕ್ಕೆ ಸಂಯುಕ್ತದ್ರವ್ಯ ( compounds ) ವೆನ್ನುವರು. ಯಾವುದರಲ್ಲಿ ಭಿನ್ನ ಪದಾರ್ಥಗಳ

ಸಮಾವೇಶವಿಲ್ಲವೋ ಅದಕ್ಕೆ ಮೂಲದ್ರವ್ಯ (elements) ವೆನ್ನುವರು. ಸೃಷ್ಟಿಯಲ್ಲಿ ಒಟ್ಟು ೯೨ ಮೂಲದ್ರವ್ಯಗಳಿವೆ. ಉಜ್ಜ್ವಾಯು (ಹೈಡ್ರೊ-ಜನ), ಪ್ರಾಣವಾಯು (ಆಕ್ಸಿಜನ್), ಪಾರಜ, ಬಂಗಾರ, ಕಬ್ಬಿಣ ಮೊದಲಾದವು ಮೂಲದ್ರವ್ಯಗಳು.ಅಮೋನಿಯಮ್ ವಾಯು, ಕಾರ್ಬನ್‌ಡಾಯಾಕ್ಸಾಯಿಡವಾಯು, ನೀರು, ಮಣ್ಣು, ಕಟ್ಟಿಗೆ ಮೊದಲಾದವುಗಳು ಸಂಯುಕ್ತ ದ್ರವ್ಯಗಳು.

**ಅಣುಗಳು ಹಾಗು ಪರಮಾಣುಗಳು**

ಯಾವುದೊಂದು ಸಂಯುಕ್ತದ್ರವ್ಯವನ್ನು ವಿಭಾಗಿಸುತ್ತ ಹೋಗಿ ಕೊನೆಗೆ, ವಿಭಾಗಿಸಲು ಬಾರದ ಕಣದ ವರೆಗೆ ಬಂದು ಮುಟ್ಟಿದರೆ, ಆ ಕೊನೆಯ ಕಣಕ್ಕೆ 'ಅಣು' (molecule)ವೆನ್ನುವರು. ಅರ್ಥಾತ್ ಈ ಅಣುವು ರಾಸಾಯನಿಕ ಕ್ರಿಯೆಯಿಂದ ಪೃಥಃಕರಣ ಮಾಡದೆ ಕೇವಲ ವಿಭಾಗಿಸುವ ಕ್ರಿಯೆಯಿಂದ ಉಂಟಾದುದು. ಸಂಯುಕ್ತದ್ರವ್ಯವೇ ಆಗಲಿ, ಮೂಲ ದ್ರವ್ಯವೇ ಆಗಲಿ ಇಂತಹ ಸೂಕ್ಷ್ಮ ಅಣುಗಳಿಂದ ಆಗಿರುತ್ತವೆ. ಈ ಸಿದ್ಧಾಂತವನ್ನು ೧೮೧೧ರಲ್ಲಿ ಅವ್ಹೊಗಡ್ರೋ ಎಂಬ ಇಟಲಿಯ ಶಾಸ್ತ್ರಜ್ಞನು ಪ್ರಸ್ಥಾಪಿಸಿದನು.

ಪದಾರ್ಥವನ್ನು ತುಂಡುಮಾಡುವ ಕ್ರಿಯೆಯೇನು ರಾಸಾಯನಿಕ ಪೃಥಃಕರಣವಲ್ಲ. ಪದಾರ್ಥಗಳ ರಾಸಾಯನಿಕ ಪೃಥಃಕರಣ ಹಾಗು ಸಂಯೋಜನಗಳನ್ನು ಯಾವ ರೀತಿಯಲ್ಲಿ ಹೇಗೆ ಮಾಡಬೇಕೆಂಬ ನಿಯಮವನ್ನು ಕಂಡುಹಿಡಿಯಲು ಶಾಸ್ತ್ರಜ್ಞರು ಇದೇ ಸಮಯಕ್ಕೆ ಪ್ರಯತ್ನವನ್ನು ಪ್ರಾರಂಭಿಸಿದ್ದರು. ಈ ಅವಲೋಕನದ ಫಲವೇ, ಜಾನ ಡಾಲ್ಟನ್ನನೆಂಬ ಇಂಗ್ಲೀಷಶಾಸ್ತ್ರಜ್ಞನ ಪರಮಾಣು ಸಿದ್ಧಾಂತವು. 'ಸರ್ವ ಮೂಲ ದ್ರವ್ಯಗಳು ಅದೃಶ್ಯ, ಅವಿಭಾಜ್ಯ, ಹಾಗು ಅವಿನಾಶಿಯಾದಂಥ ಪರಮಾಣುಗಳಿಂದ (atoms) ಆಗಿವೆ' ಇದೇ ಡಾಲ್ಟನ್ನನ ಮುಖ್ಯ ಸಿದ್ಧಾಂತವು. ಅಣುವಿನ ವರೆಗೆ ಯಾವುದೇ ದ್ರವ್ಯದ ವಿಭಾಗವನ್ನು ಮಾಡಬಹುದು. ಆದರೆ, ಪರಮಾಣವು ಮಾತ್ರ ಮೂಲ ದ್ರವ್ಯವಿದ್ದರೇ ಆಗಲು ಶಕ್ಯವಿದೆ. ಭಿನ್ನ ಭಿನ್ನ ಮೂಲ ದ್ರವ್ಯಗಳ ಪರಮಾಣು

ಗಳ ವಿಶಿಷ್ಟ ಪ್ರಮಾಣದಲ್ಲಿ ರಾಸಾಯನಿಕ ಸಂಯೋಗವಾದರೆ ಅದರಿಂದ ಸಂಯುಕ್ತದ್ರವ್ಯದ ಒಂದು ಅಣುವು ಸಿದ್ಧವಾಗುತ್ತದೆ. ಇದರ ವಿರುದ್ಧ ವಾಗಿ ಸಂಯುಕ್ತ ದ್ರವ್ಯದ ಅಣುವನ್ನು ಪೃಥಃಕರಿಸಿದರೆ ಅದರಲ್ಲಿರುವ ಮೂಲದ್ರವ್ಯಗಳ ಪರಮಾಣುಗಳು ನಮಗೆ ದೊರೆಯುವವು. ಉದಾ ಹರಣೆಗಾಗಿ ಹೈಡ್ರೋಜನದ ಎರಡು ಪರಮಾಣಗಳು ಹಾಗು ಆಕ್ಸಿ ಜನದ ಒಂದು ಪರಮಾಣು ಕೂಡಿ ನೀರು—ಸಂಯುಕ್ತ ದ್ರವ್ಯದ ಒಂದು ಅಣುವು—ಸಿದ್ಧವಾಗುತ್ತದೆ. ಮತ್ತು ಆಕ್ಸಿಜನದ ಎರಡು ಪರಮಾಣು ಗಳು ಕೂಡಿ ಆಕ್ಸಿಜನದ ಒಂದು ಅಣುವಾಗುತ್ತದೆ. ಯಾವುದೇ ಸಂಯುಕ್ತ ದ್ರವ್ಯದ ಸೂಕ್ಷ್ಮತಮ ವಿಭಾಗವೆಂದರೆ ಅಣುವು. **ಯಾವುದೇ ಮೂಲದ್ರವ್ಯದ ಸೂಕ್ಷ್ಮತಮ ವಿಭಾಗವೆಂದರೆ ಪರಮಾಣವು.** ಅರ್ಥಾತ್ ಪರಮಾಣುವು ಯಾವುದೇ ಮೂಲ ದ್ರವ್ಯದ ತೀರ ಕೊನೆಯ ಅವಿಭಾಜ್ಯವಾದ ಘಟಕವು. ಅದಕ್ಕಿಂತಲೂ ಸೂಕ್ಷ್ಮವಾದ ವಿಭಾಗವು ಆಗುವದೇ ಶಕ್ಯವಿಲ್ಲ. ಈ ಮಾತು ಡಾಲ್ಟನ್ನನ ಕಾಲದಿಂದಲೂ ಸರ್ವ ಮಾನ್ಯವಾಗಿದೆ.

**ಪರಮಾಣುವೆಂದರೆ ಒಂದೊಂದು ಸೂರ್ಯಮಾಲೆ**

ಈ ಸಾಮಾನ್ಯ, ಸಿದ್ಧಾಂತಕ್ಕೆ ೨೦ನೇ ಶತಮಾನದ ಪ್ರಾರಂಭದಲ್ಲಿ ದೊಡ್ಡ ಧಕ್ಕೆ ತಗಲಿತು. ಪರಮಾಣುವಿನ ಪೃಥಃಕ್ಕರಣವನ್ನೂ ಶಾಸ್ತ್ರ ಜ್ಞರು ವಿದ್ಯುತ್ತಿನ ಸಹಾಯದಿಂದ ಮಾಡಿದ್ದಾರೆ. ಯಾವುದೇ ಮೂಲ ದ್ರವ್ಯದ ಪರಮಾಣುವು ಅನೇಕ ಋಣ—ವಿದ್ಯುತ್‌ಕಣ ( electron ), ಹಾಗು ಧನ—ವಿದ್ಯುತ್ಕಣ( proton )ಗಳಿಂದ ಕೂಡಿ ಆಗಿರುತ್ತದೆ. ಪರ ಮಾಣುವಿನ ಮಧ್ಯಭಾಗದಲ್ಲಿ ಅನೇಕ ಧನ—ವಿದ್ಯುತ್ಕಣಗಳು ಒತ್ತಟ್ಟಿಗೆ ಕಲೆತಿರುತ್ತವೆ. ಅವುಗಳೊಡನೆ ಸಂಲಗ್ನವಾದ ಋಣ—ವಿದ್ಯುತ್ಕಣ ಗಳೂ ಕೆಲವು ಇರುತ್ತವೆ. ಧನ ಹಾಗು ಋಣ ವಿದ್ಯುತ್ಕಣಗಳು ಕೂಡಿ ಆದ ಈ ಮಧ್ಯ ಭಾಗಕ್ಕೆ ಕೇಂದ್ರ ( nucleus ) ವೆನ್ನುವರು. ಈ ಕೇಂದ್ರದ ಸುತ್ತಲೂ ವಿಶಿಷ್ಟ ಕಕ್ಷೆಯಲ್ಲಿ ತಿರುಗುವ ಅನೇಕ ಋಣ-ವಿದ್ಯು ತ್ಕಣಗಳೂ ಇರುತ್ತವೆ. ಈ ಎಲ್ಲವೂ ಕೂಡಿ ಒಂದು ಪರಮಾಣು

ವಾಗಿರುತ್ತದೆ. ಅಂದಮೇಲೆ ಇಂತಹ ಸೂಕ್ಷ್ಮ ಪರಮಾಣುವೆಂದರೆ ಒಂದೊಂದು ಸೂರ್ಯಮಾಲೆಯೇ ಇದ್ದು ಅದರಲ್ಲ ಅನೇಕ ತೊಡಕಿನ ಘಟನೆಗಳು ನಡೆದಿರುತ್ತವೆ ಎಂದು ಶಾಸ್ತ್ರಜ್ಞರ ಮತ. ಯಾವಾಗಲೂ ಯಾವುದೇ ಮೂಲ ದ್ರವ್ಯದ ಪರಮಾಣುವು ಇರಲೊಲ್ಲದೇಕೆ ಅದರಲ್ಲಿ ಋಣ ವಿದ್ಯುತ್ಕಣಗಳು ಹಾಗು ಧನವಿದ್ಯುತ್ಕಣಗಳು ಯಾವಾಗಲೂ ಸರಿ ಯಾಗಿರುವುದೇ ಪರಮಾಣುವಿನಲ್ಲಿಯ ಅದ್ಭುತ ಸಂಗತಿಯು. ಚಿನ್ನವು ಮೂಲ ದ್ರವ್ಯವು. ಅದರ ಪರಮಾಣುವಿನಲ್ಲಿ ಧನ ವಿದ್ಯುತ್ಕಣಗಳು ೧೯೭ ಇರುತ್ತವೆ. ಇವುಗಳೊಡನೆ ಸಂಲಗ್ನವಾಗಿ ಕೇಂದ್ರದಲ್ಲಿ ವಾಸಿಸುವ ೧೧೮ ಋಣವಿದ್ಯುತ್ಕಣಗಳಿವೆ. ಈ ಕೇಂದ್ರದ ಸುತ್ತಲೂ ತಿರುಗುವ ಬಿಡಿ ಋಣ ವಿದ್ಯುತ್ಕಣಗಳು ೭೯, ಅರ್ಥಾತ್ ಋಣವಿದ್ಯುತ್ಕಣಗಳ ಸಂಖ್ಯೆಯು ೧೧೮ + ೭೯ = ೧೯೭. ಅಂತೂ ಧನವಿದ್ಯುತ್ಕಣಗಳಷ್ಟೇ ಪರ ಮಾಣುವಿನಲ್ಲಿ ಎರಡೂ ವಿದ್ಯುತ್ಕಣಗಳ ಸಂಖ್ಯೆಯು ಸಮವಿರುವದರಿಂದ ಅವುಗಳ ಶಕ್ತಿಯು ಸಮಬಲವಾಗಿ ಶಾಂತವಾಗುತ್ತವೆ. ಅದರಿಂದ ಪರ ಮಾಣುವು ಸಮಸ್ಥಿತಿಯಲ್ಲಿ ಉಳಿಯುತ್ತದೆ.

ನಾವು ಈಗ ನಡಿಸಿರುವ ವಿವೇಚನೆಯು ಎಂತಹ ಸೂಕ್ಷ್ಮ ದ್ರವ್ಯದ ವಿಷಯವಾಗಿದೆ ಎಂಬುದು ನಮಗೆ ಕಲ್ಪನೆ ಕೂಡ ಬರುವದು ಶಕ್ಯವಿಲ್ಲ. ಅಣುವೇ ( Molecule ) ಮೊದಲು ಅತ್ಯಂತ ಶಕ್ತಿಶಾಲಿಯಾದ ಸೂಕ್ಷ್ಮದರ್ಶಕಯಂತ್ರಕ್ಕೆ ಕಾಣುವದಿಲ್ಲ. ಅಣುವಿನ ವ್ಯಾಸವು ೧/೩೫೦೦೦೦೦೦೦ ದಿಂದ ೧/೫೦೦೦೦೦೦೦೦ ಇಂಚಿನವರೆಗೆ ಇರುತ್ತದೆ. ಇದರ ಅರ್ಧ ಅಥವಾ ಕಾಲುಪಾಲು ವ್ಯಾಸವು ಪರಮಾಣುವಿನದು ಇರಬೇಕು. ಅಂದಮೇಲೆ ಋಣ-ಹಾಗು ಧನ ವಿದ್ಯುತ್ಕಣ ವ್ಯಾಸವು ಎಷ್ಟಿರಬೇಕು? ಆದರೆ ಇಂತಹ ಅಕಲ್ಪನೀಯ ಸೂಕ್ಷ್ಮವಸ್ತುಗಳನ್ನು ಕೂಡ ಶಾಸ್ತ್ರ ಜ್ಞರು ಪ್ರಯೋಗರೂಪಿಯಾದ ಸಾಕ್ಷಿ ಸ್ಥಳದಲ್ಲಿ ನಿಲ್ಲಿಸಿ ಅವುಗಳ ಕಡೆ ಯಿಂದ ಗುಟ್ಟನ್ನು ಹೊರಗೆಡವುತ್ತಾರೆ. ಇದೆಂತಹ ಆಶ್ಚರ್ಯ!

ಪರಮಾಣುವಿನ ಅಂತರಂಗದಲ್ಲಿರುವ ಋಣ, ಧನವಿದ್ಯುತ್ಕಣಗಳು ವಿದ್ಯುತ್ತಿನಿಂದ ತುಂಬಿದ ದ್ರವ್ಯದ ಕಣಗಳಿರದೆ, ಪ್ರತ್ಯಕ್ಷ ವಿದ್ಯುತ್ತು

ಎಂದು ಪ್ರಯೋಗದಿಂದ ಶಾಸ್ತ್ರಜ್ಞರಿಗೆ ಕಂಡುಬಂದಿದೆ. ಮತ್ತು ವಿದ್ಯುತ್ ಇದು ಶಕ್ತಿ ಇರುವದರಿಂದ ಪರಮಾಣುವಿನ ಅಂತರ್ಗತ ಘಟಕವು ಕೂಡ ಶಕ್ತಿಯೆಂದೇ ಹೇಳಬೇಕಾಗುವದು. ಶಾಸ್ತ್ರಜ್ಞರು ಇಲ್ಲಿಯವರೆಗೆ, ಜಡ ದ್ರವ್ಯ ಹಾಗು ಶಕ್ತಿ ಈ ಎರಡೂ ಪರಸ್ಪರ ಭಿನ್ನವೆಂದು ತಿಳಿಯುತ್ತಿದ್ದರು. ಆದರೆ ಈ ತಿಳುವಳಿಕೆಯು ಸುಳ್ಳು ಎಂದು, ಜಡದ್ರವ್ಯ ಹಾಗು ಶಕ್ತಿಗಳು ಒಂದೇ ಎಂದು ಹೇಳಬೇಕಾಗಿದೆ. ಈ ಶಕ್ತಿಯು ಪರಮಾಣುವಿನಲ್ಲಿ ಸುಪ್ತಾವಸ್ಥೆಯಲ್ಲಿರುತ್ತದೆ. ಅರ್ಧಸೇರು ತೂಕದ ದ್ರವ್ಯದಲ್ಲಿರುವ ಪರಮಾಣುಗತವಾದ ಶಕ್ತಿಯು ೩೫೦೦,೦೦೦ ಖಂಡಿ ಭಾರವನ್ನು ನೂರು ಮೈಲು ಒಯ್ಯಲು ಸಮರ್ಥವಿರುತ್ತದೆ. ಈ ಶಕ್ತಿಯು ಸ್ವತಂತ್ರ ಹಾಗು ಕಾರ್ಯಕಾರಿ ಇರದೇ ಇರುವುದು ನಮ್ಮ ಭಾಗ್ಯವು. ಇಲ್ಲದೆ ಇದ್ದಲ್ಲಿ ಜಗತ್ತಿನಲ್ಲಿ ಪ್ರಳಯವೇ ಆಗುತ್ತಿತ್ತು.

ಸರ್ವವ್ಯಾಪಿಯೂ ಅಸಂವೇದ್ಯವೂ ಆದ 'ಈಥರ' ಎಂಬ ಕಿರಣದಿಂದ ನಮ್ಮ ಕಣ್ಣಿಗೆ ಕಾಣುವ ಪ್ರಕಾಶವು ಹುಟ್ಟುವುದು. ಪ್ರಕಾಶವೆಂದರೆ, ಈ ಕಿರಣದಿಂದ ಹೊರಟ ತೆರೆಗಳು. ಈ ತೆರೆಗಳು ತಮ್ಮನ್ನು ತಡೆಯುವ ಪದಾರ್ಥಕ್ಕೆ ಅಪ್ಪಳಿಸಿ ಮರಳಿ ನಮ್ಮ ಕಣ್ಣಿಗೆ ಬಂದು ಮುಟ್ಟಿದರೆ, ಆ ಪದಾರ್ಥವು ನಮ್ಮ ಕಣ್ಣಿಗೆ ಕಾಣುವದು. ಈಥರದಿಂದ ಹುಟ್ಟುವ ತೆರೆಗಳಲ್ಲಿ ಅಸಂಖ್ಯ ಪ್ರಕಾರಗಳಿವೆ. ನಮ್ಮ ಕಣ್ಣಿಗೆ ಕಾಣಿಸುವ ಪ್ರಕಾಶವು ಯಾವುದರಿಂದ ಹುಟ್ಟುವದೋ ಅಂಥ ತೆರೆಗಳು ತೀರ ತುಸು. ಕಣ್ಣಿಗೆ ಕಾಣಿಸುವ ಪ್ರಕಾಶಪಟ್ಟಕಕಿಂತಲೂ ಚಿಕ್ಕ ಹಾಗು ಅದಕ್ಕಿಂತಲೂ ಹೆಚ್ಚು ಗಾತ್ರವುಳ್ಳ ಎರಡೂ ದಿಕ್ಕಿನ ತೆರೆಗಳು ನಮ್ಮ ಕಣ್ಣಿನ ಮೇಲೆ ಯಾವ ಪರಿಣಾಮವನ್ನೂ ಮಾಡುವದಿಲ್ಲ. ಅಂದರೆ ಅವು ನಮ್ಮ ಕಣ್ಣಿಗೆ ಕಾಣುವದಿಲ್ಲ. ರಾಂಟಗೇನನೆಂಬ ಜರ್ಮನ್ ಶಾಸ್ತ್ರಜ್ಞನು ಹುಡುಕಿ ತೆಗೆದ 'ಕ್ಷ' ಕಿರಣವು ಈ ಜಾತಿಯದು. ಈ 'ಕ್ಷ' ಕಿರಣದ ತೆರೆಗಳು ಸೂಕ್ಷ್ಮವಿರುವದರಿಂದ ನಮ್ಮ ಕಣ್ಣಿಗೆ ಕಾಣುವದಿಲ್ಲ. ಆದರೆ ಫೊಟೋಗ್ರಾಫಿಯ ಪ್ಲೇಟಿನಮೇಲೆ ಅವುಗಳ ಪರಿಣಾಮವಾಗಿ ಫೊಟೋ ಮೂಡುತ್ತದೆ. 'ಕ್ಷ' ಕಿರಣದ ತೆರೆಗಳು

ಅತ್ಯಂತ ಸೂಕ್ಷ್ಮವಿರುವದರಿಂದ ಸಾಧಾರಣವಾಗಿ ಪ್ರಕಾಶದ ತೆರೆಗಳು ಎಲ್ಲಿಂದ ಪರಾವೃತ್ತ ಹೊಂದುವವೋ ಅಂತಹ ಘನ ಪದಾರ್ಥದಲ್ಲಿ ಸಹ ' ಕ್ಷ ' ಕಿರಣಗಳು ಹಾದುಹೋಗುತ್ತವೆ. ಘನತ್ವವು ಹೆಚ್ಚಿಗಿದ್ದ ಪದಾರ್ಥಗಳಲ್ಲಿ ಈ ಕಿರಣವು ಹೋಗಲು ಶಕ್ಯವಿಲ್ಲ. ನಮ್ಮ ಶರೀರದ ವಿಷಯವಾಗಿಯೇ ವಿಚಾರಮಾಡಿದರೆ, ಎಲುಬಿನಕ್ಕಿಂತ ಮಾಂಸದಲ್ಲಿ ಈ ಕಿರಣಗಳು ಹೆಚ್ಚಾಗಿ ಪಾರಾಗುವದರಿಂದ, ಶರೀರದಲ್ಲಿಯ ಮಾಂಸ ಹಾಗು ಎಲಬುಗಳನ್ನು ವಿಂಗಡಿಸಿ ತೋರಿಸುವ ಫೋಟೋವನ್ನು ಈ ಕಿರಣದಿಂದ ತೆಗೆಯಲು ಶಕ್ಯವಿದೆ. ಬಂದೂಕಿನ ಗುಂಡು ಸೀಸಿನದು ಇರುವದರಿಂದಲೂ, ಅದರಲ್ಲಿ ' ಕ್ಷ ' ಕಿರಣವು ಹಾಯದ್ದರಿಂದಲೂ ' ಕ್ಷ ' ಕಿರಣದಿಂದ ತೆಗೆದ ಫೋಟೋದಲ್ಲಿ ಶರೀರದ ಯಾವ ಭಾಗದಲ್ಲಿ ಗುಂಡು ಇರುವದೆಂಬದು ಚಟ್ಟನೆ ತಿಳಿಯುವದು. ಈ ಬಗೆಯಾಗಿ ಅಂತರ್ಗತ ವಿಕೃತಿಯನ್ನು ಅರಿಯಲು ' ಕ್ಷ ' ಕಿರಣದ ಉಪಯೋಗವು ಬಹಳವಾಗಿದೆ.

ಈಥರದ ಅತ್ಯಂತ ಸೂಕ್ಷ್ಮವಾದ ' ಕ್ಷ ' ಕಿರಣವು ಶರೀರದಲ್ಲಿದ್ದ ಅದೃಶ್ಯ ವಸ್ತುಗಳನ್ನು ತಿಳಿಯಲು ಉಪಯೋಗವಾದಂತೆ, ಈಥರದ ಎಲ್ಲಕ್ಕೂ ದೊಡ್ಡ ತೆರೆಗಳು ದೂರದ ಧ್ವನಿಯನ್ನು ಕೇಳಲು ಉಪಯೋಗಬೀಳುತ್ತಿರುವವು. ತಂತಿ ಇಲ್ಲದ ತಾರಾಯಂತ್ರ ಹಾಗು ರೇಡಿಯೋಗಳಲ್ಲಿ ವಿದ್ಯುತ್ತಿನ ಯೋಗದಿಂದ ಈಥರದಲ್ಲಿ ಒಂದು ಸ್ಥಳದಲ್ಲಿ ವಿಶಿಷ್ಟ, ಉದ್ದವಾದ ತೆರೆಗಳನ್ನು ಉತ್ಪನ್ನಮಾಡಿ ಎರಡನೆಯ ಕಡೆಗೆ ಆ ತೆರೆಗಳ ಆಂದೋಲನವನ್ನು ಸ್ವೀಕರಿಸುವ ಯೋಜನೆಯು ಮಾಡಲ್ಪಟ್ಟಿರುತ್ತದೆ. ಅದರಂತೆಯೇ ಈ ತೆರೆಗಳ ಉಪಯೋಗಮಾಡಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಫೋಟೋ ಕಳಿಸುವ ಹಾಗು ದೂರ ದೇಶದಲ್ಲಿಯ ನೋಟಗಳನ್ನು ಪ್ರತ್ಯಕ್ಷವಾಗಿ ತೋರಿಸುವ ಯೋಜನೆಯಲ್ಲಿ ಶಾಸ್ತ್ರಜ್ಞರು ಮಗ್ನರಾಗಿದ್ದಾರೆ. ಅದಕ್ಕೆ ಯಶ ದೊರೆಯುವ ಚಿನ್ಹಗಳು ಕಾಣುತ್ತಿವೆ. ಹಾಗಾದರೆ ಮನುಷ್ಯನು ಮನೆಯಲ್ಲಿಯೇ ಕುಳಿತು ಸಾವಿರಾರು ಮೈಲು ದೂರದಲ್ಲಿರುವವರೊಡನೆ ಮಾತನಾಡಬಹುದು ಹಾಗು ಅವರ ದರ್ಶನ ತೆಗೆದುಕೊಳ್ಳಬಹುದು.

**ಅದ್ಭುತವಾದ ರೇಡಿಯುಮ್—**

ಇಷ್ಟೇ ಆಶ್ಚರ್ಯಕಾರಕ ವಸ್ತುವೆಂದರೆ 'ಕಿರಣೋತ್ಸರ್ಜಕ'ವು. ಇದರ ಶೋಧವು ಮೊದಲು ೧೮೯೬ ರಲ್ಲಿ 'ಬೇಕೇರೇಲ' ಎಂಬ ಫ್ರೆಂಚ ಶಾಸ್ತ್ರಜ್ಞನಿಂದ ಆಯಿತು. ಮುಂದೆ ೧೮೯೮ ರಲ್ಲಿ ಪೋಲಂಡದಲ್ಲಿ ಹುಟ್ಟಿ ಫ್ರೆಂಚ ಶಾಸ್ತ್ರಜ್ಞನನ್ನು ಮದುವೆಯಾದ 'ಕ್ಯುರಿ' ಎಂಬ ವಿದುಷಿಯು 'ರೇಡಿಯಮ್' ಎಂಬ ಅತಿವಿಖ್ಯಾತವಾದ 'ಕಿರಣೋತ್ಸರ್ಜಕ' ವಸ್ತುವಿನ ಶೋಧವನ್ನು ಮಾಡಿದಳು. ರೇಡಿಯುಮ್ ಹಾಗು ಅದರ ತತ್ಸಮ ವಸ್ತುಗಳಲ್ಲಿ ಅವಿಶ್ರಾಂತವಾಗಿ ಕಿರಣಗಳನ್ನೂ ಶಕ್ತಿಯನ್ನೂ ಹೊರಚಲ್ಲುವ ಅಲೌಕಿಕ ಗುಣವಿರುತ್ತದೆ. ಇದರಿಂದ ಮೂರು ಬಗೆಯ ಅದೃಶ್ಯ ಕಿರಣಗಳು ಹೊರಬೀಳುತ್ತವೆ. 'ಅ' ಕಣ (A. particles) 'ಬ' ಕಣ (B. particles) ಹಾಗು 'ಕ' ಕಿರಣ (X-Rays) ಹೀಗೆ ಇವುಗಳಿಗೆ ಸಂಜ್ಞೆಯನ್ನು ಕೊಟ್ಟಿದ್ದಾರೆ. 'ಅ' ಕಿರಣವೆಂದರೆ ಪದಾರ್ಥವು ವಿಭಾಗಿಸಲ್ಪಟ್ಟು ಅದರಿಂದ ಹೊರಬಿದ್ದ 'ಹೇಲಿಯಮ್' ಎಂಬ ಮೂಲ ದ್ರವ್ಯದ ಪರಮಾಣುವು. 'ಬ' ಕಿರಣವೆಂದರೆ ಇದೇ ರೀತಿಯಾಗಿ ಹೊರಬಿದ್ದ ಋಣವಿದ್ಯುತ್ಕಣವು. ಈ ಬಗೆಯಾಗಿ ರೇಡಿಯುಮ್‌ವು, ತನ್ನಷ್ಟಕ್ಕೆ ತಾನೇ ಒಂದೇಸವನೆ ವಿಘುಟನೆಯಾಗುತ್ತ ಸೂಕ್ಷ್ಮವಾದ ಕಣಗಳನ್ನು ಒಂದೇಸವನೆ ಹೊರಚಲ್ಲುತ್ತದೆ. ಇದೆಂಥ ಆಶ್ಚರ್ಯವು! 'ಕ' ಕಿರಣವು ಮಾತ್ರ ನಮ್ಮ ಕಣ್ಣಿಗೆ ಕಾಣುವ ಪ್ರಕಾಶದಂಥ ತೆರೆಯ ರೂಪದಲ್ಲಿರುತ್ತದೆ. ಆದರೆ ಇದರ ತೆರೆಗಳು 'ಕ್ಷ' ಕಿರಣಕ್ಕಿಂತಲೂ ಸೂಕ್ಷ್ಮವಿರುತ್ತವೆ. ಆದುದರಿಂದ ನಮ್ಮ ಕಣ್ಣಿನ ಮೇಲೆ ಇವುಗಳ ಪರಿಣಾಮವೇನೂ ಆಗುವದಿಲ್ಲ. ರೇಡಿಯುಮದ ವಿಘಟನೆಯಿಂದ ಉಷ್ಣತೆಯು ಉತ್ಪನ್ನವಾಗುತ್ತದೆ. ರೇಡಿಯುಮದ ಸರ್ವ ಗುಣಧರ್ಮಗಳ ಉಪಯೋಗದಿಂದ ಬೇನೆಗಳು ನಿವಾರಣೆಯಾಗುತ್ತಿರುವವು.

'ಸಾಪೇಕ್ಷತಾ' (relativity) ಎಂಬ ಮಹತ್ವದ ಹಾಗು ಗಹನವಾದ ಸಿದ್ಧಾಂತವನ್ನು 'ಆಯಿನಸ್ಟಾಯಿನ್' ಎಂಬ ಜರ್ಮನ್ ಶಾಸ್ತ್ರಜ್ಞನು ಸ್ಥಾಪಿಸಿದ್ದು, ಅದರ ಚರ್ಚೆಯು ಈಗ ಎಲ್ಲ ಕಡೆಗೆ ನಡೆ

ದಿದೆ. ವಸ್ತುವಿನ ಉದ್ದಗಲ ಮೊದಲಾದ ಎಲ್ಲ ಪರಿಮಾಣಗಳು ಸ್ವತಃ ಸಿದ್ಧವಿರದೆ ನೋಡುವವನ ಗತಿ ಭಿನ್ನತೆಯನ್ನು ಅವಲಂಬಿಸಿದೆ. ಈ ಸಿದ್ಧಾಂತದಿಂದ ಶಾಸ್ತ್ರಗಳೆಲ್ಲ ತತ್ವಜ್ಞಾನದ ಕ್ಷೇತ್ರದಲ್ಲಿ ಬರುತ್ತಿರುವದರಿಂದ ತತ್ವಜ್ಞಾನಿಗಳಲ್ಲಿ ಅಲ್ಲೋಲಕಲ್ಲೋಲವಾಗಿದೆ.

ಪದಾರ್ಥವಿಜ್ಞಾನ ಹಾಗು ರಸಾಯನ ಶಾಸ್ತ್ರಗಳ ಒಂದೆರಡು ಸಂಗತಿಗಳ ದಿಗ್ದರ್ಶನವನ್ನು ಮಾತ್ರ ಇಲ್ಲಿಯ ವರೆಗೆ ಮಾಡಿತು. ಈ ಶಾಸ್ತ್ರವು ಎಷ್ಟು ಹೃದಯಂಗಮ ಹಾಗು ಉದ್ಬೋಧಕವಿದೆ ಎಂಬುದನ್ನು ತೋರಿಸುವುದೇ ಇದರ ಉದ್ದೇಶವಿದ್ದುದರಿಂದ ಶಾಸ್ತ್ರೀಯವಾಗಿ ನಾವು ಹೆಚ್ಚು ಒಳಹೊಕ್ಕಿಲ್ಲ. ಅದು ಶಾಸ್ತ್ರಜ್ಞರ ಕೆಲಸವು. ಇನ್ನು ನಾವು ಜಡ ಸೃಷ್ಟಿಯನ್ನು ಬಿಟ್ಟು ಇವಕ್ಕಿಂತ ಅದ್ಭುತವಾದ ಜೀವ ಸೃಷ್ಟಿಯಲ್ಲಿ ಇಳಿಯೋಣ.

---

# ಒಂಬತ್ತನೆಯ ಮೆಟ್ಟಿಲು

## ಶಾಸ್ತ್ರಗಳ ರೂಪರೇಖೆ: ಜೀವವಿಜ್ಞಾನ

### (೧) ಸ್ವರೂಪ ವರ್ಣನೆ ಹಾಗು ಶಾಖಾವಿಸ್ತಾರ

'ಜೀವಶಾಸ್ತ್ರಕ್ಕೆ ಇಂಗ್ಲೀಷನಲ್ಲಿ (Biology) ಎನ್ನುತ್ತಾರೆ. ಈ ಶಬ್ದವು Bios (Life, ಜೀವ) ಹಾಗು Logos (Discoursc ಪ್ರಬಂಧ) ಎಂಬ ಈ ಎರಡು ಗ್ರೀಕ ಶಬ್ದಗಳ ಸಮುಚ್ಚಯವು. ನಿಜವಾಗಿಯೂ ಈ ಶಬ್ದದಿಂದ ಹೊರಡುವ ಅರ್ಥವೇನು ಹಳೆಯದಲ್ಲ. ಸರ್ವ ಸಜೀವ ವಸ್ತುಗಳ ಜೀವನವ್ಯಾಪಾರವನ್ನೂ ರಚನೆಗಳನ್ನೂ ಒಟ್ಟಿಗೆ ವಿಚಾರಮಾಡಲು ಶಕ್ಯವಿದೆ ಎಂಬ ಕಲ್ಪನೆಯನ್ನು 'ಜೀವಶಾಸ್ತ್ರ' ವೆಂಬ ಒಂದೇ ಶಬ್ದದಲ್ಲಿ ಹೇಳುವುದೇ ಇದರ ಮುಖ್ಯ ಉದ್ದೇಶವು. ಫ್ರೆಂಚ ತತ್ವಜ್ಞಾನಿಯಾದ ಲಾಮಾರ್ಕನೂ, ಜರ್ಮನ್ ವಿದ್ವಾಂಸನಾದ ಟ್ರೆವ್ಹಿರೇನಸನೂ ತಮ್ಮ ಗ್ರಂಥಗಳಲ್ಲಿ ಮೊದಲು ೧೮೦೨ ರಲ್ಲಿ ಜೀವಶಾಸ್ತ್ರ ಶಬ್ದವನ್ನು ಉಪಯೋಗಿಸಿದರು. ಅದಕ್ಕೂ ಮೊದಲು ಜೀವ ಸೃಷ್ಟಿಯ ವಿಷಯವಾಗಿ ವಿಚಾರ ಮಾಡುವ ಜ್ಞಾನಶಾಖೆಗೆ ನಿಸರ್ಗೇತಿಹಾಸ (Natural history) ವೆಂದು ಅನ್ನುತ್ತಿದ್ದರು. ಇದರಲ್ಲಿ ವನಸ್ಪತಿ ಹಾಗು ಪ್ರಾಣಿಶಾಸ್ತ್ರಗಳೆಂಬ ಎರಡು ಪ್ರತ್ಯೇಕ ಭಾಗಗಳನ್ನು ಮಾಡುತ್ತಿದ್ದರು. ಆದರೆ ಸೂಕ್ಷ್ಮದರ್ಶಕ ಯಂತ್ರದ ಶೋಧವಾಗಿ ಅದರ ಸಹಾಯದಿಂದ ನಿರೀಕ್ಷಿಸಿದಂತೆ ಅವರಿಗೆ ಸರ್ವ ಜೀವಗಳಲ್ಲಿಯೂ ಸಮಾನತೆ, ಹಾಗು ಮೂಲ ತತ್ವಗಳ ಏಕತ್ವವು ಕಂಡುಬಂದಿತು. ಮನುಷ್ಯನು ಕೂಡ ಉಳಿದ ಜೀವಸೃಷ್ಟಿಯಂತೆಯೇ ಇದ್ದು ಉಳಿದ ಪ್ರಾಣಿಗಳಿಗೆ ಅನ್ವಯಿಸುವ ನಿಯಮಗಳೇ ಸಾಧಾರಣವಾಗಿ ಮನುಷ್ಯನಿಗೂ ಹತ್ತುತ್ತವೆ ಎಂದು ಶಾಸ್ತ್ರಜ್ಞರಿಗೆ ಕಂಡುಬಂದಿದೆ. ಆದುದರಿಂದ ಸರ್ವ ಜೀವ

ಜಾತಿಗಳ ವಿಚಾರಮಾಡುವ ಶಾಸ್ತ್ರವು ಒಂದೇ ಎಂಬ ಕಲ್ಪನೆಯು ದೃಢ ವಾಯಿತು. ಈ ಅರ್ಥವನ್ನು ಪೂರ್ಣವಾಗಿ ಹೇಳುವ ಬಾಯಾಲಜಿ ಪ್ರಕರಣವೇ ಆಗಿದೆ.

ಜೀವ ಶಾಸ್ತ್ರವು ಅತ್ಯಂತ ಕ್ಷುದ್ರ ಜೀವಜಂತುವಿನಿಂದ ಮೊದಲು ಮಾಡಿ ಮನುಷ್ಯನ ವರೆಗಿನ ಎಲ್ಲ ಜೀವಗಳಲ್ಲಿ ಏಕರೂಪತೆಯನ್ನು ತೋರಿ ಸುತ್ತಿದ್ದರೂ ಅದರ ಶಾಖೆಗಳು ಪ್ರಚಂಡವಾಗಿ ಬೆಳೆದು ಸ್ವತಂತ್ರ ಶಾಸ್ತ್ರ ಗಳೇ ಆಗಿವೆ. ಇಂದು ಜೀವಶಾಸ್ತ್ರವು ಕಲ್ಪನೆ ಮೀರಿ ಬೆಳೆದು ದೊಡ್ಡ ಪ್ರಕರಣವೇ ಆಗಿದೆ.

ಈ ಶಾಸ್ತ್ರದ ಪ್ರಚಂಡ ಸ್ವರೂಪದ ಕಲ್ಪನೆ ಬರಲು ಒಂದು ಉದಾ ಹರಣೆ ಸಾಕು. ಅರಿಸ್ಟಾಟಲನ ಶಿಷ್ಯನಾದ ಥಿಯೊಫ್ರಾಸ್ಟನು (ಕ್ರಿ. ಪೂ. ೩೦೦) ವನಸ್ಪತಿ ಶಾಸ್ತ್ರದ ತನ್ನ ಗ್ರಂಥದಲ್ಲಿ ೫೦೦ ವನಸ್ಪತಿಗಳ ವರ್ಣನೆ ಯನ್ನು ಮಾಡಿದ್ದಾನೆ. ೧೫ ನೇ ಶತಮಾನದ ಅಭ್ಯಾಸಿಗಳು ೨೦೦೦ ವನಸ್ಪತಿಗಳ ಉಲ್ಲೇಖವನ್ನು ಮಾಡುತ್ತಾರೆ. ೧೭ ನೇ ಶತಮಾನದಲ್ಲಿ ಈ ಸಂಖ್ಯೆಯು ೧೦೦೦೦ ಕ್ಕೆ ಮುಟ್ಟಿದೆ. ೨೦ ನೇ ಶತಮಾನದಲ್ಲಿ ೪ ಲಕ್ಷಕ್ಕಿಂತ ಹೆಚ್ಚಾಗಿದೆ. ಎಷ್ಟು ವನಸ್ಪತಿಗಳ ಜಾತಿಯ ಸಂಖ್ಯೆಯು! ಪ್ರಾಣಿಜಾತಿಯ ಸಂಖ್ಯೆಯು ೫೯೭೦೦೦ ಕ್ಕೆ ಮುಟ್ಟಿದ್ದು ದಿನದಿನಕ್ಕೆ ಹೆಚ್ಚಾಗುತ್ತ ನಡೆದಿದೆ.

ವನಸ್ಪತಿ ಹಾಗು ಪ್ರಾಣಿಸೃಷ್ಟಿಯ ಈ ವಿಸ್ತಾರವನ್ನು ಕಂಡು ಜೀವಶಾಸ್ತ್ರವು ಬೇರೆ ಬೇರೆ ದೃಷ್ಟಿಯಿಂದ ಇವುಗಳ ವಿಷಯಕ್ಕೆ ವಿಚಾರ ಮಾಡುತ್ತದೆ. ಪ್ರಾಣಿಗಳ ಹಾಗು ವನಸ್ಪತಿಗಳ ವಿಚಾರವೆಂದರೆ ಅವು ಗಳ ಶರೀರದ ವಿಷಯಕ ವಿಚಾರ ಮಾತ್ರ. ಶರೀರದಲ್ಲಿರುವ ಜೀವ ಅಥವಾ ಆತ್ಮದ ವಿಷಯವು ಇದರಲ್ಲಿ ಬರುವದಿಲ್ಲ. ಯಾಕೆಂದರೆ ಇವು ಇಂದ್ರಿಯ ಗಳಿಗೆ ಅಗೋಚರವಾದುದರಿಂದ ನಿರೀಕ್ಷಣದ ವಿಷಯವಾಗುವದಿಲ್ಲ. ಈ ಜೀವತತ್ವದ ಅಸ್ತಿತ್ವದಿಂದ ನಡೆಯುವ ಶರೀರವ್ಯಾಪಾರದ ವಿಚಾರ ವಷ್ಟೇ ನಮಗೆ ಸಾಧ್ಯ. ಶಾಸ್ತ್ರವು ಇಂದ್ರಿಯಗಳನ್ನು ಅನುಭವಗಳಿಂದಲೇ ರಚಿಸಲ್ಪಡುತ್ತದೆ ಎಂದು ಹಿಂದೆ ಹೇಳಿದ್ದೇವೆ.

(೧) **ಶರೀರ ರಚನಾಶಾಸ್ತ್ರ—**

ಅಖಿಲ ಜೀವಸೃಷ್ಟಿಯು ಶರೀರದ ಮುಖಾಂತರವಾಗಿ ನಡೆಯುವ ಜೀವನ ವ್ಯಾಪಾರಗಳನ್ನು ವಿಚಾರಿಸುವದೇ ಈ ಶಾಸ್ತ್ರದ ವಿಷಯವು. ಆದರಲ್ಲಿ ಶರೀರರಚನೆಯ ವಿಷಯವು ಮೊದಲು ಬರುತ್ತದೆ. ಶರೀರದ ಅಂತರ್ಬಾಹ್ಯಗಳು ಹೇಗುಂಟಾಗಿವೆಯೆಂಬುದನ್ನು ನಿರೀಕ್ಷಿಸಿ ವಿಚಾರ ಮಾಡುವದೇ ಶರೀರರಚನಾಶಾಸ್ತ್ರದ ಮುಖ್ಯ ಕಾರ್ಯ. ಶರೀರರಚನೆಯನ್ನು ಮೂರು ಬಗೆಯಿಂದ ನಿರೀಕ್ಷಿಸಬಹುದು. ಶರೀರದ ಅವಯವಗಳ ಬಾಹ್ಯ ರೂಪರೇಖೆಗಳನ್ನೂ ಬಣ್ಣವನ್ನೂ ನಿರೀಕ್ಷಿಸುವದು ಮೊದಲನೆಯದು(Morphology). ಶರೀರದ ಅಂತರ್ಭಾಗದ ರಚನೆಯನ್ನು ( anatomy ) ಶರೀರ ಛೇದಿಸಿ ನೋಡುವುದು ಎರಡನೆಯದು. ಇದಕ್ಕಿಂತ ಮುಂದೆ ಹೋಗಿ ಶರೀರದಲ್ಲಿರುವ ಘಟಕಗಳು (Tissues) ಯಾವು ಎಂಬುದನ್ನು ನೋಡಿ ಅವುಗಳನ್ನು ಪೃಥಕ್ಕರಿಸಿ (Histology) ನಿರೀಕ್ಷಿಸುವದು ಮೂರನೆಯದು. ಇದಕ್ಕೆ ಇಂಗ್ಲೀಷನಲ್ಲಿ' ಹಿಸ್ಟಾಲಜಿ' ಎನ್ನುವರು. ಶಸ್ತ್ರಗಳ ಉಪಯೋಗದಿಂದ ಮಾಡಿದ ನಿರೀಕ್ಷಣಕ್ಕೆ 'ಅನಾಟಾಮಿ' ಎಂದೂ, ಸೂಕ್ಷ್ಮದರ್ಶಕ ಯಂತ್ರದಿಂದ ಮಾಡಿದ ನಿರೀಕ್ಷಣಕ್ಕೆ 'ಹಿಸ್ಟಾಲಜಿ' ಎಂದೂ ಅನ್ನುವರು.

(೨) **ಶರೀರವ್ಯಾಪಾರಶಾಸ್ತ್ರ—**

ರಚನಾಶಾಸ್ತ್ರವು ಶರೀರದ ಜಡಸ್ವರೂಪವನ್ನು ಹೇಳುತ್ತದೆ. ಆದರೆ ಇಷ್ಟರಿಂದಲೇ ಕಾರ್ಯವಾಗದು. ಶರೀರವು ಹೇಗಿದೆ ಎಂಬುದಕ್ಕಿಂತ ಹೇಗೆ ನಡೆಯುತ್ತದೆ ಎಂಬುದು ಮಹತ್ವದ್ದಿದೆ. ಯಾವುದೇ ಶರೀರವಾಗಲಿ ಹುಟ್ಟಿದಂದಿನಿಂದ ಮರಣದವರೆಗೆ ಎಂದೂ ನಿಷ್ಕ್ರಿಯವಾಗುವದಿಲ್ಲ. ಅದರಲ್ಲಿ ಅನೇಕ ಕ್ರಿಯೆಗಳು ನಡೆದಿರುತ್ತವೆ. ಶರೀರದಲ್ಲಿ ಚೈತನ್ಯ ಹಾಗು ಶಕ್ತಿಗಳು ಹೇಗೆ ಉತ್ಪನ್ನವಾಗುತ್ತವೆ? ಅವು ಹೇಗೆ ಹೆಚ್ಚಾಗುತ್ತವೆ? ಎಂಬುದನ್ನು ಶಾಸ್ತ್ರೀಯವಾಗಿ ವಿಚಾರ ಮಾಡುವ ಶಾಸ್ತ್ರಕ್ಕೆ ಶರೀರವ್ಯಾಪಾರಶಾಸ್ತ್ರ (physiology) ವೆಂದು ಕರೆಯುವರು. ಭಾರತೀಯ ಲೇಖಕರು ' ಇಂದ್ರಿಯ ವಿಜ್ಞಾನ ' ಅಥವಾ ಶರೀರಗುಣಧರ್ಮ ' ಶಾಸ್ತ್ರವೆಂದು ಇದಕ್ಕೆ ಕರೆದಿರುವರು.

ಯಾವುದೇ ಪ್ರಾಣಿಯ ಅಥವಾ ವನಸ್ಪತಿಯ ಶರೀರವು ಅದ್ಭುತ ಘಟನೆಗಳ ಹಾಗು ಆಶ್ಚರ್ಯಕಾರಕ ಯೋಜನೆಗಳ ಬೀಡಾಗಿದೆ. ಅದ್ಭುತ ರಮ್ಯ, ಉದಾತ್ತ, ಹಾಗು ಬೋಧಪ್ರದ ಯಾವುದೇ ರಸಪ್ರಧಾನವಾದ ಕಾದಂಬರಿಗಿಂತ ಬ್ರಹ್ಮನು ಬರೆದ ಈ ಕಾದಂಬರಿಯು ಅಲೌಕಿಕ ವಿದೆ. ಶರೀರ ವ್ಯಾಪಾರಗಳ ಕಥೆಯನ್ನು ಕೇಳಿ ಆಶ್ಚರ್ಯ ಪಡದ ಮನು ಷ್ಯನೇ ಇಲ್ಲ.

ಜಗತ್ತಿನಲ್ಲಿ ಪ್ರತಿಯೊಂದು ಪ್ರಾಣಿಯು ಆತ್ಮರಕ್ಷಣೆಗಾಗಿಯೂ ಪ್ರಜೋತ್ಪಾದನೆಗಾಗಿಯೂ ಎಡೆಬಿಡದೆ ಪ್ರಯತ್ನಿಸುವದು ನಮ್ಮ ಕಣ್ಣಿಗೆ ಬೀಳುತ್ತದೆ. ಈ ಎರಡೂ ಪ್ರವೃತ್ತಿಗಳು ಜೀವಗಳಲ್ಲಿ ಸಾಮಾನ್ಯ ವಿದ್ದು ಅವುಗಳಲ್ಲಿ ಯಾವುದಾದರೊಂದು ಇಡೀ ಜೀವನದ ಬುಡಕ್ಕೆ ಇರುತ್ತದೆ. ಆತ್ಮರಕ್ಷಣೆಯಲ್ಲಿ ಅರ್ಥಾತ್, ಅನ್ನಸಂಪಾದನೆ, ಸುಖ ಸಂವರ್ಧನೆ, ದೇಹರಕ್ಷಣೆ, ಹಾಗು ಪೋಷಣೆ ಮೊದಲಾದ ಸಂಗತಿಗಳು ಒಳಗೊಳ್ಳುತ್ತವೆ.

‘ ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ।
ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ ’
‘ ಆತ್ಮಾನಂ ಸತತಂ ರಕ್ಷೇತ್ ದಾರೈರಪಿ ಧನೈರಪಿ ’

ಇತ್ಯಾದಿ ಶ್ರುತಿವಾಕ್ಯಗಳು ಆತ್ಮರಕ್ಷಣೆಯ ಪ್ರವೃತ್ತಿಯನ್ನು ಬಲವಾಗಿ ಉಲ್ಲೇಖಿಸುತ್ತವೆ. ಆತ್ಮರಕ್ಷಣೆಯ ವ್ಯಾಪಾರವು ಶರೀರ ರಚನೆಯ ದೃಷ್ಟಿಯಿಂದ ಇಬ್ಬಗೆಯಾಗಿದೆ. ಶರೀರಪೋಷಣೆಗಾಗಿ ಶರೀರ ಹಾಗು ಜೀವಗಳ ನಡುವೆ ನಡೆದ ವ್ಯಾಪಾರಗಳೆಲ್ಲ ಮೊದಲನೇ ಭಾಗದಲ್ಲಿ ಬರುತ್ತವೆ. ಆಹಾರಸೇವನದಿಂದ ಚೈತನ್ಯಶಕ್ತಿಗೆ ಹೆಚ್ಚು ಬಲವನ್ನುಂಟುಮಾಡುವ ಕ್ರಿಯೆಯು ಪ್ರತಿಯೊಂದು ಶರೀರದಲ್ಲಿಯೂ ನಡೆದಿರುತ್ತದೆ. ಅದರ ವಿವರಣೆಯೂ ಈ ವಿಭಾಗದಲ್ಲಿ ಬರುತ್ತದೆ. ಜೀವನದ ಪೋಷ ಣೆಯ ವ್ಯಾಪಾರಗಳಲ್ಲಿ ಶ್ವಾಸಕ್ರಿಯೆ, ಪಚನಕ್ರಿಯೆ, ಅನ್ನವನ್ನು ಚೈತನ್ಯರೂಪದಲ್ಲಿ ರೂಪಾಂತರಿಸುವ ಕ್ರಿಯೆ ಇವು ಮುಖ್ಯವಾದವು ಗಳು. ಇವುಗಳ ಸೋಪಪತ್ತಿಕ ವಿವರಣೆಯು ‘ ಸಾತ್ಮೀಕರಣ ’ metabolism) ಎಂಬ ವಿಭಾಗದಲ್ಲಿ ಮಾಡಲಾಗುತ್ತದೆ.

ಅನ್ನ ಸಂಪಾದನೆ, ದೇಹರಕ್ಷಣೆ, ಹಾಗು ಸುಖಸಂವರ್ಧನೆಗಳನ್ನು ಮಾಡುವದಕ್ಕಾಗಿ ಇಂದ್ರಿಯಗಳು ಯಾವಾಗಲೂ ಹಾತೊರೆಯುತ್ತಿರುತ್ತವೆ. ಹಸುರನ್ನು ನೋಡಿದೊಡನೆಯೇ ಪಶುಗಳು ಆ ಕಡೆಗೆ ಧಾವಿಸುತ್ತವೆ. ಆದರೆ, ಹೊಲದೊಡೆಯನು ಕೂಗಿದ ಕೂಡಲೆ ಇಲ್ಲವೆ ದೊಣ್ಣೆಯನ್ನು ತೋರಿಸಿದ ಕೂಡಲೆ ಕಾಲಿಗೆ ಬುದ್ಧಿ ಹೇಳುತ್ತವೆ. ಎಂಥ ಬಿಸಿಲುಮಳೆಗಳಿದ್ದರೂ ಅಡವಿಗೆ ಹೋಗಿ ಕೊಟ್ಟಿಗೆಗೆ ಬಂದು ನಿಲ್ಲುತ್ತವೆ. ಅನ್ನ ಸಂಪಾದನೆ, ದೇಹರಕ್ಷಣ, ಸುಖವರ್ಧನೆಗಳಿಗಾಗಿ ನಡೆಯುವ ಈ ಎಲ್ಲ ವ್ಯಾಪಾರವು ಪಂಚಜ್ಞಾನೇಂದ್ರಿಯಗಳಿಂದಲೂ ಕರ್ಮೇಂದ್ರಿಗಳಿಂದಲೂ ನಡೆಯುತ್ತದೆ. ಬುದ್ಧಿ, ಹಾಗು ಜ್ಞಾನತಂತುಗಳು ಇಂದ್ರಿಯಗಳಿಗೆ ಈ ಎಲ್ಲ ವ್ಯಾಪಾರಗಳನ್ನು ನಡೆಯಿಸಲು ಪ್ರೇರಿಸಿ ಕಾರ್ಯ ಮಾಡಿಸುತ್ತವೆ. ಪ್ರತಿಯೊಂದು ಜೀವಕ್ಕೆ ಹೊರಗಣ ಪರಿಸ್ಥಿತಿಯಿಂದ ಕೆಲವೊಂದು ಸಂವೇದನಗಳಾಗುತ್ತವೆ. ಈ ಸಂವೇದನಗಳಿಗೆ ಯೋಗ್ಯವಾದ ಪ್ರತಿಕ್ರಿಯೆಯು ಈ ಶರೀರದಿಂದ ಕೂಡಲೆ ಜರಗುತ್ತದೆ. ಈ ಸಂವೇದನವನ್ನು ತಿಳಿದುಕೊಂಡು ಅದಕ್ಕೆ ಪ್ರತೀಕಾರ ಮಾಡುವ ಪಂಚಜ್ಞಾನೇಂದ್ರಿಯಗಳೂ ಪಂಚಕರ್ಮೇಂದ್ರಿಯಗಳೂ ಬುದ್ಧಿ ಹಾಗು ಜ್ಞಾನ ತಂತುಗಳು ಇತ್ಯಾದಿ ಶರೀರದ ಸರ್ವ ಘಟಕಗಳ ಹಾಗು ಅವುಗಳ ವ್ಯಾಪಾರಗಳ ವರ್ಣನೆಯನ್ನು ಶರೀರವ್ಯಾಪಾರಶಾಸ್ತ್ರವೆಂಬ ಎರಡನೇ ಭಾಗದಲ್ಲಿ ಮಾಡಿರುತ್ತದೆ. ನಿಜವಾಗಿಯೂ ಇದಕ್ಕೆ 'ಇಂದ್ರಿಯ ವಿಜ್ಞಾನ' ವೆಂಬ ಹೆಸರು ಹೆಚ್ಚು ಶೋಭಿಸುವದು.

ಆತ್ಮರಕ್ಷಣೆಯ ಎರಡೂ ಭಾಗಗಳನ್ನು ಹೇಳಿದ್ದಾಯಿತು. ಆತ್ಮರಕ್ಷಣೆಯಲ್ಲದೆ ಸರ್ವ ಜೀವಗಳಲ್ಲಿ ಇನ್ನೊಂದು ವ್ಯಾಪಾರವು ನಡೆದಿರುತ್ತದೆ. ಅದೇ ಪ್ರಜೋತ್ಪಾದನವು. ಇದನ್ನು ವಿವರಿಸುವ ಶಾಸ್ತ್ರಾಂಗಕ್ಕೆ '**ಜನನೇಂದ್ರಿಯ** ವಿಜ್ಞಾನ' (Sexology)ವೆನ್ನುವರು.

ಶರೀರಪೋಷಣೆ, ರಕ್ಷಣೆ, ಹಾಗು ಪ್ರಜೋತ್ಪಾದನ ಈ ಮೂರೂ ವ್ಯಾಪಾರಗಳನ್ನು ವರ್ಣಿಸುವ ಶರೀರವ್ಯಾಪಾರಶಾಸ್ತ್ರದ ಮೂರು ಶಾಖೆಗಳೇ ಇವೆ. ಈ ಮೂರು ಶಾಖೆಗಳಿಂದ ನಮ್ಮ ಅದ್ಭುತ ಜೀವನಕ್ರಮದ ಜ್ಞಾನವನ್ನು ನಾವು ಪೂರ್ಣವಾಗಿ ಮಾಡಿಕೊಳ್ಳಬಹುದು.

## ೩. ಉತ್ಪತ್ತಿಶಾಸ್ತ್ರ

ಶರೀರರಚನೆ ಹಾಗು ಶರೀರವ್ಯಾಪಾರ ಈ ಎರಡು ವಿಭಾಗಗಳಲ್ಲಿ ಬೆಳೆದ ಶರೀರವಿಚಾರವು ಮಾಡಲ್ಪಡುವುದೇ ವಿನಃ ಜೀವವು ಹೇಗೆ ಹುಟ್ಟಿತು ? ಅದರ ವಿಕಾಸವು ಹೇಗೆ ಆಗುತ್ತದೆ ಎಂಬ ವಿಚಾರವು ಮಾಡಲ್ಪಡುವದಿಲ್ಲ. ಆದರೆ ಈ ಪ್ರಶ್ನೆಗಳ ಮಹತ್ವವು ಜೀವಶಾಸ್ತ್ರದಲ್ಲಿ ಹೆಚ್ಚಾಗಿದೆ. ಯಾಕೆಂದರೆ ಜೀವನದ ಹುಟ್ಟು ಹಾಗು ಅದರ ವಿಕಾಸವು ತಿಳಿದರೇನೆ ಇಂದಿನ ಜೀವನದ ಪೂರ್ಣಜ್ಞಾನವು ನಮಗಾಗುವದು. ಜೀವದ ಉತ್ಪತ್ತಿ ವಿಕಾಸಗಳನ್ನು ಇಬ್ಬಗೆಯಾಗಿ ವಿಚಾರಮಾಡಲು ಶಕ್ಯವಿದೆ. ವೈಯಕ್ತಿಕ ಜೀವದ ಹುಟ್ಟು ಹಾಗು ವಿಕಾಸಗಳನ್ನು ನೋಡುವ ರೀತಿ ಎಂದರೆ, ಗರ್ಭಧಾರಣವಾದ ಮೇಲೆ ಜೀವದ ಬೆಳವಣಿಗೆಯು ಹೇಗಾಗುತ್ತದೆ ? ಭಿನ್ನಭಿನ್ನ ಅವಯವಗಳು, ಶರೀರದ ಬೇರೆ ಬೇರೆ ಘಟಕಗಳು ಜೀವವು ಕೆಲವೊಂದು ಮರ್ಯಾದೆಯ ವರೆಗೆ ಬೆಳೆದ ನಂತರ, ಅದು ಗರ್ಭದಿಂದ ಎಂದು ಹೇಗೆ ಹೊರಗೆ ಬರುತ್ತದೆ ? ಇತ್ಯಾದಿ ಪ್ರಶ್ನೆಗಳ ವಿಚಾರಗಳು ಈ ಶಾಖೆಯಲ್ಲಿ ಬರುತ್ತವೆ. ಈ ಶಾಸ್ತ್ರಕ್ಕೆ ಪಿಂಡವೃದ್ಧಿ ಶಾಸ್ತ್ರ (Embryology)ವೆನ್ನುವರು.

ಆದರೆ ಶಾಸ್ತ್ರಜ್ಞರು ವ್ಯಕ್ತಿಜೀವಕ್ಕೆ ತೃಪ್ತರಾಗದೆ, ಜೀವಜಾತಿಗಳ ಉತ್ಪತ್ತಿ ಹಾಗು ಅವುಗಳ ವಿಕಾಸವನ್ನು ವಿಚಾರಮಾಡುವದಕ್ಕಾಗಿ ಬಹಳ ಪ್ರಯತ್ನಿಸಿದ್ದಾರೆ. ಕೋಟ್ಯಾವಧಿ ವರ್ಷಗಳ ಪೂರ್ವದಲ್ಲಿ ಆದ್ಯ ಜೀವದ ಉತ್ಪತ್ತಿಯು ಹೇಗಾಯಿತು ? ಮೆಲ್ಲಮೆಲ್ಲನೆ ಆ ಜೀವದ ವಿಕಾಸವು ಆದುದು ಹೇಗೆ ? ಒಂದೇ ಕೋಶವುಳ್ಳ ಪ್ರಾಣಿ, ಆಮೇಲೆ ಅನೇಕ ಕೋಶಗಳುಳ್ಳ ಸೂಕ್ಷ್ಮ ಜೀವಜಂತುಗಳು, ಮೀನಗಳೂ, ಸಂಸೃಪಗಳೂ ಸಸ್ತನ ಪ್ರಾಣಿಗಳೂ, ಕೊನೆಗೆ ಮನುಷ್ಯ ಈ ಕ್ರಮದಲ್ಲಿ ಉತ್ಪತ್ತಿಯು ಹೇಗೆ ಆಯಿತು ? ಅವುಗಳ ಶರೀರಗಳ ವಿಕಾಸವು ಹೇಗೆ ? ಎಂಬುದನ್ನು (Palaeontology) ಪುರಾತನ ಜೀವನಶಾಸ್ತ್ರದಲ್ಲಿ ಪೂರ್ಣವಾಗಿ ವಿಚಾರಮಾಡಲ್ಪಡುತ್ತದೆ. ಈ ಸಂಗತಿಯನ್ನು ಹಿಂದೆಯೇ ಹೇಳಿದೆ.

ಅನೇಕ ಜನ ವಿದ್ವಾಂಸರು ಜೀವ ಉತ್ಪತ್ತಿಯ ಹಾಗು ವಿಕಾಸದ ವಿಷಯದಲ್ಲಿ ತಮ್ಮ ಅಖಂಡ ಬುದ್ಧಿಶಕ್ತಿಗಳನ್ನೆಲ್ಲ ವೆಚ್ಚಮಾಡಿದ್ದಾರೆ.

ಪ್ರಾಣಿಜಾತಿಯ ವಿಕಾಸವು ಆಗುತ್ತದೆಯೋ ಇಲ್ಲವೋ? ಆಗುತ್ತಿದ್ದರೆ ಹೇಗೆ? ಇದನ್ನು ಕಂಡುಹಿಡಿಯುವದಕ್ಕಾಗಿ ಡಾರ್ವಿನ್ನನಂಥ ಪ್ರತಿಭಾಶಾಲಿಯು ತನ್ನ ಆಯುಷ್ಯವನ್ನೇ ಅರ್ಪಿಸಿದ್ದಾನೆ. ಅದರಂತೆಯೇ ಆನುವಂಶಿಕ ಸಂಸ್ಕಾರದ ಪರಿಣಾಮವು ಸಂತತಿಯ ಮೇಲೆ ಎಷ್ಟರಮಟ್ಟಿಗೆ, ಹೇಗೆ ಆಗುತ್ತವೆ ಎಂಬುದನ್ನು ವಿವರಿಸುವ ಜನನಶಾಸ್ತ್ರ (Genetics) ವೆಂಬ ಹೊಸ ಶಾಸ್ತ್ರವೇ ಹುಟ್ಟಿದೆ. ಈ ಶಾಸ್ತ್ರದ ಉಪಯೋಗವು ಪಿಂಡವೃದ್ಧಿಶಾಸ್ತ್ರದಲ್ಲಿ ಆಗುತ್ತದೆ. ವಿಶಿಷ್ಟಗುಣಯುಕ್ತ ಪ್ರಾಣಿ ಅಥವಾ ವನಸ್ಪತಿಗಳನ್ನು ಹೇಗೆ ಹುಟ್ಟಿಸಬಹುದು ಎಂಬುದನ್ನು ಶಾಸ್ತ್ರಶುದ್ಧವಾಗಿ ಪ್ರಸ್ಥಾಪಿಸಿದ್ದಾರೆ.

## ೪. ವರ್ಗೀಕರಣ

ಸರ್ವ ಜೀವಗಳ ಸಾಮಾನ್ಯ ಹಾಗು ವ್ಯಾಪಕವಿಷಯದ ವಿಚಾರ ನಂತರ, ಅವುಗಳ ವರ್ಗೀಕರಣವೇ ಮುಂದಿನ ವಿಷಯವು. ಈ ವರ್ಗೀಕರಣವನ್ನು ವಿಶೇಷವಾಗಿ ಶರೀರರಚನೆಯಲ್ಲಿಯ ಭೇದವನ್ನು ಅನುಸರಿಸಿ ಮಾಡಿದ್ದಾರೆ. ಎಲ್ಲಕ್ಕೂ ಮೊದಲು ಕಣ್ಣಿಗೆ ಒಡೆದು ಕಾಣುವ ಭೇದಗಳನ್ನು ಮಾಡಿ ಅವುಗಳಲ್ಲಿ ಉಪಭೇದಗಳನ್ನು ಮಾಡುತ್ತಾ ಕೊನೆಗೆ ಮನುಷ್ಯ, ಕುದುರೆ ಇತ್ಯಾದಿ ಜಾತಿಗಳಿಗೆ ಬಂದು ನಿಲ್ಲುತ್ತಾರೆ. ಈ ಜಾತಿ-ಜೀವನದಲ್ಲಿ ವ್ಯಕ್ತಿ, ಗುಂಪು, ಶಾಖೆ, ಸಂಘಗಳೆಂದು ಏರಿಕೆಯ ಮೆಟ್ಟಲುಗಳನ್ನು ಮಾಡುತ್ತಾರೆ. ಮೊದಮೊದಲು ಈ ವರ್ಗೀಕರಣಕ್ಕೆ ಬಹಳ ಮಹತ್ವಕೊಡುತ್ತಿದ್ದರು ಆದರೆ ಈಗ ಶಾಸ್ತ್ರಜ್ಞರು ವಿಕಾಸತತ್ವಕ್ಕನುಸರಿಸಿ ವರ್ಗೀಕರಣವನ್ನು ಮಾಡುತ್ತಬರುವದರಿಂದ ಮೊದಲಿನ ಗೊಂದಲವು ತಪ್ಪಿದೆ.

ವರ್ಗೀಕರಣದ ದೃಷ್ಟಿಯಿಂದ ನೋಡಿದರೆ, ಜೀವಸೃಷ್ಟಿಯಲ್ಲಿ ವನಸ್ಪತಿ ಹಾಗು ಪ್ರಾಣಿಗಳಲ್ಲಿರುವ ಭೇದವು ಒಡೆದುಕಾಣುತ್ತದೆ. ಮೊದಲಿನಿಂದಲೂ ಮನುಷ್ಯನು ಇವುಗಳ ವಿಷಯವಾಗಿ ಬೇರೆ ಬೇರೆಯಾಗಿಯೇ ವಿಚಾರಮಾಡುತ್ತ ಬಂದಿದ್ದಾನೆ. ಅದರ ಫಲವೇ ಪ್ರಾಣಿಶಾಸ್ತ್ರ (Zoolgy) ಹಾಗು ವನಸ್ಪತಿಶಾಸ್ತ್ರ (Botany) ಗಳು.

ಈ ಶಾಸ್ತ್ರಗಳು ಬಹು ಪ್ರಾಚೀನವಿದ್ದು ಇವೆರಡಕ್ಕೂ ಆಧಾರವಾದ ಜೀವಶಾಸ್ತ್ರವೇ ಇತ್ತೀಚೆಗೆ ಹುಟ್ಟಿದೆ.

ಪ್ರಾಣಿಸೃಷ್ಟಿಯಲ್ಲಿ ಪಶು-ಪಕ್ಷಿಗಳು, ಹುಳ-ಹುಪ್ಪಡಿಗಳು ಮೊದಲಾದ ವರ್ಗಗಳನ್ನು ಮಾಡಿದ್ದಾರೆ. ಅಲ್ಲದೆ ಅವುಗಳ ಪ್ರತ್ಯೇಕ ವಿವೇಚನೆಯನ್ನು ಮಾಡುವ ಉಪಶಾಸ್ತ್ರಗಳು ಹುಟ್ಟಿವೆ. ಉದಾ: ಕೀಟಕ ಶಾಸ್ತ್ರ, ಪಕ್ಷಿಶಾಸ್ತ್ರ ಮೊದಲಾದವುಗಳು. ಅರ್ಥಾತ್ ಇವುಗಳಲ್ಲಿ ಶರೀರ ರಚನೆ, ವ್ಯಾಪಾರ, ಉತ್ಪತ್ತಿ ಹಾಗು ವಿಕಾಸ ಮೊದಲಾದ ಎಲ್ಲ ವಿಷಯ ಗಳ ವಿವೇಚನೆಯು ಬರುತ್ತದೆಂದು ಬೇರೆ ಹೇಳಬೇಕಿಲ್ಲ.

ಇದಲ್ಲದೆ ಕೆಲವು ವಿಶಿಷ್ಟ ಪ್ರಾಣಿಜಾತಿಯ ಅಥವಾ ವರ್ಗದ ವಿಚಾರ ಮಾಡುವಾಗ, ಅವುಗಳ ಅಂತರ್ಗತ ಸ್ವರೂಪವನ್ನು ವಿಚಾರ ಮಾಡುವಂತೆ, ಹೊರಗಿನ ಪರಿಸ್ಥಿತಿಯನ್ನು ವಿಚಾರಮಾಡ ಬೇಕಾಗುತ್ತದೆ. ವಿಶಿಷ್ಟಜಾತಿಯ ಪ್ರಾಣಿಯು ಯಾವ ಯಾವ ಪರಿ ಸ್ಥಿತಿಯಲ್ಲಿ ಹೇಗೆ ಬಾಳುತ್ತದೆ? ಅದರ ಶತ್ರು ಮಿತ್ರರು ಯಾರು? ಅವುಗಳ ವರ್ತನವು ಹೇಗೆ ಇರುತ್ತದೆ? ಇವೇ ಮೊದಲಾದ ಸಂಗತಿಗಳನ್ನು ಬರೆ ಯುವದು ಕ್ರಮ ಪ್ರಾಪ್ತವಾಗುತ್ತದೆ. ಇದಲ್ಲದೆ ಪ್ರಾಣಿಜಾತಿಗಳ ವೃತ್ತಾಂತವು ಪೂರ್ಣವಾಗುವದಿಲ್ಲ. ಅಂದಮೇಲೆ, ಪರಿಸ್ಥಿತಿಯ ಪರಿ ಣಾಮ ಹಾಗು ಪ್ರಾಣಿಗಳ ವರ್ತನಕ್ರಮ ಇವೆರಡೂ ಜೀವಶಾಸ್ತ್ರ ದಲ್ಲಿಯ ಒಂದು ಮಹತ್ವವಾದ ಭಾಗವು. ಇದಕ್ಕೆ ವರ್ತನಶಾಸ್ತ್ರ (Ecology) ವೆಂದು ಕರೆಯಬಹುದು.

ವೈದ್ಯಶಾಸ್ತ್ರವು ಕೂಡ ಜೀವಶಾಸ್ತ್ರದ ಹೊರಗಿನದಲ್ಲ. ವೈದ್ಯಕ್ಕೆ ಆಧಾರವಾದ ಮಾನವಶರೀರಶಾಸ್ತ್ರವೂ, ಔಷಧಿಗಳಿಗೆ ಆಧಾರವಾದ ವನಸ್ಪತಿಶಾಸ್ತ್ರವೂ ಜೀವನಶಾಸ್ತ್ರದ ಶಾಖೆಗಳು. ಇನ್ನು ಉಳಿ ಯಿತು ರೋಗನಿದಾನ. ಅದೂ ಕೂಡ ಜೀವಶಾಸ್ತ್ರದಲ್ಲಿಯ ಸಿದ್ಧಾಂತ ಗಳನ್ನೂ ಶೋಧಗಳನ್ನೂ ಅವಲಂಬಿಸಿದೆ.

## ೨. ಇತಿಹಾಸ

ಜೀವಶಾಸ್ತ್ರದಲ್ಲಿಯ ಬಹುಭಾಗದ ಶೋಧವನ್ನು ವೈದ್ಯರೇ ಮಾಡಿ

ದ್ದಾರೆ. ಇದೇ ವೈದ್ಯಶಾಸ್ತ್ರವು ಜೀವಶಾಸ್ತ್ರದಲ್ಲಿಯೇ ಅಡಕವಾಗುತ್ತ ದೆಂಬು ತೋರಿಸುತ್ತದೆ. ಯುರೋಪದಲ್ಲಿಯು ವೈದ್ಯಶಾಸ್ತ್ರವೇ ಆಗಲಿ, ಜೀವಶಾಸ್ತ್ರವೇ ಆಗಲಿ, ಗ್ಯಾಲೇನ ನಂತರ ಸುಮಾರು ೧೩ ನೂರುವರ್ಷ ಮಾಯವಾಗಿದ್ದಿತು. ೧೪–೧೫ನೇ ಶತಮಾನದ ಮಹಾನ್ ವಿಚಾರ ಕ್ರಾಂತಿಯಾದ ನಂತರ ಜ್ಞಾನೋದಯವಾಗಿ ಮತ್ತೆ ಎಲ್ಲ ಶಾಸ್ತ್ರಗಳಿಗೆ ಚಾಲನೆ ದೊರೆಯಿತು. ಈ ವಿಚಾರಕ್ರಾಂತಿಯು ಕಾಲದಲ್ಲಿ ಜ್ಯೋತಿಷ್ಯ, ಪದಾರ್ಥವಿಜ್ಞಾನ ಮೊದಲಾದ ಶಾಸ್ತ್ರಗಳು ಹೊರಟದ್ದಲ್ಲದೆ, ಪ್ರಾಣಿ ಹಾಗು ವನಸ್ಪತಿಗಳ ಶಾಸ್ತ್ರೀಯ ಅಭ್ಯಾಸಕ್ಕೆ ಪುನಃ ಪ್ರಾರಂಭ ವಾಯಿತು.

ಈ ಕ್ರಾಂತಿಯು ಪೂರ್ವದ ಕುರುಡು ನಂಬಿಗೆಗಳನ್ನೆಲ್ಲ ಹಾರಿಸಿತು. ಜನರು ಸ್ವತಂತ್ರವಿಚಾರಿಗಳೂ, ವೃತ್ತಿಯುವರೂ ಆದರು. ಯಾವು ದೊಂದು ಸಂಗತಿಯನ್ನು ಅರೆದು ಒರೆದು ನೋಡುವ ಪ್ರವೃತ್ತಿಯು ಪ್ರಾರಂಭವಾಯಿತು. ಇದರಿಂದ ಶಾಸ್ತ್ರಗಳು ಭರದಿಂದ ಬೆಳೆದವು. ಫ್ರೆಂಚ ಶರೀರಶಾಸ್ತ್ರಜ್ಞನಾದ ಆಂಡ್ರ್ಯುವ್ಹೆಸಾಲಿಯುಸನು (೧೫೧೪–೧೫೬೪) ಪ್ರತ್ಯಕ್ಷ ನಿರೀಕ್ಷಣ ಹಾಗು ಪ್ರಯೋಗಗಳ ಕಟ್ಟಾ ಪುರಸ್ಕರ್ತ ನಿದ್ದನು. ಅವನು ಸ್ವತಃ ಹೆಣಗಳನ್ನು ಕೊಯ್ದು ವಿದ್ಯಾರ್ಥಿಗಳಿಗೆ ಶರೀರದ ಜ್ಞಾನ ಮಾಡಿಕೊಡುತ್ತಿದ್ದನು. ಅಲ್ಲದೆ ಗ್ಯಾಲೇನ ಸಿದ್ಧಾಂತ ಗಳು ಕೂಡ ಪ್ರತ್ಯಕ್ಷದ ಒರೆಗೆ ಹತ್ತದಿದ್ದರೆ ಅವುಗಳನ್ನು ನಿರ್ದಾಕ್ಷಿಣ್ಯ ದಿಂದ ಖಂಡಿಸುತ್ತಿದ್ದನು. ಇವನು ಶರೀರಶಾಸ್ತ್ರದ ಮೇಲೆ ಒಂದು ಗ್ರಂಥವನ್ನು ಬರೆದಿದ್ದಾನೆ.

ಆದರೆ ಜೀವಶಾಸ್ತ್ರದ ನಿಜವಾದ ಬೆಳವಣಿಗೆಯು ೧೭ನೆಯ ಶತ ಮಾನದಲ್ಲಿಯೇ ಆಯಿತು. ಧರ್ಮಪುರೋಹಿತರ ಮತವನ್ನು ಮೂಲೆಗೆ ಒತ್ತಿ ಶರೀರಭೇದನ ಕಾರ್ಯವನ್ನು ನಡೆಯಿಸಿದರು. ಅವರಿಂದ ಶರೀರ ಶಾಸ್ತ್ರದಲ್ಲಿ ಹೊಸ ಶೋಧಗಳಾದವು. ಇದಕ್ಕಿಂತ ಮಹತ್ವದ ಸಂಗತಿ ಯೆಂದರೆ, ಜೀವನವ್ಯಾಪಾರದ ಕಡೆಗೆ ಶಾಸ್ತ್ರಜ್ಞರ ದೃಷ್ಟಿಯು ಹೊರಳಿ ದುದು. ರುಧಿರಾಭಿಸರಣವನ್ನು ಗೊತ್ತುಹಚ್ಚಿದ 'ವಿಲಿಯಮ್ ಹಾರ್ವೆ'ಯು (೧೫೭೮ರಿಂದ ೧೬೫೭)ಆ ಕಾಲದ ಶಾಸ್ತ್ರಜ್ಞರಲ್ಲಿ ಅಗ್ರ

ಗಣ್ಯನು. ಇವನು ಸುಪ್ರಸಿದ್ಧ ವೈದ್ಯನಿದ್ದು, ಇಂಗ್ಲಂಡದ ಮೊದಲನೇ ಚಾರ್ಲ್ಸನ ರಾಜವೈದ್ಯನಾಗಿದ್ದನು. ಇವನ ಕಾಲದ ವರೆಗೆ ಶಾಸ್ತ್ರಜ್ಞರಿಗೆ ರಕ್ತಚಲನೆಯು ಸ್ಪಷ್ಟವಾದ ಕಲ್ಪನೆಗಳು ಇರಲಿಲ್ಲ. ಹಾರ್ವೆಯು ಜೀವಂತ ಮನುಷ್ಯರ ಶರೀರದ ಮೇಲೆಯೂ ಧಮನಿಗಳ ಮೇಲೆಯೂ ಪ್ರಯೋಗಮಾಡಿ, ಅನೇಕ ವರ್ಷಗಳ ವರೆಗೆ ವಿಚಾರಮಾಡಿ ರಕ್ತವು ಹೃದಯದಿಂದ ಹೊರಟು ರಕ್ತವಾಹಿನಿಗಳ ಮಾರ್ಗವಾಗಿ ದೇಹವನ್ನೆಲ್ಲ ವ್ಯಾಪಿಸುವದೆ ಎಂದು ನಿಶ್ಚಯಮಾಡಿದನು. ಹೃದಯವು ದೇಹದಲ್ಲೆಲ್ಲ ರಕ್ತಾಭಿಸರಣವನ್ನು ಮಾಡುವ ಇಂದ್ರಿಯವಿದ್ದು ಅದರಲ್ಲಿ ೪ ವಿಭಾಗಗಳಿರುತ್ತವೆ. ಬಲಭಾಗದಲ್ಲಿರುವ ಮೇಲಿನ ಭಾಗದಲ್ಲಿ ರಕ್ತನಾಳಗಳು ಶರೀರದ ಬೇರೆ ಬೇರೆ ಭಾಗಗಳಿಂದ ಬಂದು ಅಶುದ್ಧ ರಕ್ತವನ್ನು ತುಂಬುತ್ತವೆ. ಮುಂದೆ ರಕ್ತವು ಅದರ ಕೆಳಕೋಣೆಗೆ ಬರುತ್ತದೆ. ಅಲ್ಲಿಂದ ಒಂದು ದೊಡ್ಡ ಧಮನಿಯ ಮುಖಾಂತರ ಶುದ್ಧವಾಗುವದಕ್ಕಾಗಿ ಪುಪ್ಪುಸಗಳಿಗೆ ಕಳಿಸಲ್ಪಡುತ್ತದೆ. ಅಲ್ಲಿ ಶುದ್ಧವಾಗಿ ರಕ್ತವು ಎಡಭಾಗದಲ್ಲಿರುವ ಮೇಲಿನ ಭಾಗಕ್ಕೆ ಹೋಗಿ ಅದರ ಕೆಳಗಿನ ಕೋಣೆಯಲ್ಲಿ ಸಂಗ್ರಹವಾಗುತ್ತದೆ. ಅಲ್ಲಿಂದ ದೊಡ್ಡ ಧಮನಿಯ ದ್ವಾರದ ಮುಖಾಂತರವಾಗಿ ಹೃದಯದಿಂದ ಹೊರಬೀಳುತ್ತದೆ. ಮುಂದೆ ಅವಕ್ಕೆ ಅನೇಕ ಟೊಂಗೆ ಟಿಸಲುಗಳು ಒಡೆದು ಶರೀರದಲ್ಲೆಲ್ಲ ರಕ್ತವು ಹರಿದಾಡುತ್ತದೆ. ಶರೀರಕ್ಕೆಲ್ಲ ರಕ್ತವಮುಟ್ಟುವ ಕಾರ್ಯವು ಹೃದಯದ ಆಕುಂಚನ ಹಾಗು ಪ್ರಸರಣದಿಂದ ಆಗುತ್ತದೆ. ಹೃದಯದ ಪ್ರತಿಯೊಂದು ಆಕುಂಚನದಿಂದ ಧಮನಿಗಳಲ್ಲಿ ರಕ್ತವು ದೂಡಲ್ಪಡುತ್ತದೆ. ಹೃದಯದಲ್ಲಿ ಕೇಳುವ ಧ್ವನಿಯು ಈ ಆಕುಂಚನ ಹಾಗು ಪ್ರಸರಣದಿಂದಲೇ ಹುಟ್ಟುತ್ತದೆ.

ಹಾರ್ವೆಯು ಇಷ್ಟೆಲ್ಲ ಶೋಧವನ್ನು ಮಾಡಿದರೂ, ಧಮನಿಗಳ ಹಾಗು ಶರೀರದ ಸಂಬಂಧವೇನಿದೆ? ಶುದ್ಧ ರಕ್ತವು ನಾಳಗಳಲ್ಲಿ ಕಪ್ಪು ಆಗಿ, ಮರಳಿ ಹೃದಯಕ್ಕೆ ಹೇಗೆ ಬರುತ್ತದೆ ಎಂಬುದು ಮಾತ್ರ ಅವನಿಗೆ ತಿಳಿಯಲಿಲ್ಲ. ಆದರೆ ಇದನ್ನು ಕಣ್ಣಿನಿಂದ ಕಂಡು ಹಿಡಿಯುವದೂ ಕಠಿಣವಿದ್ದಿತು. ಸುದೈವದಿಂದ ಅಲ್ಪಾವಧಿಯಲ್ಲಿಯೇ 'ಜಾನಸೇನ' ನೆಂಬ ಇಂಗ್ಲಿಷ ಗೃಹಸ್ಥನು ಸೂಕ್ಷ್ಮದರ್ಶಕ ಯಂತ್ರವನ್ನು ಹುಡುಕಿ ತೆಗೆ

ದನು. ಆದರಿಂದ ಜೀವಶಾಸ್ತ್ರದ ಶೋಧನದ ಮಾರ್ಗವು ನಿಷ್ಕಂಟಕ ವಾಯಿತು.

ಇದೇ ಸಮಯಕ್ಕೆ (ಫ್ರಾನ್ಸ, ಇಂಗ್ಲಂಡಗಳಲ್ಲಿ, ಬೇಕನ್ನನ ಉಪದೇಶದಿಂದ) ಶಾಸ್ತ್ರಾಭ್ಯಾಸಕ್ಕೆ ಒಳ್ಳೇ ಉಕ್ಕುಬಂದಿತು. ಬೇಕನ್ನನ ಸಿದ್ಧಾಂತದಂತೆ ಪ್ರತ್ಯಕ್ಷ ನಿರೀಕ್ಷಣವಾದ ಅನುಮಾನಗಳನ್ನು ಕಟ್ಟುವ ನಿರ್ಗಮನ ಪದ್ಧತಿಯನ್ನು ಅನೇಕ ಅಭ್ಯಾಸಿಗಳು ಸ್ವೀಕರಿಸಿದ್ದರಿಂದ ಎಲ್ಲಿ ನೋಡಿದಲ್ಲಿ ಹೊಸ ಬಗೆಯ ಉತ್ಸಾಹವು ತುಂಬಿತುಳುಕುತ್ತಿದ್ದಿತು. ಇಂಗ್ಲಂಡದಲ್ಲಿ ಶಾಸ್ತ್ರೀಯ ಸಂಶೋಧನದ ಒಂದು ಸಂಸ್ಥೆಯು ೧೬೪೫ರ ಸುಮಾರಿಗೆ ಜನ್ಮವೆತ್ತಿತು. ಆದು ಸಂಘ ಸಂಸ್ಥೆಯು. ಅದಕ್ಕೆ 'ಅದೃಶ್ಯ ವಿದ್ಯಾಲಯ' ವೆಂದು ಕರೆಯುತ್ತಿದ್ದರು. ಮುಂದೆ ಎರಡನೇ ಚಾರ್ಲಸನು ಪಟ್ಟವೇರಿದ ಮೇಲೆ ಅದು ಬೈಲಿಗೆ ಬಿದ್ದು ಕಾರ್ಯವನ್ನು ಸಾಗಿಸಿತು. ೧೬೬೨ ರಲ್ಲಿ ಅದಕ್ಕೆ ರಾಜಾಶ್ರಯ ದೊರೆತು, ಜಗದ್ವಿಖ್ಯಾತಿಯಾದ 'ರಾಯಲ್ ಸೊಸಾಯಿಟಿ' ಎಂದು ರೂಪಾಂತರವನ್ನು ಹೊಂದಿತು. ಫ್ರಾನ್ಸದಲ್ಲಿಯ ಸುಪ್ರಸಿದ್ಧ ಶಾಸ್ತ್ರೀಯ 'ಅಕ್ಯಾಡೆಮಿ' ಯು ೧೬೬೬ ರಲ್ಲಿ ೧೪ ನೇ ಲುಯಿಯ ಆಶ್ರಯದಲ್ಲಿ ಸ್ಥಾಪಿತವಾಯಿತು.

ಹಾರ್ವೆಯಗೆ ಬಿಡಿಸಲು ಬಾರದ ಒಗಟವನ್ನು ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಮಾಲ್‌ಫಿಗಿ ಎಂಬ ಇಟಾಲಿಯನ್ ಶಾಸ್ತ್ರಜ್ಞನು (೧೬೨೮-೧೬೯೪) ಬಿಡಿಸಿದನು. ಧಮನಿಗಳನ್ನೂ ರಕ್ತನಾಳಗಳನ್ನೂ ಜೋಡಿಸುವ ರಕ್ತವಾಹಿನಿಗಳ ಜಾಳಿಗೆಯು ಶರೀರದಲ್ಲೆಲ್ಲ ವ್ಯಾಪಿಸಿದ್ದು, ಅವುಗಳ ಮುಖಾಂತರ ರಕ್ತವು ಶರೀರದ ಭಾಗವನ್ನೆಲ್ಲ ಮುಟ್ಟುವದೆಂದು ಸಿದ್ಧಮಾಡಿದನು. ಇದಲ್ಲದೆ ರಕ್ತದಲ್ಲಿಯ ಸೂಕ್ಷ್ಮವಾದ ಕೆಂಪುಗೋಲಕಗಳ ಶೋಧವನ್ನು ಕೂಡ ಅವನೇ ಮಾಡಿದನು. ಮನುಷ್ಯನ ತೊಗಲಿನಲ್ಲಿ ಕೂಡ ಅನೇಕ ಪದರುಗಳು ಇರುವವೆಂದು ತೋರಿಸಿಕೊಟ್ಟನು.

ಪ್ರಾಣಿಗಳ ಹಾಗು ವನಸ್ಪತಿಗಳ ಶರೀರಗಳು ಅತ್ಯಂತ ಸೂಕ್ಷ್ಮ ಕೋಶದ ಹಾಗಿದೆ ಎಂಬ ಕಲ್ಪನೆಯು ಈ ಶತಮಾನದಲ್ಲಿಯೇ ಮನಮುಸಕಾಗಿ ಹುಕ್‌ನೆಂಬ ಶಾಸ್ತ್ರಜ್ಞನಿಗೆ ಹೊಳೆದಿತು. ವನಸ್ಪತಿ ಶಾಸ್ತ್ರದ ಸ್ಥಾಪ

ನೆಯೂ ಕೂಡ ಸುಪ್ರಸಿದ್ಧ ಪ್ರಯೋಗ ನಿಪುಣನಾದ ಸ್ಟಿಫೇನಹೆಲ್ಸನೆಂಬ ವಿದ್ವಾಂಸನಿಂದ ಇದೇ ಕಾಲಕ್ಕೆ ಆಯಿತು. ಅವನು ಗಿಡಗಳ ಅಂತ ರ್ಭಾಗದಲ್ಲಿ ಪೋಷಕ ರಸವು ಮೇಲಕ್ಕೆ ಹೇಗೆ ಏರುತ್ತದೆ, ಹಾಗು ಎಲೆ ಗಳಲ್ಲಿ ಸಿದ್ಧವಾದ ಅನ್ನರಸವು ಕೆಳಗೆ ಹೇಗೆ ಬರುತ್ತದೆಂಬುದನ್ನು ತೋರಿಸಿಕೊಟ್ಟನು. ಲೀವೇಸಹಾಯೇಕ ಎಂಬ ಶಾಸ್ತ್ರಜ್ಞನು (೧೭೨೯-೧೭೯೯) ನಿರ್ಜೀವ ವಸ್ತುಗಳಿಂದ ಜೀವವು ಹುಟ್ಟುವದಿಲ್ಲ ವೆಂದು, ಎಲ್ಲಿಯೋ ಆಗಲಿ ಜೀವದಿಂದಲೇ ಜೀವದ ಉತ್ಪತ್ತಿಯಾಗುವ ದೆಂದು ಸಿದ್ಧಮಾಡಿದನು.

೧೮ ನೇ ಶತಕದಲ್ಲಿ ಎಲ್ಲ ಶಾಸ್ತ್ರಜ್ಞರ ಮನಸ್ಸು ಪ್ರಾಣಿಗಳ ಹಾಗು ವನಸ್ಪತಿಗಳ ವರ್ಗೀಕರಣದಲ್ಲಿ ತೊಡಗಿತ್ತು. ಕೋಲಂಬಸ, ವ್ಯಾಜಿಲಸ ಟಾಸ್ಮನ, ಕ್ಯಾಪ್ಟನ ಕುಕ್ ಮೊದಲಾದ ಸಾಹಸಿ ಪ್ರವಾಸಿಕರು ಗೊತ್ತು ಹಚ್ಚಿದ ಅನೇಕ ಭೂಭಾಗಗಳು ಪ್ರವಾಸಿಗಳಿಗೆ ಪ್ರೇಕ್ಷಣೀಯವಾಗಿ ದ್ದುವು. ಶೋಧಕಬುದ್ಧಿಯ ಪ್ರವಾಸಿಗಳು ಈ ಹೊಸ ಪ್ರದೇಶಗಳಲ್ಲಿ ಸಂಚರಿಸಿ ಅಲ್ಲಿಯ ಅನೇಕ ವನಸ್ಪತಿ ಹಾಗು ಪ್ರಾಣಿಗಳನ್ನು ತರುತ್ತಿ ದ್ದರು. ಹೀಗೆ ಅರಿಯದಿದ್ದ ಎಷ್ಟೋ ವನಸ್ಪತಿಗಳೂ ಪ್ರಾಣಿಗಳೂ ಶಾಸ್ತ್ರಜ್ಞರ ಎದುರಿಗೆ ಬಂದವು. ಆಗ ಶಾಸ್ತ್ರಜ್ಞರೆಲ್ಲರೂ ಇವುಗಳ ವರ್ಗೀ ಕರಣದಲ್ಲಿಯೇ ತೊಡಗಿದರು. ಇದರಿಂದ ಶರೀರ ವ್ಯಾಪಾರದ ಕಡೆಗೆ ಸಾಕಷ್ಟು ಲಕ್ಷ್ಯಕೊಡಲು ಅವರಿಗೆ ಸಾಧ್ಯವಾಗಲಿಲ್ಲ. ಈ ವರ್ಗೀಕರ ಣವು ಕೂಡ ಶಾಸ್ತ್ರ ಶುದ್ಧವಾಗಿ ಆಗಿರದ್ದರಿಂದ ಮುಂದಿನ ಶಾಸ್ತ್ರಜ್ಞರು ಅನೇಕ ಮಾರ್ಪಾಟುಗಳನ್ನು ಇದರಲ್ಲಿ ಮಾಡಿಕೊಳ್ಳಬೇಕಾಯಿತು.

೧೮ ನೇ ಶತಕದ ವಿಖ್ಯಾತ ಶಾಸ್ತ್ರಜ್ಞನೆಂದರೆ, ಕಾರ್ಲ್‌ಲಿನಿಯಸ (೧೭೦೭-೭೮) ನು. ಇವನು ಸ್ವೀಡನ್ನದಲ್ಲಿ ಹುಟ್ಟಿದ್ದು ಅಲ್ಲಿಯೇ 'ಅಪ್ಸಾಲಾ' ವಿಶ್ವವಿದ್ಯಾಲಯದಲ್ಲಿ (೧೭೪೧) ವನಸ್ಪತಿಶಾಸ್ತ್ರದ ಪ್ರೊಫೇ ಸರಸಿದ್ದನು. ಇವನ ಚರಿತ್ರೆಯು ಅತ್ಯಂತ ಉದಾತ್ತ ಹಾಗು ಪ್ರೇಮ ಮಯವಾಗಿರುವುದು. ಇವನು 'ಸಿಸ್ಟೀಮಾ ನಾಟೂರೆ' ಎಂಬ ದೊಡ್ಡ ಗ್ರಂಥ ಬರೆದಿರುವನು. ಅದರಲ್ಲಿ ಸರ್ವ ವನಸ್ಪತಿಗಳ ವರ್ಗೀಕರಣಮಾಡಿ

ಅವುಗಳ ವರ್ಣನೆ ಮಾಡಿದ್ದಾನೆ ಇವನು ಲೋಕಪ್ರಿಯ ಶಿಕ್ಷಕನೆಂದೂ ಶಾಸ್ತ್ರಜ್ಞನೆಂದೂ ಯುರೋಪದಲ್ಲೆಲ್ಲ ಕೀರ್ತಿಯಿದೆ. ವನಸ್ಪತಿಗಳಿಗೆ ಹಾಗು ಪ್ರಾಣಿಗಳಿಗೆ ಹೆಸರು ಕೊಡುವ ಸುಲಭ ಪದ್ಧತಿಯನ್ನು ಲಿನಿಯಸನು ಹುಡುಕಿ ತೆಗೆದನು. ಇದಕ್ಕೂ ಮೊದಲು ಹೆಸರು ಹೇಳಬೇಕಾದರೆ ಅದರ ವರ್ಣನೆಯನ್ನೆಲ್ಲ ಮಾಡಬೇಕಾಗುತ್ತಿದ್ದಿತು. ಇದನ್ನು ತಪ್ಪಿಸಿ, ಲಿನಿಯಸನು ಮನುಷ್ಯನಿಗೆ ಒಂದು ಅಡ್ಡ ಹೆಸರು ಹಾಗು ವ್ಯಕ್ತಿಯ ಹೆಸರು ಹೇಗೆ ಇರುವುವೋ ಹಾಗೆ, ಒಂದು ಜಾತಿವಾಚಕ ಹೆಸರನ್ನೂ ಇನ್ನೊಂದು ವೈಶಿಷ್ಟ ಗುಣದರ್ಶಕ ಹೆಸರನ್ನೂ ಇಡುವ ಪದ್ಧತಿಯನ್ನು ಕಂಡುಹಿಡಿದನು. ಈ ಎರಡೂ ಹೆಸರುಗಳು ಅಖಿಲ ಯುರೋಪಕ್ಕೆ ತಿಳಿಯಬೇಕೆಂಬ ಬುದ್ಧಿಯಿಂದ ಲ್ಯಾಟಿನ ಭಾಷೆಯಲ್ಲಿ ಅವುಗಳನ್ನು ಕೊಟ್ಟನು. ಉದಾಹರಣೆಗಾಗಿ, ಬೆಕ್ಕಿನ ಜಾತಿಗೆಲ್ಲ 'ಫೆಲಿಸ್' ಎಂದು ಹೆಸರಿಟ್ಟು ಫೆಲಿಸ್‌ಲಿವೊ ಅಂದರೆ ಸಿಂಹ, ಫೆಲಿಸ್‌ಡೋಮೆಸ್ಟಿಕಾ ಎಂದರೆ ಬೆಕ್ಕು, ಹೀಗೆ ಎಲ್ಲ ಜಾತಿಗಳಿಗೂ ಹೆಸರಿಟ್ಟನು. ಲಿನಿಯಸನ ಎರಡನೆಯ ಮುಖ್ಯ ಕಾರ್ಯವೆಂದರೆ- ವರ್ಗೀಕರಣವು. ಈ ವರ್ಗೀಕರಣವು ಆನುಷಂಗಿಕ ಸಂಗತಿಗಳ ಮೇಲೆ ಕೈಯಿಟ್ಟು ಮಾಡಿದ್ದರಿಂದ, ಈ ವರ್ಗೀಕರಣವು 'ಕೃತ್ರಿಮ' ವೆಂದು ನಿರ್ಣಯಿಸಲ್ಪಟ್ಟು 'ನೈಸರ್ಗಿಕ' ವರ್ಗೀಕರಣದ ಪದ್ಧತಿಯನ್ನು ಹಾಕಲು ಫ್ರಾನ್ಸದಲ್ಲಿ ಪ್ರಯತ್ನವಾಯಿತು. ಡಿ. ಜುಶ್ಶೊ, ಕ್ಯಾಡೋಲ, ಬೆಂಥ್ಯಾಮ ಮೊದಲಾದವರು ಪ್ರಚಾರದಲ್ಲಿ ತಂದ ಈ ನೈಸರ್ಗಿಕ ವರ್ಗೀಕರಣ ಪದ್ಧತಿಯೇ ಇನ್ನೂ ಸ್ವಲ್ಪ ಬಾಳಿದೆ.

ವನಸ್ಪತಿಗಳ ವರ್ಗೀಕರಣ ನಡೆದ ಸಮಯದಲ್ಲಿಯೇ ಪ್ರಾಣಿಗಳ ವರ್ಗೀಕರಣದ ಕಡೆಗೂ ಎಷ್ಟೊ ಜನರು ಮನಸ್ಸು ಹಾಕಿದ್ದರು. ಜಾರ್ಜ ಕುವ್ಹಿಯೇ ಎಂಬ ಫ್ರೆಂಚ ಪ್ರಾಣಿಶಾಸ್ತ್ರಜ್ಞನು (೧೭೬೯-೧೮೩೨) ಇದೇ ಸಮಯಕ್ಕೆ ಆಗಿಹೋದನು. ಅವನು ಪ್ರಾಣಿಶರೀರಗಳ ವಿಶೇಷತಃ ಭೂಗರ್ಭದಲ್ಲಿ ದೊರೆತ ಜೀವಾವಶೇಷಗಳನ್ನು ಸೂಕ್ಷ್ಮ ಹಾಗು ತುಲನಾತ್ಮಕ ದೃಷ್ಟಿಯಿಂದ ಅಭ್ಯಾಸಮಾಡಿದನು. ಪ್ರಾಣಿಗಳ ವರ್ಗೀಕರಣದ ಬಗ್ಗೆ ೧೮೧೭ರಲ್ಲಿ ಒಂದು ದೊಡ್ಡ ಗ್ರಂಥವನ್ನು ಬರೆದನು. ೧. ಬೆನ್ನೆಲಬುಗಳುಳ್ಳ ಪ್ರಾಣಿಗಳು, (vertebrata) ೨. ಎಲಬುಗಳಿಲ್ಲದ ಪ್ರಾಣಿಗಳು

( mollusea ) ೩. ಸಂಧಿಯುಕ್ತ (articulata) ೪. ಕೇಂದ್ರೋತ್ಸರ್ಜಿತೇಂದ್ರಿಯ (radiata) ಎಂದು ಪ್ರಾಣಿಗಳಲ್ಲಿ ೪ ವರ್ಗಗಳನ್ನು ಕಲ್ಪಿಸಿದ್ದಾನೆ.

ಈ ವರ್ಗೀಕರಣವು ಆಗಿನ ಕಾಲಕ್ಕೆ ಶಾಸ್ತ್ರಸಮ್ಮತವಿದ್ದಿತು. ಆದರೆ ಮುಂದೆ ಹೊಸ ಶೋಧಗಳಾದಂತೆ ಅದರಲ್ಲಿ ಬದಲು ಮಾಡಬೇಕಾಯಿತು.

೧೯ನೇ ಶತಮಾನ ಕೊನೆಗೆ ಈ ಶಾಸ್ತ್ರವು ಸರ್ವತೋಮುಖವಾಗಿ ಪ್ರಚಂಡವಾಗಿ ಬೆಳೆದಿದ್ದು ಎಲ್ಲವನ್ನೂ ವಿವರಿಸುವದು ಅಶಕ್ಯ. ಆದುದರಿಂದ ಅದನ್ನು ವಿಹಂಗಮದೃಷ್ಟಿಯಿಂದ ನೋಡುತ್ತ ಮುಂದೆ ಸಾಗೋಣ. ಇದರಲ್ಲಿ ಕೆಳಗಿನ ಭಾಗಗಳು ಎದ್ದು ಕಾಣುತ್ತವೆ.

೧. ಶರೀರ ರಚನೆ ಹಾಗು ಶರೀರ ವ್ಯಾಪಾರ (ಪ್ರಾಣಿ ಹಾಗು ವನಸ್ಪತಿ), ೨. ವಿಕಾಸವಾದ ೩. ಪಿಂಡವೃದ್ಧಿಶಾಸ್ತ್ರ ಹಾಗು ಜನನಶಾಸ್ತ್ರ, ೪. ಜಂತುಶಾಸ್ತ್ರ ಹಾಗು ವಿಷಜಂತುನಾಶಕ ಉಪಚಾರ ಪದ್ಧತಿ, ೫. ಸಾತ್ಮೀಕರಣ ಹಾಗು ಜೀವರಸಾಯನಶಾಸ್ತ್ರ.

**(೧) ಶರೀರ ರಚನೆ ಹಾಗು ವ್ಯಾಪಾರ: (ಅ) ವನಸ್ಪತಿಗಳ ಪೋಷಣೆ-**

ವನಸ್ಪತಿಗಳ ಶ್ವಸನ ಹಾಗು ಪೋಷಣ ವ್ಯಾಪಾರಗಳು ಹೇಗೆ ನಡೆಯುತ್ತವೆಂಬುದು ೧೮ನೇ ಶತಕದಲ್ಲಿ ಶಾಸ್ತ್ರಜ್ಞನಿಗೆ ನಿಚ್ಚಳವಾದ ಕಲ್ಪನೆಯಿರಲಿಲ್ಲ. ಈ ವಿಷಯದ ಪೂರ್ಣ ಕಲ್ಪನೆಯನ್ನು ತಂದು ಕೊಟ್ಟವನು ಜೆನಿವ್ಹಾದ ಡಿ ಸೋಶುಅರನೇ (೧೭೬೭-೧೮೪೫). ಬೀಜವು ಅಂಕುರಿಸಬೇಕಾದರೆ ಆಕ್ಸಿಜನವು ಬೇಕಾಗುತ್ತದೆ ಎಂದು ತೋರಿಸಿಕೊಟ್ಟನು. ಗಿಡದ ಎಲೆಗಳು ಹವೆಯಲ್ಲಿಯ ಕಾರ್ಬನಡಾಯಕ್ಸಾಯಿಡದಿಂದ ಆಕ್ಸಿಜನವನ್ನು ತೆಗೆದೊಗೆದು ಕಾರ್ಬನಯುಕ್ತವಾದ ಭಾಗವನ್ನು ಶರೀರದಲ್ಲಿ ಸಂಗ್ರಹಿಸುತ್ತವೆ. ಭೂಮಿಯಲ್ಲಿ ವಿರಳವಾಗಿ ಬೆರೆತ ನಾಯಟ್ರೇಟ ಕ್ಷಾರವನ್ನು ಬೇರುಗಳು ಹೀರುತ್ತವೆ. ಅದರಿಂದ ರಾಸಾಯನಿಕ ಪ್ರಥಕ್ಕರಣವಾಗಿ ನಾಯಟ್ರೋಜನವು ಬೇರೆಯಾಗುತ್ತದೆ. ಈ ನೈಟ್ರೋಜನದಿಂದ ಚೈತನ್ಯದ್ರವ (ಪ್ರೋಟೋಪ್ಲಾಝುಮ)ವು ಆಗುತ್ತದೆ. ಹೀಗೆ

ಅನೇಕ ಸಂಗತಿಗಳನ್ನು ಗೊತ್ತುಹಚ್ಚಿ ಶರೀರವ್ಯಾಪಾರ ಶಾಸ್ತ್ರಕ್ಕೆ ತನ್ನ ಕಾಣಿಕೆಯನ್ನು ಅರ್ಪಿಸಿದನು.

## (ಬ) ಕೋಶಸಿದ್ಧಾಂತ

೧೯ನೇ ಶತಮಾನದ ಮೊದಲೇ ಬಿಶಾಟನೆಂಬುವವನು ಶರೀರದ ವಿಭಾಗ ಮಾಡುವ ಪದ್ಧತಿಯನ್ನು ರೂಢಿಯಲ್ಲಿ ತಂದನು. ಇದಕ್ಕೂ ಮೊದಲು ಅವಯವಗಳಂತೆ ವಿಭಾಗಮಾಡುತ್ತಿದ್ದರು. ಹೃದಯ, ಪುಪ್ಫುಸ, ಜಠರ ಇವೇ ಮೊದಲಾದ ಭಾಗಗಳನ್ನು ಮನ್ನಿಸುತ್ತಿದ್ದರು. ಆದರೆ ಬಿಶಾಟನು ಒಳಗಿನ ದ್ರವ್ಯಗಳ ಪೃಥಕ್ಕರಣಕ್ಕೆ ಅನುಸಾರವಾಗಿ ಅಸ್ಥಿಮಯ,ಸ್ನಾಯುಮಯ,ತ್ವಚಮಯ, ಗ್ರಂಥಿಮಯವೆಂದು ನಾಲ್ಕು ಭಾಗಗಳನ್ನು ಮಾಡಿದನು. ಶರೀರದ ಯಾವದೇ ಭಾಗ ತೆಗೆದುಕೊಂಡರೂ ಈ ಘಟನೆಗಳಲ್ಲಿಯ ಒಂದು ಅಥವಾ ಹೆಚ್ಚು ಘಟಕಗಳಿಂದ ಆ ಭಾಗವು ಆಗಿರುತ್ತದೆ. ಈ ಘಟಕಗಳನ್ನು ಬೇರೆಬೇರೆಯಾಗಿ ತೋರಿಸಿಕೊಟ್ಟ ನಂತರ ಅರ್ಥಾತ್ ಇವು ಹೇಗೆ ಆಗಿವೆ ಎಂಬುದರ ಕಡೆಗೆ ಶಾಸ್ತ್ರಜ್ಞರ ಲಕ್ಷ್ಯವು ಹತ್ತಿತು.

ವನಸ್ಪತಿಗಳ ಶರೀರವು ಸೂಕ್ಷ್ಮಕಣಗಳಿಂದ ಆಗಿದೆ ಎಂದು ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಹಿಂದಕ್ಕೇ ಗೊತ್ತುಹಚ್ಚಿದ್ದರು. ಈ ಕಣದ ಸುತ್ತಲೂ ಒಂದು ಹೊದಿಕೆ ಇರುವುದೆಂದೂ ಶೋಧಿಸಿದ್ದರು. ಇದಕ್ಕಿಂತ ಹೆಚ್ಚಿನ ಸಂಗತಿಗಳು ತಿಳಿದಿರಲಿಲ್ಲ. ೧೮೩೩ ರಲ್ಲಿ ರಾಬರ್ಟಬ್ರೌನನೆಂಬ ಶಾಸ್ತ್ರಜ್ಞನು ಈ ಸೂಕ್ಷ್ಮಕಣ—ಹೊದಿಕೆ ( cells ) ಯ ಮಧ್ಯದಲ್ಲಿ ಒಂದು ಕೇಂದ್ರವಿರುವದೆಂದು ಕಂಡು ಹಿಡಿದನು ಮುಂದೆ ಈ ಮೂಲಭೂತ ಹೊದಿಕೆಯ ಕೋಶದ ಅಭ್ಯಾಸವು ಭರದಿಂದ ಸಾಗಿತು. ಪ್ರಾಣಿಗಳ ಶರೀರವೂ ಇಂತಹ ಕೋಶಗಳಿಂದಲೇ ಆಗಿದೆ ಎಂದು ತಿಳಿದು ಬಂದಿತು. ಈ ಕೋಶದಲ್ಲಿ ಒಂದು ಕೇಂದ್ರವಿರುವದಲ್ಲದೆ, ಯಾವಾಗಲೂ ಚಲನವಲನವುಳ್ಳ ತೀರ ತಿಳುವಾದ ರಸದ್ರವ್ಯವಿದ್ದು, ಅದು ಪ್ರಾಣಿ ಹಾಗು ವನಸ್ಪತಿಗಳಕೋಶಗಳಲ್ಲಿ ಒಂದೇ ರೀತಿಯಾಗಿರುತ್ತದೆ ಎಂದು ಕಂಡುಬಂದಿತು. ಈ ದ್ರವರೂಪ ದ್ರವ್ಯಕ್ಕೆ

'ಚೈತನ್ಯದ್ರವ' ( prtoplasm ) ಎಂಬ ಹೆಸರಿಟ್ಟರು. ಮುಂದೆ ಈ ಕೋಶಗಳನ್ನು ನಿರೀಕ್ಷಿಸಿ ವನಸ್ಪತಿ ಹಾಗು ಪ್ರಾಣಿಗಳ ಕೋಶಗಳು ಒಂದೇ ಬಗೆಯಾಗಿರುವವೆಂದು ಗೊತ್ತುಹಚ್ಚಿದರು. ಮುಂದೆ ಈ ಕೋಶಗಳು ಹೇಗೆ ಹುಟ್ಟುತ್ತವೆ ಎಂಬ ಶೋಧಕ್ಕೆ ಪ್ರಾರಂಭವಾಯಿತು. ಒಂದು ಕೋಶವು ವಿಭಾಗವಾಗಿ ಇನ್ನೊಂದು ಹುಟ್ಟುತ್ತದೆ ಎಂದು ಸಿದ್ಧಾಂತ ಮಾಡಿದರು. ಈ ಕೋಶವೆಂದರೆ, ಕೇಂದ್ರವುಳ್ಳ ಚೈತನ್ಯದ್ರವದ ಸೂಕ್ಷ್ಮ ಗೋಲಕವೆಂದು ವ್ಯಾಖ್ಯೆ ಮಾಡಿದರು. ಈ ಕೋಶಸಂಶೋಧನದಲ್ಲಿ ಅನೇಕ ಜರ್ಮನ ವಿದ್ವಾಂಸರು ಮುಂದಾಳುಗಳಾಗಿದ್ದರು. ಅವರಲ್ಲಿ ಶ್ಲಾಯಡೇನ ಮತ್ತು ಶ್ವಾನರು ಪ್ರಮುಖರಿದ್ದು ಅವರನ್ನು ಮರೆಯುವಂತಿಲ್ಲ. ಈ ಕೋಶದ ಅಭ್ಯಾಸವು ಹೆಚ್ಚಾಗಿ ಬೆಳೆದು ಕೋಶಶಾಸ್ತ್ರ ( cytology )ವೆಂಬ ಭಾಗ ಮೂರು ಆಗಿದೆ.

ಮಿದುಳು, ಜ್ಞಾನತಂತುಗಳಿಂದ ತುಂಬಿದ ಬೆನ್ನುಹುರಿ, ಶರೀರವನ್ನೆಲ್ಲ ವ್ಯಾಪಿಸಿದ ಜ್ಞಾನತಂತುಗಳ ಹಾಗು ಪ್ರೇರಣಾತಂತುಗಳ ಜಾಳಿಗೆ, ಬೆನ್ನುಹುರಿಯನ್ನು ಬಿಟ್ಟು ಬೆನ್ನಲ್ಲಿ ವ್ಯಾಪಿಸಿದ ಸಹಾನುಭೂತಿದರ್ಶಕ ತಂತುಗಳು, ಇವೆಲ್ಲವುಗಳ ರಚನೆ ಹಾಗು ವ್ಯಾಪಾರಗಳ ವಿಷಯವಾಗಿ ೧೯ನೇ ಶತಮಾನದಲ್ಲಿ ಅನೇಕ ಮಹತ್ವದ ಹಾಗು ಆಶ್ಚರ್ಯಕಾರಕ ಶೋಧಗಳಾಗಿವೆ. ಇವು ಮಾನಸಶಾಸ್ತ್ರದ ಹಾಗು ಜೀವಶಾಸ್ತ್ರದ ಕ್ಷೇತ್ರವು ಒಂದೇ ಎನ್ನುವಂತೆ ಮಾಡಿವೆ. ಇಲ್ಲಿ ಸ್ಥಳಾಭಾವದ ಮೂಲಕ ಇಲ್ಲಿಗೇ ಈ ವಿಷಯವನ್ನು ಮುಗಿಸುತ್ತೇವೆ.

## ೨. ವಿಕಾಸವಾದ

೬ ಸಾವಿರ ವರ್ಷಗಳ ಪೂರ್ವದಲ್ಲಿಯ ಜಲಪ್ರಳಯದನಂತರ ದೇವರು ಜಗತ್ತಿನಲ್ಲಿ ಈಗಿರುವ ಜೀವಜಂತುಗಳನ್ನೆಲ್ಲ ಈಗಿದ್ದಂತೆಯೇ ಹುಟ್ಟಿಸಿದನೆಂದು ಬಾಯಬಲ್ಲಿನಲ್ಲಿ ವರ್ಣನೆಯಿದೆ. ೧೮ನೇ ಶತಮಾನದಲ್ಲಿ ಪ್ರಾಣಿಗಳ, ಹಾಗು ವನಸ್ಪತಿಗಳ ಲಕ್ಷಾವಧಿ ಜಾತಿಗಳು ಶಾಸ್ತ್ರಜ್ಞರ ಕಣ್ಣಿಗೆ ಬೀಳಹತ್ತಲು ಈ ಎಲ್ಲ ಜಾತಿಗಳನ್ನು ಈಗಿರುವಂತೆಯೇ ದೇವರು ಹುಟ್ಟಿಸಿರಬಹುದೇ ಎಂಬ ಸಂಶಯವು ಅನೇಕರಿಗೆ ಬಂದಿತು. ಅದರಲ್ಲಿಯೂ

ಸರ್ವ ಜಾತಿಗಳ ಶರೀರ ರಚನೆಯು ಒಂದೇ ಸ್ವರೂಪದ್ದಿರದೆ, ಭಿನ್ನಭಿನ್ನ ಜಾತಿಗಳ ಅವಯವಗಳು ಒಂದಕ್ಕಿಂತ ಇನ್ನೊಂದರಲ್ಲಿ ಸುಧಾರಿಸಿ ವಿಶಿಷ್ಟ ರೀತಿಯಿಂದ ಬೆಳೆದುದನ್ನು ನೋಡಿ ಈ ಸಂಶಯವು ಮತ್ತಿಷ್ಟು ಹೆಚ್ಚಾಯಿತು. ಮನುಷ್ಯನು ದಿನದಿನಕ್ಕೆ ಅನುಭವದಿಂದ ತನ್ನ ಕೆಲಸದಲ್ಲಿ ಸುಧಾರಿಸುವಂತೆ, ಅನುಭವ ಅಥವಾ ಉಪಯೋಗದಿಂದ ಇಲ್ಲವೆ ಬೇರೆ ಕಾರಣಗಳಿಂದ ಪ್ರಾಣಿಗಳ ಜಾತಿಗಳು ಏಕೆ ಸುಧಾರಿಸಬಾರದು ? ಎಂಬ ಸಂಶಯ ಸುಳಿಯಹತ್ತಿತು. ಭಿನ್ನ ಭಿನ್ನ ಜಾತಿಗಳ ಸಂಬಂಧವನ್ನು ತೋರಿಸುವ ಮಿಶ್ರ ಜಾತಿಗಳು ಕಂಡವು. ಇಂತಹ ಸಮಯದಲ್ಲಿಯೇ ಭೂಸ್ತರಶಾಸ್ತ್ರದ ಅಭ್ಯಾಸವು ಪ್ರಾರಂಭವಾಗಿ ಕಲ್ಲುಗಳಲ್ಲಿ ಸಿಕ್ಕುವ ಪ್ರಾಣಿಗಳ ಅವಶೇಷಗಳು ಅವರ ತರ್ಕಗಳಿಗೆ ಸಾಕ್ಷಿ ನುಡಿಯಲು ಮುಂದೆ ಬಂದವು. ಈ ಅವಶೇಷಗಳಲ್ಲಿ ಯಾವ ಪ್ರಾಣಿಜಾತಿಯು ಕಾಣುವದೋ ಅದು ಈಗ ಇಲ್ಲ. ಈಗಿರುವ ಜಾತಿಗಳು ಅತ್ಯಂತ ಪ್ರಾಚೀನ ಅವಶೇಷಗಳಲ್ಲಿ ಕಾಣುವದಿಲ್ಲ. ಇದೂ ಅಲ್ಲದೆ ತೀರ ಹಳೆಯ ಥರಗಳಲ್ಲಿ ಕೀಳು ಪ್ರಾಣಿಗಳ ಅವಶೇಷಗಳೂ ಇತ್ತೀಚಿನ ಥರಗಳಲ್ಲಿ ವಿಕಸಿತವಾದ ಅವಯವಗಳೂ ದೊರೆಯಹತ್ತಿದವು. ಎಲ್ಲ ದೃಷ್ಟಿಯಿಂದ ಕೂಡುಬೀಳುತ್ತ ನಡೆದ ಈ ಪುರಾವೆಗಳಿಂದ ಒಂದೇ ಅನುಮಾನವು ಎಲ್ಲರ ಮನಸ್ಸಿನಲ್ಲಿಯೂ ಸುಳಿಯಹತ್ತಿತು. ಅದೆಂದರೆ, ಪ್ರಾಣಿಗಳ ಹಾಗು ವನಸ್ಪತಿಗಳ ಜಾತಿಗಳು ಸನಾತನವಿರದೆ, ಕಾಲಗತಿಯಿಂದ ರೂಪಾಂತರವಾಗುತ್ತಿರಲೇಬೇಕು ಎಂಬ ಸಿದ್ಧಾಂತವು. ಈ ಜಾತಿಗಳ ವಿಕಾಸದ ಕಲ್ಪನೆಯನ್ನು ಸೋಪಪತ್ತಿಕವಾಗಿ ಜನರೆದುರಿಗೆ ಮೊದಲು ಇಟ್ಟವನು ಫ್ರೆಂಚ ಜೀವಶಾಸ್ತ್ರಜ್ಞನಾದಿ ಲಾಮಾರ್ಕನು. ಇವನು ೧೮೦೨ರಲ್ಲಿ ಈ ಕಲ್ಪನೆಯನ್ನು ಸಂಕ್ಷಿಪ್ತವಾಗಿ ಮಂಡಿಸಿದನು. ೧೮೦೯ರಲ್ಲಿ ಸ್ವತಂತ್ರ ಗ್ರಂಥವನ್ನೇ ಬರೆದು ಸೋಪಪತ್ತಿಕವಾಗಿ ಪ್ರತಿಪಾದಿಸಿದನು. ಒಂದು ವ್ಯಕ್ತಿಗೆ ಒಂದು ಅವಯವವನ್ನು ಹೆಚ್ಚಾಗಿ ಉಪಯೋಗಿಸುವ ಪ್ರಸಂಗ ಬಂದರೆ, ಅದು ಹೆಚ್ಚಾಗಿ ಬೆಳೆದು ಬಲವುಳ್ಳದ್ದಾಗುತ್ತದೆ. ಅವನ ಸಂತತಿಯಲ್ಲಿ ಆ ಅವಯವದ ಬೆಳವಣಿಗೆಯು ಹೆಚ್ಚಾಗುತ್ತದೆ. ಅವರು ಅದರ ಉಪಯೋಗವನ್ನು ಹೆಚ್ಚಾಗಿ ಮಾಡುವದರಿಂದ ಅದು ಮತ್ತಿಷ್ಟು ಬಲಿಷ್ಠವಾಗುತ್ತದೆ. ಹೀಗೆ

ಬೆಳೆಯುತ್ತ ಬೆಳೆಯುತ್ತ ಅನೇಕ ತಲೆಗಳ ನಂತರ ಆ ಪ್ರಾಣಿಯು ತೀರ ರೂಪಾಂತರವನ್ನು ಹೊಂದುತ್ತದೆ. ಉದಾಹರಣೆಗಾಗಿ ' ಜೇರಾಫ 'ವು ಎತ್ತರದ ಮೇಲಿನ ಪದಾರ್ಥಗಳನ್ನು ಗೋಣೆತ್ತಿ ತಿನ್ನುವ ಪ್ರಸಂಗವು ಒಂದೇ ಸವನೆ ಬಂದು ಅದರ ಕುತ್ತಿಗೆಯು ಈಗಿನಂತೆ ಅಳತೆಯಿಲ್ಲದಷ್ಟು ಉದ್ದವಾಗಿರಬೇಕು. ಹೀಗೆ ವಿಶಿಷ್ಟ ರೀತಿಯ ಉಪಯೋಗದಿಂದ ಅವಯವಗಳ ಬೆಳವಣಿಗೆಯು ವಿಶಿಷ್ಟ ಬಗೆಯಿಂದ ಆಗಿ ಕಾಲಾಂತರದಿಂದ ಪ್ರಾಣಿಗಳು ಮೂಲ ಜಾತಿಯಿಂದ ರೂಪಾಂತರವನ್ನು ಹೊಂದುತ್ತವೆ ಎಂಬುದೇ ಲಾಮಾರ್ಕನ ಸಿದ್ಧಾಂತ.

ಆದರೆ ಲಾಮಾರ್ಕನ ಪ್ರಯತ್ನವೆಲ್ಲ ಬೋರ್ಗಲ್ಲ ಮೇಲೆ ಮಳೆಗರೆದಂತಾಯಿತು. ಕೂವ್ಹಿಯೇ ಎಂಬ ಪ್ರಾಣಿಶಾಸ್ತ್ರಜ್ಞನು ಈ ಸಿದ್ಧಾಂತವನ್ನು ಪ್ರಬಲವಾಗಿ ವಿರೋಧಿಸಿದನು. ಪ್ರಾಣಿಗಳ ಜಾತಿಗಳು ಈಶ್ವರ ನಿರ್ಮಿತವಿದ್ದು, ಅದರಲ್ಲಿ ಇನ್ನೊಂದು ಜಾತಿಯು ಹುಟ್ಟುವಂತೆ ಎಂದೂ ಬದಲಾಗುವದಿಲ್ಲೆಂದು ಸಾರಿದನು. ಆ ಕಾಲದ ವಾತಾವರಣವು ಕೂವ್ಹಿಯೇಗೇ ಅನುಕೂಲವಿದ್ದುದರಿಂದ ಲಾಮಾರ್ಕನು ಹಿಂದೆ ಬಿದ್ದನು.

ಮುಂದೆ ೫೦ ವರ್ಷಗಳ ನಂತರ ಬಂದ ಡಾರ್ವಿನ್ನನ ವಿಕಾಶವಾದದ ದೈವವು ತೆರೆಯಿತು ಪೃಥ್ವಿಯ ಪ್ರದಕ್ಷಿಣೆಗೆಂದು ಹೊರಟ ಹಡಗಕ್ಕೆ ಪ್ರಾಣಿಶಾಸ್ತ್ರಜ್ಞನೆಂದು ತರುಣ ಚಾರ್ಲಸ ಡಾರ್ವಿನ್ನನು ನಿಯಮಿಸಲ್ಪಟ್ಟಿದ್ದನು. ಐದು ವರ್ಷ ಜಗತ್ತನ್ನೆಲ್ಲ ಸುತ್ತಿಬಂದನು. ಅನೇಕ ಪ್ರಾಣಿಗಳ ಹಾಗು ವನಸ್ಪತಿಗಳ ಅಭ್ಯಾಸಕ್ಕೆ ಈ ಪ್ರವಾಸವು ಒಳ್ಳೇ ಅನುಕೂಲವಾಯಿತು. ಮರಳಿ ಬಂದ ನಂತರ ಮಾಲ್ಥುಸನ ಲೋಕಸಂಖ್ಯೆಯ ಮೇಲಿನ ನಿಬಂಧವನ್ನು ಡಾರ್ವಿನ್ನನು ಓದಿದನು. ಆದರಿಂದ ಅವನಿಗೆ ಜೀವನಕಲಹದ ಹಾಗು ಸ್ವಭಾವಸಿದ್ಧವಾದ ಆಯ್ಕೆಯ ಸಿದ್ಧಾಂತವು ಹೊಳೆಯಿತು. ಮುಂದೆ ೧೮೪೪ರಲ್ಲಿ ಅವನು ತನ್ನ ಸಿದ್ಧಾಂತವನ್ನು ಬರೆದು ತೆಗೆದನು. ಆದರೆ ಅವನು ಆಗಲೇ ಅದನ್ನು ಪ್ರಸಿದ್ಧಿಸದೆ, ೧೭-೧೮ ವರ್ಷ ಪ್ರಯೋಗಗಳನ್ನು ಮಾಡುವದರಲ್ಲಿಯೂ ಪುರಾವೆಗಳನ್ನು ದೊರಕಿಸುವದರಲ್ಲಿಯೂ ತನ್ನ ಸಿದ್ಧಾಂತ ಎಂದೂ ಬೀಳದಂತೆಯೂ ವಿಚಾರಮಾಡುವದರಲ್ಲಿ ಸಮಯ ಕಳೆದನು. ಆದರೆ ಸಹೋದ್ಯೋಗಿಗಳ ಒತ್ತಾಯದಿಂದ

೧೮೫೭ರಲ್ಲಿ ತನ್ನ ಸಿದ್ಧಾಂತವನ್ನು ಸವಿಸ್ತಾರವಾಗಿ ಬರೆಯುತೊಡಗಿದನು. ಇಷ್ಟರಲ್ಲಿ 'ವಾಲೇಸ'ನೆಂಬ ತರುಣ ವಿದ್ವಾಂಸನಿಗೆ, ಇದೇ ಸಿತ್ಧಾಂತವೇ ಸ್ವತಂತ್ರ ರೀತಿಯಿಂದ ಹೊಳೆದು ಅವನು ಅದರ ಮೇಲೆ, ಒಂದು ನಿಬಂಧ ವನ್ನು ಬರೆದು ಡಾರ್ವಿನ್ನನ ಕಡೆಗೆ ಕಳಿಸಿಕೊಟ್ಟನು. ಇದರಿಂದ ಡಾರ್ವಿನ್ನನ ಪರಿಸ್ಥಿತಿಯು ಕಠಿಣವಾಯಿತು. ಆದರೂ ವಾಲೇಸನು ತನ್ನ ಮೇಲೆಯಿಟ್ಟ ವಿಶ್ವಾಸವನ್ನು ನೆನೆದು ಅವನ ಪ್ರಬಂಧವನ್ನು 'ಲಿನಿಯನ್ ಸೊಸಾಯಿಟಿ'ಯಲ್ಲಿ ಓದಿ ತೋರಿಸಿದನು. ಇನ್ನು ಮುಂದೆ ವಿಲಂಬಮಾಡಿ ಉಪಯೋಗವಿಲ್ಲೆಂದು ಕಂಡುಕೊಂಡು, ಅವನು 'ಸ್ವಭಾವಸಿದ್ಧವಾದ ಆಯ್ಕೆಯಿಂದಾಗುವ ಜೀವಜಾತಿಗಳ ಹುಟ್ಟು ಅಥವಾ ಜೀವನಕಲಹದಲ್ಲಿ ಬಲಿಷ್ಠರ ಬಾಳ್ವೆ' ಎಂಬ ಗ್ರಂಥವನ್ನು ೧೮೫೯ರಲ್ಲಿ ಪ್ರಸಿದ್ಧಿಸಿದನು. ಈ ಗ್ರಂಥಪ್ರಕಟನೆಯಿಂದ ಶಾಸ್ತ್ರೀಯ ಜಗತ್ತಿನಲ್ಲಿ ಉಂಟಾದ ಕೋಲಾಹಲವು ಯಾವ ಗ್ರಂಥದಿಂದಲೂ ಉಂಟಾಗಿರಲಿಲ್ಲ. ಅವನ ಗ್ರಂಥದ ಹಾಗು ಅವನ ಹೆಸರೇ ಎಲ್ಲ ಕಡೆಗೂ ಕೇಳಬರುತ್ತಿತ್ತು. ಸ್ವಲ್ಪ ಸಮಯದಲ್ಲಿಯೇ ಡಾರ್ವಿನ್ನನ ಸಿದ್ಧಾಂತವು ಸರ್ವಮಾನ್ಯವಾಗಿ, ಹೂಕರ, ಲಾಯೇಲ, ಹಕ್ಸಲೆ, ಟಿಂಡಾಲ, ಸ್ಪೆನ್ಸರರಂಥ ಕಟ್ಟಾ ಪುರಾತನ ವಾದಿಗಳು ಕೂಡ ಅವನ ಶಿಷ್ಯರಾದರು.

ಡಾರ್ವಿನ್ನನ ಜೀವಜಾತಿಗಳ ಉತ್ಪತ್ತಿಯ ಸಿದ್ಧಾಂತವು ಪ್ರಬಲವಾದ ತರ್ಕಶಾಸ್ತ್ರವು. ಮೊದಲು ಪ್ರಯೋಗಗಳಿಂದ ಸಿದ್ಧವಾದ ಸಂಗತಿಗಳಿಂದ ಅನುಮಾನ ಕಟ್ಟುವುದು, ಆ ಮೇಲೆ ಅದೇ ಅನುಮಾನವನ್ನು ಗೃಹಿತ ಹಿಡಿದು ಎರಡನೇ ಅನುಮಾನವನ್ನು ಸ್ಥಾಪಿಸುವದು, ಇದೇ ಕ್ರಮವಿವೆ. ಅದರಲ್ಲಿ ಸೃಷ್ಟಿಯನ್ನು ನಿರೀಕ್ಷಿಸಿದರೆ, ಜೀವಗಳ ಪ್ರವೃತ್ತಿಯು ತಮ್ಮ ಸಂಖ್ಯೆಯನ್ನು ಅತ್ಯಂತ ವೇಗದಿಂದ ಬೆಳೆಸುವದರ ಕಡೆಗೇ ಇದ್ದುದು ಕಂಡುಬರುತ್ತದೆ. ಯಾವುದೊಂದು ಹಣ್ಣಿನ ಗಿಡವನ್ನು ನೋಡಿದರೆ, ತನ್ನಂಥ ಗಿಡಗಳನ್ನು ನಿರ್ಮಿಸಬಲ್ಲ ಸಾವಿರಾರು ಬೀಜಗಳನ್ನು ಪ್ರತಿವರ್ಷ ಹುಟ್ಟಿಸುತ್ತದೆ. ಹೀಗಿದ್ದರೂ ಜಗತ್ತಿನಲ್ಲಿಯ ಅವಕಾಶವೂ ಅನ್ನಸಂಗ್ರಹವೂ ಮರ್ಯಾದಿತವಿರುವದರಿಂದ ಪರಿಣಾಮದಲ್ಲಿ ಮಾತ್ರ ಜೀವಿಗಳ ಸಂಖ್ಯೆಯು ಸಾಧಾರಣವಾಗಿ ಅಷ್ಟೇ ಇರುವದು

ಕಾಣುತ್ತದೆ. ಈ ಎರಡೂ ಸಂಗತಿಗಳಿಂದ, ಜಗತ್ತಿನಲ್ಲಿ ಯಾವಾಗಲೂ ಜೀವನಕಲಹವು ಸಾಗಿದೆ. ಅದರಲ್ಲಿ ಜೀವಗಳ ಹುಟ್ಟಿನಷ್ಟೇ ಮರಣವೂ ಇರಬೇಕೆಂಬ ಅನುಮಾನವು ಹೊರಡುತ್ತದೆ. ಸೃಷ್ಟಿನಿರೀಕ್ಷಣದಲ್ಲಿ ಸಂತತಿಯು ಮುಖ್ಯ ಮುಖ್ಯ ವಿಷಯಗಳಲ್ಲಿ ತಂದೆತಾಯಿಗಳಂತೆ ಕಂಡರೂ ಪೂರ್ಣವಾಗಿ ಅವರಂತೆಯೇ ಇರದೆ, ಅನೇಕ ಹೆಚ್ಚುಕಡಿಮೆಗಳಾದುದು ಕಾಣುತ್ತದೆ. ಅಂದಮೇಲೆ, ಜೀವನದ ಕಲಹ ಹಾಗು ಸಂತತಿಯಲ್ಲಿ ತೋರುವ ಬದಲಾವಣೆ ಈ ಎರಡೂ ಸಂಗತಿಗಳನ್ನು ಗೃಹಿತ ಹಿಡಿದರೆ, ಜೀವನಕಲಹಕ್ಕೆ ಉಪಯೋಗಬೀಳುವ ಬದಲಾವಣೆಗಳು ಯಾವ ಸಂತತಿಯಲ್ಲಿ ಆಗುವುದೋ ಆ ಸಂತತಿಯು ಬದುಕಿ ಬಾಳುವುದು. ಉಳಿದವೆಲ್ಲವೂ ಅಳಿಯುವವು ಎಂಬ ಅನುಮಾನವು ಹೊರಡುತ್ತದೆ. ಈ ಸಿದ್ಧಾಂತಕ್ಕೆ ಸ್ವಭಾವಸಿದ್ಧವಾದ ಆಯ್ಕೆ, ಅಥವಾ ಬಲಿಷ್ಠರ ಬಾಳ್ವೆ (natural selection or survival of the fittest ) ಎಂದು ಡಾರ್ವಿನನು ಅಂದಿದ್ದಾನೆ. ಪರಿಸ್ಥಿತಿಗೆ ತಕ್ಕಂತೆ ಯಾವ ಪ್ರಾಣಿಗಳಲ್ಲಿ ಬದಲಾವಣೆಯಾಗಿರುವುದೋ ಅವೇ ಬಾಳಿ ಬದುಕಬಲ್ಲವು ಎಂದು ಇದರ ಅರ್ಥ. ಬಾಹ್ಯ ಪರಿಸ್ಥಿತಿಯು ಯಾವಾಗಲೂ ಬದಲಾಗುತ್ತದೆ. ಅದಕ್ಕೆ ತಕ್ಕಂತೆ ಪ್ರಾಣಿಗಳಲ್ಲಿ ಬದಲಾವಣೆಯಾದರೆ ಬಾಳುತ್ತವೆ. ಇಲ್ಲದಿದ್ದರೆ ಅಳಿಯುತ್ತವೆ. ಬದಲಾದ ಪರಿಸ್ಥಿತಿಯು ಎಂದೂ ಮೊದಲಿನಂತೆ ಹೇಗೆ ಆಗುವದಿಲ್ಲವೋ ಅದರಂತೆಯೇ ಪ್ರಾಣಿಗಳ ಬದಲಾವಣೆಯು ಕೂಡ ಸ್ಥಿರವಾಗಿಯೇ ಆಗುತ್ತದೆ. ಹೀಗೆ ಬದಲಾವಣೆಯು ಆಗುತ್ತ ನಡೆದಂತೆ ಭಿನ್ನ ಜಾತಿಯೇ ಹುಟ್ಟುತ್ತದೆ.

ಇದೇ ಡಾರ್ವಿನ್ನನ ಸಿದ್ಧಾಂತದ ಸಾರಾಂಶವು. ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಕೀಳುಜಾತಿಯಿಂದ ಕ್ರಮವಾಗಿ ವಿಕಾಸವಾಗುತ್ತ ಹೆಚ್ಚು ಸುಧಾರಿಸಿದ ಶರೀರವುಳ್ಳ ಜಾತಿಗಳು ಹುಟ್ಟುತ್ತವೆ ಎಂಬುದೇ ಈ ಸಿದ್ಧಾಂತದ ತಿರುಳು. ಈ ಸಿದ್ಧಾಂತದಿಂದ ಶಾಸ್ತ್ರಜ್ಞರ ದೃಷ್ಟಿಯೆ ಬದಲಾಯಿತು. ಕೀಳುಜಂತುವಿನಿಂದ ಮನುಷ್ಯನ ವರೆಗಿನ ವಿಕಾಸದ ಮಾಲೆಯೇ ಅವರ ಕಣ್ಣಿಗೆ ಕಟ್ಟಿದಂತಾಗಹತ್ತಿತು. ಪ್ರಾಣಿಗಳ ಹಾಗು ವನಸ್ಪತಿಗಳ ವರ್ಗೀಕರಣವು ವಿಕಾಸವಾದದ ತಳಹದಿಯ ಮೇಲೆ ಮಾಡಲ್ಪಟ್ಟಿತು.

ಈ ಉತ್ಸಾಹದ ಉಕ್ಕು ಕಡಿಮೆಯಾದನಂತರ ಡಾರ್ವಿನ್ನನ ಸಿದ್ಧಾಂತವನ್ನು ಅರೆದು ಒರೆದು ನೋಡಲು ಪ್ರಾರಂಭವಾಯಿತು. ಲಾಮಾರ್ಕನು ಗೊತ್ತುಹಚ್ಚಿದ ಶೋಧವೇ ಡಾರ್ವಿನ್ನನದು. ಇದರಲ್ಲಿ ಹೊಸದೇನೂ ಇಲ್ಲ. ಇಷ್ಟೇ ಅಲ್ಲ—ಅದು ಅಪೂರ್ಣವಿದೆ ಎಂದು ಅನುಭವಕ್ಕೆ ಬರಹತ್ತಿತು. ಸಂತತಿಯಲ್ಲಾಗುವ ಪ್ರತ್ಯಕ್ಷ ಬದಲಾವಣೆಗಳನ್ನು ಡಾರ್ವಿನ್ನನು ಹೇಳಿದನು. ಆದರೆ ಅವು ಹೇಗೆ ಯಾಕೆ ಆಗುತ್ತವೆ ಎಂಬುದನ್ನು ಹೇಳಲು ಅವನಿಗೆ ಆಗಲಿಲ್ಲ. ಅದರಂತೆಯೇ ಜೀವನ ಕಲಹದಲ್ಲಿ ಉಪಯೋಗಬೀಳದ ಬದಲಾವಣೆಗಳೂ ಆಗುತ್ತವೆಂದು ಶಾಸ್ತ್ರಜ್ಞರು ತೋರಿಸಿಕೊಟ್ಟರು. ಡಾರ್ವಿನ್ನನ ಸಿದ್ಧಾಂತದಂತೆ ಪರಿಸ್ಥಿತಿಗೆ ಉಪಯೋಗಬೀಳುವ ಬದಲುಗಳಷ್ಟೇ ಆಗಬೇಕಿತ್ತು. ತಂದೆತಾಯಿಗಳ ಸ್ವಸಂಪಾದನ ವೈಶಿಷ್ಟ್ಯವು ಸಂತತಿಯಲ್ಲಿ ಇಳಿಯುತ್ತದೆ ಎಂದು ಪ್ರತಿಪಾದಿಸುವ ಲಾಮಾರ್ಕನ ಅನುಯಾಯಿಗಳು ಮುಂದೆ ಬಂದರು. ಇದರಿಂದ ತಂದೆತಾಯಿಗಳ ಗುಣಗಳು ಎಷ್ಟರಮಟ್ಟಿಗೆ ಸಂತತಿಯಲ್ಲಿ ಇಳಿಯುತ್ತವೆ ಎಂಬುದರ ಕಡೆಗೆ ಎಲ್ಲರ ಲಕ್ಷ್ಯವು ಹೊರಳಿತು. ಅದರ ಪರಿಣಾಮವು ಜನನಶಾಸ್ತ್ರ (genetics and heredity) ದಲ್ಲಿ ಪರಿಣಮಿಸಿತು.

ವಿಕಾಸವಾದವು ಎಲ್ಲ ಕ್ಷೇತ್ರಗಳಲ್ಲಿ ಕ್ರಾಂತಿಯನ್ನುಂಟುಮಾಡಿತು. ಮಾನವಜಾತಿಯು ಸರ್ವ ವಿಷಯಗಳಲ್ಲಿಯೂ ಹೊಸ ದೃಷ್ಟಿಯನ್ನು ಕೊಟ್ಟಿತು. ಮನುಷ್ಯನ ಸಮಾಜವು ಅಥವಾ ಸಂಸ್ಥೆಯು ಯಾರ ಅಪ್ಪಣೆಯಿಂದಲೂ ನಡೆಯದೆ, ವಿಕಸಿತವಾಗುತ್ತದೆ. ಬೆಳೆಯಬೇಕೆಂಬ ಅಂತರ್ಗತಶಕ್ತಿಯೂ ಬಾಹ್ಯಪರಿಸ್ಥಿತಿಯೂ ಕೂಡಿ ಸುಧಾರಣೆಯಾಗುತ್ತದೆ ಎಂಬ ಕಲ್ಪನೆಯು ಎಲ್ಲೆಡೆಯಲ್ಲಿಯೂ ಹರಡಿತು. ಎಲ್ಲ ಕ್ಷೇತ್ರಗಳಲ್ಲಿಯೂ ವಿಕಾಸವನ್ನು ನೋಡುವ ಪ್ರವೃತ್ತಿಯು ಉಂಟಾಯಿತು. ಮಾನವರಲ್ಲಿಯ ಜೀವನಕಲಹವೂ ಸ್ಪರ್ಧೆಯೂ ಉನ್ನತಿಗೆ ಸಾಧನವೆಂಬ ಕಲ್ಪನೆಯೂ ಬೆಳೆಯಿತು. ಅಂತೂ ಕೆಲಕಾಲ, ಡಾರ್ವಿನ್ನನ ವಿಕಾಸವಾದವು ಎಲ್ಲ ಕಡೆಗೂ ಮೆರೆಯಿತು.

## ೩. ಪಿಂಡವೃದ್ಧಿ ಶಾಸ್ತ್ರ ಹಾಗು ಜನನಶಾಸ್ತ್ರ

ಪ್ರಾಣಿಗಳ ಶರೀರಗಳು ಅಸಂಖ್ಯ ಕೋಶಗಳಿಂದ ಆಗಿವೆ. ಈ ಕೋಶಗಳಲ್ಲಿ ಕೆಲವು ಪ್ರಜೋತ್ಪಾದಕ ಕೋಶಗಳಿರುತ್ತವೆ. ಇವುಗಳಲ್ಲಿ ಅಂಡಕೋಶಗಳೆಂದೂ ಶುಕ್ರಕೋಶಗಳೆಂದೂ ಎರಡು ಭಾಗಗಳು. ಅಂಡಕೋಶಗಳು ಹೆಣ್ಣಿನಲ್ಲಿಯೂ ಶುಕ್ರಕೋಶಗಳು ಗಂಡಿನಲ್ಲಿಯೂ ಇರುತ್ತವೆ. ಅಂಡಕೋಶಗಳು ಶುಕ್ರಕೋಶಗಳಿಗಿಂತ ದೊಡ್ಡವಿದ್ದು ಅವುಗಳಲ್ಲಿ ಪೋಷಕದ್ರವ್ಯದ ಸಂಗ್ರಹವು ಹೆಚ್ಚಾಗಿರುತ್ತದೆ. ಶುಕ್ರಕೋಶವು ಚಿಕ್ಕದಿದ್ದು ಚಂಚಲವಿರುತ್ತದೆ. ಈ ಎರಡೂ ಕೋಶಗಳ ಸಂಯೋಗದಿಂದ ಗರ್ಭಧಾರಣವಾಗುತ್ತದೆ. ಅವೆರಡೂ ಕೂಡಿ ಸಗರ್ಭಕೋಶವು (zygote) ಸಿದ್ಧವಾಗುತ್ತದೆ. ಈ ಗರ್ಭಕೋಶವು ಬೆಳೆದು ಒಂದಕ್ಕೆ ಎರಡು, ಎರಡಕ್ಕೆ ನಾಲ್ಕು ಹೀಗೆ ವೇಗದಿಂದ ಬೆಳೆದು ಸಾವಿರಾರು ಕೋಶಗಳ ಗುಂಪು ಸಿದ್ಧವಾಗುವವು. ಮೆಲ್ಲನೆ ವಿಶಿಷ್ಟ ಕೋಶಗಳ ಚೈತನ್ಯದ್ರವಗಳಲ್ಲಿ ವಿಶಿಷ್ಟ ಬಗೆಯಿಂದ ಹೆಚ್ಚುಕಡಿಮೆಗಳಾಗಹತ್ತಿ ಅವುಗಳಿಂದ ಅಸ್ಥಿ, ಸ್ನಾಯು, ತ್ವಚ, ಮಾಂಸ ಮೊದಲಾದ ಶರೀರದ ಘಟಕಗಳು ಸಿದ್ಧವಾಗುತ್ತವೆ. ಮುಂದೆ ಅವಯವಗಳಾಗಿ ಗರ್ಭವು ಪೂರ್ಣವಾಗಿ ಬೆಳೆದು ಯೋಗ್ಯ ಸಮಯದಲ್ಲಿ ಆವರಣವನ್ನು ಕಳಚಿ ಜೀವವು ಹುಟ್ಟುತ್ತದೆ.

ಮಾತಾಪಿತೃಗಳ ಗುಣಧರ್ಮಗಳ ವಾಹಕಗಳಾದ ಅಂಡಕೋಶ, ಹಾಗು ಶುಕ್ರಕೋಶಗಳಿಂದ ಗುಣಧರ್ಮಗಳ ಸಂಕ್ರಮಣವು ಹೇಗೆ ಆಗುತ್ತದೆ ಎಂಬ ಬಗ್ಗೆ ಪ್ರಯೋಗವು ಇನ್ನೂ ನಡೆದಿದೆ. ತಂದೆ-ತಾಯಿಗಳ ಸ್ವಸಂಪಾದಿತ ಗುಣಗಳು ಸಂತತಿಯಲ್ಲಿ ಬರುವವೋ ಇಲ್ಲವೋ ಎಂಬುದರ ಪ್ರಯೋಗವು ಹಾಗು ವಾದವಿವಾದವು ಬಹಳವಾಗಿ, ಆ ಗುಣಗಳು ಸಂತತಿಯಲ್ಲಿ ಇಳಿಯುವದಿಲ್ಲೆಂದು ಸಾಧಾರಣವಾಗಿ ನಿರ್ಣಯವಾಗಿದೆ. ವ್ಹಾಯಿಸಮಾನ, ಮೆಂಡೆಲ, ಹೆಕೆಲ ಮೊದಲಾದವರು ಈ ವಿಷಯವಾಗಿ ಅನೇಕ ಶೋಧಗಳನ್ನು ಮಾಡಿದ್ದಾರೆ

## ೪. ಜಂತುಶಾಸ್ತ್ರ ಹಾಗು ಜಂತುವಿಷನಾಶಕ ಉಪಚಾರಪದ್ಧತಿ.

' ಲೀವೇನಹಾಯೇಕ ' ಎಂಬ ಶಾಸ್ತ್ರಜ್ಞನು ೧೩ನೇ ಶತಮಾನದಲ್ಲಿ

ಸೂಕ್ಷ್ಮಜಂತುಗಳ ಅಸ್ತಿತ್ವವನ್ನು ಕಂಡುಹಿಡಿದನು. ಆದರೆ ೧೮ನೇ ಶತಮಾನದಲ್ಲಿ ಈ ಜಂತುಗಳ ವಿಷಯವಾಗಿ ಯಾರೂ ಅಭ್ಯಾಸ ಮಾಡ ಲಿಲ್ಲ. ೧೮೩೦ರಲ್ಲಿ ಜರ್ಮನಿಯಲ್ಲಿ ಬ್ಯಾಕ್ಟಿರಿಯಾ ಅರ್ಥಾತ್ ಸೂಕ್ಷ್ಮ ಜಂತುಗಳ ನಿರೀಕ್ಷಣಕ್ಕೆ ಪ್ರಾರಂಭವಾಯಿತು. ಆದರೆ ಜರ್ಮನಶಾಸ್ತ್ರಜ್ಞ ರಿಗೆ ಹೊಳೆದ ಕಲ್ಪನೆಗಳಿಗೆ ಶಾಸ್ತ್ರೀಯ ಆಧಾರವಿರದ್ದರಿಂದ ಅವು ಮಾನ್ಯತೆ ಯನ್ನು ಪಡೆಯಲಿಲ್ಲ.

ಮುಂದೆ ಲುಯಿಪಾಶ್ಚೂರ (೧೮೨೨-೧೮೯೫) ನೆಂಬ ಫ್ರೆಂಚ ವಿದ್ವಾಂಸನು ಈ ಪ್ರಶ್ನೆಗೆ ೧೮೫೭ರಲ್ಲಿ ಕೈಹಾಕಿದನು. ಅವನು ಮೊದಲು ಹುಳಿಯೊಡೆಯುವ ಅಥವಾ ಹುಳಿಯಿಂದ ಬುರುಗು ಬರುವ ಕ್ರಿಯೆಯ ಪರೀಕ್ಷಣವನ್ನು ಪ್ರಾರಂಭಿಸಿದನು. ದ್ರಾಕ್ಷಾರಸವು ಹುಳಿಯೊಡೆದು ಮದ್ಯವಾಗುವ ಕಾರ್ಯವು 'ಯೀಸ್ಟ' ಎಂಬ ಸೂಕ್ಷ್ಮ ವನಸ್ಪತಿಯಿಂದ ಆಗುವದೆಂದು ಕಂಡುಹಿಡಿದನು. ಸ್ವಲ್ಪ ದಿನಗಳಲ್ಲಿಯೇ ಕೆಡುವ, ಹುಳಿ ಯೊಡೆಯುವ ಹಾಗು ಮೊಸರು ಆಗುವ ಕ್ರಿಯೆಯು ಸೂಕ್ಷ್ಮಜಂತು ಗಳಿಂದಲೇ ಆಗುವದೆಂದು ನಿಸ್ಸಂದಿಗ್ಧವಾಗಿ ಸಿದ್ಧಮಾಡಿದನು. ವನಸ್ಪತಿಜ ಹಾಗು ಪ್ರಾಣಿಜಗಳಲ್ಲಿ ಈ ಬಗೆಯ ವಿಕೃತಿಯು ಆಗುವದೆಂದಮೇಲೆ, ಪ್ರತ್ಯಕ್ಷಪ್ರಾಣಿಗಳಲ್ಲಿಯೂ ಏಕೆ ನಡೆಯಬಾರದು ಎಂಬ ಕಲ್ಪನೆಯು ಪಾಶ್ಚೂರನಲ್ಲಿ ಬಂದಿತು. ರೇಶ್ಮೆ ಹುಳುಗಳಿಗೆ ಬರುವ ರೋಗದ ಬಗ್ಗೆ ಪ್ರಯೋಗಗಳನ್ನು ನಡೆಯಿಸಿ, ಸೂಕ್ಷ್ಮಜಂತುಗಳಿಂದಲೇ ರೋಗವು ಹುಟ್ಟುತ್ತದೆಂದು ಬೈಲಿಗೆಡವಿದನು. ಅದರಂತೆ ಕುರಿಗಳಿಗೆ ಬರುವ ರೋಗವು ಕೂಡ ಒಂದು ಬಗೆಯ ಜಂತುಗಳಿಂದಲೇ ಎಂದು ಸಿದ್ಧಮಾಡಿ ದನು. ಮನುಷ್ಯನ ರೋಗಗಳಿಗೂ ಜಂತುಗಳೇ ಕಾರಣವೆಂದು ಸಾಧಾ ರಣ ಸಿದ್ಧವಾದಂತೆಯೇ ಆಗಿತ್ತು. ಆದರೆ ಯಾವ ರೋಗವು ಎಂಥ ಜಂತುಗಳಿಂದ ಹುಟ್ಟುತ್ತದೆ ಎಂಬುದನ್ನು ಶೋಧಿಸುವದು ಮಾತ್ರ ಉಳಿದಿತ್ತು. ಈ ವಿಷಯವಾಗಿ 'ಕೋಖ' ನೆಂಬ ಜರ್ಮನ ಸಂಶೋಧಕನು ಪ್ರಯತ್ನಪಟ್ಟು, ಅನೇಕ ರೋಗಗಳ ಜಂತುಗಳನ್ನು ಹುಡುಕಿ ತೆಗೆದನು. ಕ್ಷಯದ ಜಂತುಗಳನ್ನು೧೮೮೨ರಲ್ಲಿ; ೧೮೮೩ರಲ್ಲಿ ಕಾಲರಾದ ಜಂತುಗಳನ್ನು ಹುಡುಕಿದನು. ಪಾಶ್ಚೂರನ ಕಲ್ಪನೆಯು ಇದಕ್ಕಿಂತ ಮುಂದೆ ಹೋಗಿ,

ಜಂತುಗಳ ಶೋಧವಾದಂತೆ ಜಂತುನಾಶಕ ಉಪಾಯುಗಳ ಶೋಧವೇಕಾಗ ಬಾರದೆಂದು ಆಲೋಚಿಸಹತ್ತಿದ್ದನು. ಆ ಸಮಯಕ್ಕೆ ಮೈಲಿಬೇನೆಗೆ ಮೈಲಿ ಚುಚ್ಚುವ ಪದ್ಧತಿಯು ಬಂದಿತ್ತು. ಅದನ್ನು ಕಂಡು ಪಾಶ್ಚ್ಯುರನು ತನ್ನ ಪ್ರಯೋಗಕ್ಕೆ ಪ್ರಾರಂಭಿಸಿದನು. ಕೂಡಲೆ ಆ್ಯಥ್ರ್ಯಾಕ್ಸ ರೋಗದ ಪ್ರತಿಬಂಧಕ ರಸವನ್ನು ಹುಡುಕುವದರಲ್ಲಿ ಯಶಸ್ಸು ಪಡೆದನು. ಮುಂದೆ ಒಂದರ ಹಿಂದೊಂದು ರೋಗಗಳಿಗೆ ಪ್ರತಿಬಂಧಕ ರಸವನ್ನು ಸಿದ್ಧಮಾಡಿದನು. ಯಾವುದೇ ಸಾಂಸರ್ಗಿಕ ರೋಗಕ್ಕೆ ಈಗ ಮಾಡಿಸಿಕೊಳ್ಳುತ್ತಿರುವ ಇನಾಕ್ಯುಲೇಶನ್ನಗಳು ಈ ಪ್ರತಿಬಂಧಕ ರಸಗಳೇ!

ಈ ಪ್ರತಿಬಂಧಕ ರಸವನ್ನು ಸಿದ್ಧಪಡಿಸುವ ಕ್ರಮವು ಕೆಳಗಿನಂತೆ ಇದೆ. "ಮನುಷ್ಯನಿಗೆ ಪ್ಲೇಗ, ಮಾರಿಕಾ ಮೊದಲಾದ ರೋಗಗಳು ಬರುತ್ತವೆ ಎಂದರೆ, ಆ ಮನುಷ್ಯನಲ್ಲಿ ಆ ರೋಗದ ಜಂತುಗಳು ಸಂಸರ್ಗ ಅಥವಾ ಇನ್ನಾವ ರೀತಿಯಿಂದಲಾದರೂ ಶರೀರವನ್ನು ವ್ಯಾಪಿಸಿ, ಭಯಂಕರವಾಗಿ ಬೆಳೆಯುತ್ತವೆ. ರಕ್ತಕ್ಕೆ ಅವುಗಳನ್ನು ಪ್ರತಿಬಂಧಿಸಲು ಕಠಿಣ ವಾಗುತ್ತದೆ. ಮೈಮರೆತ ರಾಷ್ಟ್ರದ ಮೇಲೆ ಒಮ್ಮೆಲೆ ದಾಳಿಯಾದರೆ ಅದು ದಿಕ್ಕುಗೆಡುವುದನ್ನು ನಾವು ನೋಡುತ್ತೇವೆ. ಅದರ ವಿರುದ್ಧವಾಗಿ, ತನ್ನನ್ನು ರಕ್ಷಿಸಿಕೊಳ್ಳುವ ಸಿದ್ಧತೆಯನ್ನಿಟ್ಟ ರಾಷ್ಟ್ರದ ಮೇಲೆ ಸಹಸಾ ಯಾರೂ ಕೈಯೆತ್ತುವದಿಲ್ಲ. ಎತ್ತಿದರೂ ಕೂಡ, ಕೂಡಲೆ ಪ್ರತಿಕಾರ ಮಾಡುತ್ತದೆ. ಅದಕ್ಕಾಗಿಯೇ ಪ್ರತಿಯೊಂದು ರಾಷ್ಟ್ರವು ಸೈನ್ಯ ಹಡಗು ಪಡೆಗಳನ್ನು ಇಟ್ಟಿರುತ್ತದೆ. ಇದು ನಮ್ಮ ನಿತ್ಯದ ಅನುಭವವು. ಪ್ರತಿಬಂಧಕ ರಸವನ್ನು ಚುಚ್ಚುವದೆಂದರೆ, ರೋಗಪ್ರತಿಬಂಧಕ ಶಕ್ತಿಯನ್ನು ಹೆಚ್ಚಿಸಿಕೊಂಡಂತೆ ಯಾವುದೊಂದು ರೋಗದ ನಿರ್ವೀರ್ಯ ಅಥವಾ ಕಡಿಮೆ ಶಕ್ತಿಯುಳ್ಳ ಜಂತುಗಳನ್ನು ಚುಚ್ಚಿದರೆ, ಒಳಗಿನ ರಕ್ತವು ಎಚ್ಚರಾಗುತ್ತದೆ, ಹಾಗೂ ಆ ಜಂತುಗಳೊಡನೆ ಹೋರಾಡುತ್ತದೆ. ಇದರಿಂದ ರಕ್ತದಲ್ಲಿ ಪ್ರತಿಕಾರ ಶಕ್ತಿಯು ಹೆಚ್ಚುತ್ತದೆ. ದೊಡ್ಡ ರೋಗದ ಹಾವಳಿಯಾದರೂ ಅದನ್ನು ತಡೆಯಲು ಶಕ್ತವಾಗುತ್ತದೆ. ಯಾವುದೊಂದು ರೋಗಕ್ಕೆ ಚುಚ್ಚುವದೆಂದರೆ, ಆರೋಗ್ಯದ ನಿರ್ವೀರ್ಯ ಜಂತುಗಳ ರಸವನ್ನು ಸಿದ್ಧಪಡಿಸಿ ಅದನ್ನು ಮನುಷ್ಯನ ರಕ್ತದಲ್ಲಿ ಬೆರೆಸುವದೆಂದರ್ಥ.

ಇದಲ್ಲದೆ ಅನೇಕ ರೋಗ ವಿಷಹಾರಕ ದ್ರವ್ಯ (Antitoxins) ಗಳನ್ನು ಸಿದ್ಧಪಡಿಸುವ ಪದ್ಧತಿಗಳ ಶೋಧವಾಗಿದೆ. ರಕ್ತದಲ್ಲಿ ರೋಗಜಂತು ಗಳೊಡನೆ ಹೋರಾಡುವ ಶಕ್ತಿಯು ಇದ್ದೇ ಇದೆ. ರಕ್ತದಲ್ಲಿರುವ ವಿಷ ಹಾರಕ ದ್ರವ್ಯದಿಂದ ಈ ಶಕ್ತಿಯು ರಕ್ತಕ್ಕೆ ಬಂದಿರುತ್ತದೆ. ರೋಗೋ ತ್ಪಾದಕ ಜಂತುಗಳ ರಸವನ್ನು ಯೋಗ್ಯ ರೀತಿಯಿಂದ ರಕ್ತದಲ್ಲಿ ಸೇರಿಸಿ ದರೆ ಅದರಿಂದ ಅಪಾಯವಾಗುವದರ ಬದಲು ರಕ್ತದಲ್ಲಿಯ ವಿಷಹಾರಕ ದ್ರವದಲ್ಲಿ ಜಂತುಗಳನ್ನು ಪ್ರತಿಬಂಧಿಸುವ ಶಕ್ತಿಯು ಮಾತ್ರ ಹೆಚ್ಚಾಗು ತ್ತದೆ. ಈ ಅನುಭವದಿಂದಲೇ ಈ ರಸಗಳು ಸಿದ್ಧಮಾಡಲ್ಪಟ್ಟಿವೆ. ಕೆಲವು ಕೆಲವು ಪ್ರಾಣಿಗಳಲ್ಲಿ, ಅದು ಸಾಯದಂತೆ, ರೋಗಜಂತುಗಳ ವಿಷವನ್ನು ಹೆಚ್ಚೆಚ್ಚು ಹಾಕುತ್ತ ಹೋದಂತೆ, ರಕ್ತದಲ್ಲಿಯ ವಿಷಹಾರಕ ದ್ರವವು ಹೆಚ್ಚೆಚ್ಚು ಬಲಶಾಲಿಯಾಗಿ, ರೋಗಜಂತುಗಳನ್ನು ಪೂರ್ಣವಾಗಿ ಎದುರಿ ಸಲು ಸಿದ್ಧವಾಗುತ್ತದೆ. ಆ ರಸ (Antitoxin) ವನ್ನು ತೆಗೆದು ಮನು ಷ್ಯನ ಶರೀರದಲ್ಲಿ ಚುಚ್ಚಿದರೆ, ಅವನಿಗೂ ರೋಗಕ್ಕೆ ಪ್ರತಿಕಾರ ಮಾಡುವ ಶಕ್ತಿಯು ಬರುವದು. ಕಾಲರಾ, ಘಟಸರ್ಪ ಮೊದಲಾದವುಗಳ ಮೇಲೆ ಈ ಬಗೆಯ ರೋಗವಿಷಹಾರಿಕೆಗಳನ್ನು ಸಿದ್ಧಪಡಿಸಿದ್ದಾರೆ.

ಬೇರೆ ಬೇರೆ ರೋಗಗಳನ್ನು ತರುವ ಜಂತುಗಳು (Bacteria) ಏಕಕೋಶದ ಸೂಕ್ಷ್ಮ ವನಸ್ಪತಿ ಇರುತ್ತದೆ. ಕೆಲವು ಜಂತುಗಳ ಆಕಾ ರವು $\frac{೧}{೩೫೦೦೦}$ ಇಂಚು ಇರುತ್ತವೆ. ಕೆಲವು ಇದಕ್ಕಿಂತ ಸೂಕ್ಷ್ಮವಿರು ತ್ತವೆ. ಎಂತಹ ದೂರದರ್ಶಕ ಯಂತ್ರಕ್ಕೂ ಅವು ಕಾಣುವದಿಲ್ಲ. ಅವು ಗಳಲ್ಲಿ ಕೆಲವು ಗೋಲಾಕಾರವಾಗಿ ಕೆಲವು ಉದ್ದ, ಕೆಲವು ಸ್ಕ್ರೂ ಮಳೆ ಯಂತೆ ಇರುತ್ತವೆ. ಕೆಲವು ಪ್ರಾಣಿಕೋಟಿಗಳಿಂದಾದವು ಇರುತ್ತವೆ. ಜಂತುಗಳ ಅಭ್ಯಾಸವು ಬೆಳೆದು ಜಂತುಶಾಸ್ತ್ರ (Bacteriology) ವು ಹುಟ್ಟಿದೆ.

ಜಂತುಶಾಸ್ತ್ರದ ಶೋಧದಿಂದ ಉಪಚಾರ ಪದ್ಧತಿಯಲ್ಲಿ ಕ್ರಾಂತಿ ಯಾದಂತೆ ಆರೋಗ್ಯವಿಜ್ಞಾನದಲ್ಲಿಯೂ ಪ್ರಗತಿಯಾಗಿದೆ. ರೋಗಗಳ ಕಾರಣವು ನಿಶ್ಚಿತವಾಗಿ ತಿಳಿದದ್ದರಿಂದ ಅದನ್ನು ಹೇಗೆ ಕಳೆಯಬೇಕೆಂಬು ದನ್ನೂ ನಿಶ್ಚಿತವಾಗಿ ಹೇಳಲು ಅನುಕೂಲವಾಗಿದೆ. ಜಂತುಗಳು ಬೆಳೆಯು

ದಂತೆ ಪರಿಸ್ಥಿತಿಯನ್ನುಂಟುಮಾಡುವದು, ಜಂತುಘ್ನ ದ್ರವಗಳ ಉಪಯೋಗ ಮಾಡುವದು, ರಕ್ತದಲ್ಲಿಯ ಪ್ರತಿಕಾರಕ ಶಕ್ತಿಯನ್ನು ಹೆಚ್ಚಿಸುವುದು ಇತ್ಯಾದಿ ತತ್ವಗಳು ಈಗ ಸರ್ವಮಾನ್ಯವಾಗಿವೆ. ಅವುಗಳಿಗನುಸರಿಸಿ, ಉಪಾಯುಗಳೂ ಯೋಜಿಸಲ್ಪಟ್ಟಿವೆ. ವೈಯಕ್ತಿಕ ಹಾಗು ಸಾಮುದಾಯಿಕ ಆರೋಗ್ಯವಿಜ್ಞಾನವು ಪಾಶ್ಚಾತ್ಯರಲ್ಲಿ ಕಲ್ಪನಾತೀತ ಬೆಳೆದಿದೆ. ನಾವು ಉಳಿದವುಗಳಂತೆ ಇದರಲ್ಲಿಯೂ ನೂರಾರು ಮೈಲು ದೂರ ಬಿದ್ದೇವೆ.

ಶಸ್ತ್ರಕ್ರಿಯೆಯಲ್ಲಿ ಜಂತುಘ್ನ ದ್ರವ್ಯಗಳ ಉಪಯೋಗವನ್ನು ೧೮೬೦ರಲ್ಲಿ ಲಾರ್ಡ ಲಿಸ್ಟರನು ಪ್ರಾರಂಭಿಸಿದನು. ಶಸ್ತ್ರಕ್ರಿಯೆಯ ಸರ್ವವ್ಯಾಪಾರಗಳನ್ನು ಜಂತುಗಳ ಸಂಸರ್ಗದಿಂದ ದೂರವಿಡುವ ಯೋಜನೆಯು ಈಗ ಪರಿಪೂರ್ಣವಾಗಿದೆ.

ಪಾಶ್ಚೂರನು ಮಾನವಜನಾಂಗಕ್ಕೆ ಮಾಡಿದ ಈ ಉಪಕಾರವನ್ನು ವರ್ಣಿಸಲು ಶಕ್ಯವಿಲ್ಲ. ಉಚ್ಚ ವಿಚಾರ, ಉದಾತ್ತವಾದ ಆಚರಣೆ,ಧರ್ಮಶ್ರದ್ಧಾವಾನನಾದಂಥ ಒಬ್ಬ ಸಾಧುಪುರುಷನು ಅವನು. ಮಾನವ ಜಾತಿಯ ಹಿತಕರ್ತರೂ ವಂದನೀಯರೂ ಆದ ಪುರುಷರಲ್ಲಿ ಇವನ ಸ್ಥಾನವು ಮೊದಲಿನದಿದೆ

## ಸಾತ್ಮೀಕರಣ ಹಾಗು ಜೀವರಸಾಯನ

ಸರ್ವಜೀವಗಳ ಶರೀರಗಳು ಸೂಕ್ಷ್ಮಕೋಶಗಳಿಂದಾಗಿವೆ. ಪ್ರತಿಯೊಂದು ಕೋಶವು ಜೀವಂತ ಹಾಗು ಕಾರ್ಯಕ್ಷಮವಿದ್ದು, ಅದರ ಜೀವಂತತನವು ಅದರಲ್ಲಿ ತುಂಬಿದ ಚೈತನ್ಯದ್ರವ (protoplasm) ದಿಂದ ಅದಕ್ಕೆ ಬರುತ್ತದೆ. ಈ ಚೈತನ್ಯದ್ರವವೇ ಜೀವತತ್ವದ ಮುಖ್ಯ ಆಧಾರವು. ಇದಕ್ಕೆ ಹಕ್ಸಲೆಯು ಜೀವ ತತ್ವದ ಭೌತಿಕ ಆಧಾರವು ಎಂದಿದ್ದಾನೆ. ಶರೀರದಲ್ಲಿಯ ಸಹೇತುಕ, ಅಹೇತುಕ ಎಲ್ಲ ಕ್ರಿಯೆಗಳೂ ಈ ಚೈತನ್ಯ ದ್ರವದಿಂದಲೇ ಉಂಟಾಗುತ್ತವೆ. ಈ ಚೈತನ್ಯದ್ರವದ ರಾಸಾಯನಿಕ ರಚನೆಯು ಬಹು ತೊಡಕಿನದಿದೆ. ಅಲ್ಲದೆ ಬೇರೆ ಬೇರೆ ಜೀವಗಳಲ್ಲಿ ಭಿನ್ನ ಭಿನ್ನ ಅವಯವಗಳಲ್ಲಿ ಅದರ ಘಟನೆಯು ಬೇರೆ ಬೇರೆ ಇರುತ್ತದೆ. ಆದರೂ ಸಾಧಾ

ರಣವಾಗಿ ಅದರಲ್ಲಿ ಕಾರ್ಬನ್, ಆಕ್ಸಿಜನ, ಹಾಯಡ್ರೋಜನ, ನಾಯಟ್ರೋಜನ, ಸಲ್ಫರ, ಫಾಸ್ಪರಸ ಈ ಮೂಲದ್ರವ್ಯಗಳಿದ್ದುದು ಕಂಡು ಬರುತ್ತದೆ.

ಶರೀರದ ಸರ್ವಕ್ರಿಯೆಗಳು ಈ ಚೈತನ್ಯದ್ರುವದಿಂದಲೇ ನಡೆಯುವದರಿಂದ ಅವುಗಳಲ್ಲಿಯ ಶಕ್ತಿಯು ಒಂದೇಸವನೆ ವ್ಯಯವಾಗುತ್ತಿರುತ್ತದೆ. ಈ ವ್ಯಯವಾದ ಶಕ್ತಿಯನ್ನು ತುಂಬುವ ಕಾರ್ಯವೂ ಹೊಸಶಕ್ತಿಯ ನಿರ್ಮಾಣವೂ ಅವಶ್ಯವು. ಈ ಹೊಸಶಕ್ತಿಯು ರಾಸಾಯನಿಕ ಜ್ವಲನ ಕ್ರಿಯೆಯಿಂದ ಹುಟ್ಟುತ್ತದೆ. ಈ ಜ್ವಲನಕ್ರಿಯೆಯೆಂದರೆ, ಆಕ್ಸಿಜನ ವಾಯು ಹಾಗು ಕಾರ್ಬನಗಳ ಒಂದು ಬಗೆಯ ಸಂಯೋಗವು. ಈ ಸಂಯೋಗದಿಂದ ಚೈತನ್ಯದ್ರುವಕ್ಕೆ ಬೇಕಾಗುವ ಶಕ್ತಿಯು ಸಿಕ್ಕು, ಸಂಯೋಗದಿಂದ ಹುಟ್ಟುವ ಕಾರ್ಬನ್‌ಡಾಯಾಕ್ಸಾಯಿಡವು ನಿರುಪಯೋಗಿ ಎಂದು ಹೊರಹಾಕಲ್ಪಡುತ್ತದೆ.

ಅಂದಮೇಲೆ, ಚೈತನ್ಯದ್ರುವದ ಶಕ್ತಿಯು ಸ್ಥಿರವಾಗಿ ಉಳಿಯಲು ಆಕ್ಸಿಜನ ಹಾಗೂ ಕಾರ್ಬನ್ನಗಳು ಬೇಕೆಂದಾಯಿತು. ಇದಲ್ಲದೆ ಕಾರ್ಯಕರ್ತೃತ್ವದಿಂದ ಚೈತನ್ಯದ್ರವಗಳು ವ್ಯಯವಾಗುತ್ತವೆ. ಅದನ್ನು ತುಂಬುವದಕ್ಕೆ ಚೈತನ್ಯದ್ರುವಕ್ಕೆ, ಕಾರ್ಬನ್, ಹೈಡ್ರೋಜನ, ನೈಟ್ರೋಜನಗಳು ವಿಶಿಷ್ಟ ಸ್ವರೂಪದಲ್ಲಿ ಬೇಕಾಗುತ್ತವೆ. ಈ ಸಂಯೋಗದಲ್ಲಿ ನಿರುಪಯೋಗಿಯಾದ ಪದಾರ್ಥಗಳನ್ನು ಚೈತನ್ಯದ್ರುವವು ಹೊರಗೆ ಹಾಕುತ್ತದೆ.

ಚೈತನ್ಯದ್ರುವಕ್ಕೆ ಬೇಕಾಗುವ ದ್ರವಗಳನ್ನು ಪೂರೈಸುವ ಬೇಡಾದುವನ್ನು ಹೊರಗೆ ಹಾಕುವ ಕಾರ್ಯವನ್ನು ರಕ್ತವು ಮಾಡುತ್ತದೆ. ಶರೀರವನ್ನೆಲ್ಲ ವ್ಯಾಪಿಸಿದ ಸೂಕ್ಷ್ಮ ರಕ್ತವಾಹಿನಿಗಳಿಗೂ ಕೋಶಗಳಿಗೂ ಸಂಬಂಧ ಬರುತ್ತಿಹ. ಚೈತನ್ಯದ್ರುವಕ್ಕೆ ಬೇಕಾಗುವ ಸರ್ವದ್ರುವಗಳನ್ನು ರಕ್ತವು ತರುತ್ತದೆ. ಅವುಗಳನ್ನು ಚೈತನ್ಯದ್ರುವವು ಸ್ವೀಕರಿಸುತ್ತದೆ. ಅವುಗಳಲ್ಲಿಯ ಆಕ್ಸಿಜನ ಹಾಗು ಕಾರ್ಬನಗಳ ಸಂಯೋಗಮಾಡಿ, ಶಕ್ತಿ ಹಾಗು ಉಷ್ಣತೆಯನ್ನು ನಿರ್ಮಿಸುತ್ತದೆ. ಹಾಗು ಕಾರ್ಬನಡಾಯಾಕ್ಸಾಯಿಡವಾಯುವನ್ನೂ ನಿರುಪಯೋಗಿ ದ್ರವ್ಯಗಳನ್ನೂ ಹೊರದೂಡು

ತ್ತದೆ. ಇದೇ ಬಗೆಯಾಗಿ, ಶರೀರದಲ್ಲಿಯ ಅಸಂಖ್ಯಾತ ಕೋಶಗಳಲ್ಲಿ ಚೈತನ್ಯದ್ರವದ ಕೊಡಕೊಳ್ಳುವ ವ್ಯವಹಾರವು ನಡೆದಿರುತ್ತದೆ. ಇದಕ್ಕೆ ಸಾತ್ಮ್ಯೀಕರಣ ( matabolism ) ಎನ್ನುವರು.

ಚೈತನ್ಯದ್ರವಕ್ಕೆ ಅವಶ್ಯವಾದ ಆಕ್ಸಿಜನವು ಶ್ವಸನಕ್ರಿಯೆಯಿಂದ ಪೂರೈಸಲ್ಪಡುತ್ತದೆ. ಚೈತನ್ಯದ್ರವಕ್ಕೆ ಕತೃತ್ವ ಶಕ್ತಿಯಿದ್ದಂತೆ, ಅದರ ಕೈಯಲ್ಲಿರುವವುಗಳೂ ಅಷ್ಟೇ ಕಾರ್ಯತತ್ಪರವಿವೆ. ರಕ್ತದಲ್ಲಿ 'ಹೇಮೋಗ್ಲೋಬೀನ' ಎಂಬ ಕೆಂಪು ಒಣ್ಣದ ದ್ರವ್ಯವಿರುತ್ತದೆ. ಅದಕ್ಕೆ ವಾಯುವನ್ನು ಹೀರುವ ಹಾಗು ಬಿಡುವ ಅದ್ಭುತಶಕ್ತಿಯಿದೆ. ರಕ್ತಕ್ಕೂ ಕೋಶದಲ್ಲಿರುವ ಚೈತನ್ಯದ್ರವಕ್ಕೂ ಸಂಬಂಧ ಬಂದೊಡನೆ, ಹೆಮೋಗ್ಲೋಬೀನವು ಚೈತನ್ಯದ್ರವವು ಬಿಟ್ಟ ಕಾರ್ಬನ್ ಡಾಯಾಕ್ಸಾಯಿಡ ವಾಯುವನ್ನು ಹೀರಿಕೊಳ್ಳುತ್ತದೆ. ಅಲ್ಲಿಂದ ಅಶುದ್ಧ ರಕ್ತವಾಹಿನಿಗಳ ಮುಖಾಂತರ ಹೃದಯಕ್ಕೆ ಬಂದು ಪುಪ್ಫುಸಕ್ಕೆ ಶುದ್ಧತೆಗಾಗಿ ಹೋಗುತ್ತದೆ. ಹೀಗೆ ಶುದ್ಧವಾಗುವ ಕ್ರಿಯೆಯು ಅದ್ಭುತವಿದೆ. ಪುಪ್ಫುಸದಲ್ಲಿಯ ಪೊಳ್ಳಿನಲ್ಲಿ ಒಂದೆಡೆ ಹವೆಯೂ ಒಂದೆಡೆ ರಕ್ತವೂ ನಡುವೆ ಒಂದು ಪಡದೆ ಮರೆಯಲ್ಲಿ ಭೆಟ್ಟಿಯಾಗುತ್ತವೆ. ಹೇಮೋಗ್ಲೋಬೀನವು ತನ್ನ ಹತ್ತರವಿರುವ ಕಾರ್ಬನ್‌ಡಾಯಕ್ಸಾಯಿಡವಾಯುವನ್ನು ಹವೆಗೆ ಕೊಟ್ಟು ಹವೆಯಲ್ಲಿಯ ಆಕ್ಸಿಜನವನ್ನು ತಾನು ಶೋಷಿಸಿಕೊಳ್ಳುತ್ತದೆ. ಹೀಗೆ ಶುದ್ಧವಾದ ರಕ್ತವು ಹೃದಯದಲ್ಲಿ ಹೋಗಿ ಮತ್ತೆ ಧಮನಿಗಳ ಮುಖಾಂತರ ಚೈತನ್ಯದ್ರವದವರೆಗೆ ಹೋಗುತ್ತದೆ. ತಾನು ತಂದ ಆಕ್ಸಿಜನವನ್ನು ಅದಕ್ಕೆ ಕಾಣಿಕೆ ಕೊಡುತ್ತದೆ. ಚೈತನ್ಯದ್ರವಕ್ಕೆ ಈಬಗೆಯಾಗಿ ಆಕ್ಸಿಜನವು ದೊರೆಯುತ್ತದೆ. ಕಾರ್ಬನ, ನಾಯಟ್ರೋಜನ, ಹಾಯಡ್ರೋಜನ ಮೊದಲಾದ ದ್ರವ್ಯಗಳು ಪಚನ ಕ್ರಿಯೆಯ ಯೋಗದಿಂದ ಸಿಗುವದು ಶಕ್ಯವಿದೆ. ಈ ದ್ರವ್ಯಗಳು ಉಂಡ ಅನ್ನದಲ್ಲಿ ಅರಗಿ ವಿಶಿಷ್ಟ ಸ್ವರೂಪದಲ್ಲಿಯೇ ಚೈತನ್ಯ ದ್ರವದ ಕಡೆಗೆ ಬರಬೇಕಾಗುತ್ತದೆ. ಯಾಕಂದರೆ ಹವೆಯಲ್ಲಿ ನೈಟ್ರೋಜನವು ಬೇಕಾದಷ್ಟು ಇದ್ದರೂ ಚೈತನ್ಯದ್ರವಕ್ಕೆ ಉಪಯೋಗ ಬೀಳುವದಿಲ್ಲ. ಆದುದರಿಂದ ಉಂಡ ಅನ್ನದ ಮುಖಾಂತರ ರಸರೂಪದಲ್ಲಿಯೇ ಅದಕ್ಕೆ ಸಿಗಬೇಕಾಗುತ್ತದೆ.

ಪಚನಕ್ರಿಯೆಯ ಸ್ಥೂಲ ಕಲ್ಪನೆಯು ಎಲ್ಲರಿಗೂ ಇದೆ. ಇಲ್ಲಿ ಹೊಸ ಶೋಧಗಳನ್ನು ಮಾತ್ರ ಹೇಳುತ್ತೇವೆ. ನಾವು ಉಣ್ಣುವ ಅನ್ನದಲ್ಲಿ ಚೈತನ್ಯದ್ರವಕ್ಕೆ ಉಪಯೋಗ ಬೀಳುವ ಮೂರು ಬಗೆಯ ದ್ರವ್ಯಗಳಿರುತ್ತವೆ. (೧) ಮಾಂಸೋತ್ಪಾದಕ ದ್ರವ್ಯ (Proteins) ಪಿಷ್ಟಮಯ ದ್ರವ್ಯ ( Carbohydrates ) ಹಾಗು ( ೩ ) ಸ್ನಿಗ್ಧ ದ್ರವ್ಯ (Fats) ಈ ದ್ರವ್ಯಗಳ ಪಚನವೆಂದರೆ ನಾನಾ ಬಗೆಯ ರಾಸಾಯನಿಕ ಕ್ರಿಯೆಗಳು ಇವುಗಳ ಮೇಲೆ ನಡೆದು ರಕ್ತಕ್ಕೆ ಶೋಷಿಸಿಕೊಳ್ಳಲು ಯೋಗ್ಯವಾದ ರಸವಾಗುವದು. ಈ ಬಗೆಯಾಗಿ ಪಚನವಾದ ಅನ್ನರಸವು ಕರಳಿನಲ್ಲಿ ಹರಿಯುತ್ತಿರುವಾಗ ರಕ್ತವು ಅದನ್ನು ಹೀರುತ್ತದೆ. ರಕ್ತದಿಂದ ಚೈತನ್ಯದ್ರವಕ್ಕೆ ಮುಟ್ಟಿಸಲ್ಪಡುತ್ತದೆ. ಈ ರಸದಲ್ಲಿಯ ಮಾಂಸದ್ರವ್ಯಗಳಿಂದ ಚೈತನ್ಯದ್ರವಕ್ಕೆ ನೈಟ್ರೋಜನವು ಸಿಗುತ್ತದೆ. ಪಿಷ್ಟಮಯ ಹಾಗು ಸ್ನಿಗ್ಧ ಪದಾರ್ಥಗಳಿಂದ ಕಾರ್ಬನವು ದೊರೆಯುತ್ತದೆ. ಹೈಡ್ರೋಜನವು ನೀರಿನಿಂದ ಸಿಗುತ್ತದೆ.

ಅನ್ನವನ್ನು ತಿಂದೊಡನೆ ಬಾಯಿಯಲ್ಲಿಯೇ ಪಚನಕ್ರಿಯೆಗೆ ಪ್ರಾರಂಭವಾಗುತ್ತದೆ. ಪಿಷ್ಟಮಯ ಪದಾರ್ಥಗಳು ಬಾಯಿಯಲ್ಲಿ ಅರ್ಧಮರ್ಧ ಪಚನವಾಗಿ ರಸವಾಗುತ್ತವೆ. ಅನ್ನವನ್ನು ಚನ್ನಾಗಿ ಸುರಿಸಲು ಹೇಳುವ ಕಾರಣವೂ ಇದೆ. ಮಾಂಸೋತ್ಪಾದಕ ದ್ರವ್ಯಗಳು ಹೊಟ್ಟೆಯಲ್ಲಿ ಪಚನವಾಗುತ್ತವೆ. ಸ್ನಿಗ್ಧ ಹಾಗು ಪಚನವಾಗದ ದ್ರವ್ಯಗಳು ಕರುಳಿನಲ್ಲಿ ಪಚನವಾಗುತ್ತ, ಪಚನವಾಗದೆ ಉಳಿದ ಭಾಗವು ಹೊರದೂಡಲ್ಪಡುತ್ತದೆ. ಅನ್ನದ ಮೇಲೆ ರಾಸಾಯನಿಕ ಕ್ರಿಯೆಗಳನ್ನುಂಟು ಮಾಡಿ ಅವನ್ನು ವಿಘಟಿಸುವ ಅನೇಕ ದ್ರವ್ಯಗಳು ಶರೀರದಲ್ಲಿಯ ಬೇರೆ ಬೇರೆ ಗ್ರಂಥಿಗಳಿಂದ ಹೊರಬೀಳುತ್ತವೆ. ಈ ವಿಘಟನ ಮಾಡುವ ದ್ರವಗಳಿಗೆ 'ಎಂಝೂಯಿಮ್ಸ್' ವೆನ್ನುವರು. ಬಾಯಿಯಲ್ಲಿಯೇ ಲೋಳೆಯಡನೆ 'ಟಿಯಾಲಿನ್' ಎಂಬ ಎಂಝೂಯಿಮ್ಸವು ಬಂದು ಅನ್ನಕ್ಕೆ ಕೂಡುತ್ತದೆ. ಜಠರದಲ್ಲಿ ಜಠರ ರಸದೊಡನೆ, "ಪೇಪ್ಸಿನ"ವು ಬಂದು ಸೇರುವದು. ಇದಲ್ಲದೆ ಯಕೃತ್ತಿನಿಂದ ಪಿತ್ತರಸವೂ ಸ್ವಾದುಪಿಂಡದಿಂದ ಸ್ವಾದುರಸವೂ

ಬಂದು ಕೂಡುತ್ತವೆ. ಇವೆಲ್ಲ ರಸಗಳು ಪಚನಕ್ಕೆ ಅನುಕೂಲವಾಗುತ್ತವೆ.

ಯಕೃತ್, ಸ್ವಾದುಪಿಂಡಗಳು ಆಕೃತಿಯ ಅವಯವಗಳು. ಅವುಗಳಲ್ಲಿ ಉತ್ಪನ್ನವಾಗುವ ಪಿತ್ತಾದಿ ರಸಗಳು ಹೊರಗೆ ಬರಲು ನಳಿಕೆಗಳಿವೆ. ಆದರೆ ಶರೀರದಲ್ಲಿ ನಳಿಕೆಗಳಿಲ್ಲದ ಅನೇಕ ಗ್ರಂಥಿಗಳಿದ್ದು, ಅವುಗಳಲ್ಲಿಯ ರಸವನ್ನು ರಕ್ತವು ಶೋಷಿಸುತ್ತದೆ. ಇಂತಹ ಕೆಲವು ಗ್ರಂಥಿಗಳು ಪಚನ ಮಾರ್ಗಕ್ಕೆ ಹೊಂದಿಕೊಂಡಿವೆ. ಅವುಗಳೊಳಗಿನ ರಸವು ಹೊರಬಿದ್ದು, ಪಚನಕ್ಕೆ ಉತ್ತೇಜನ ದೊರೆಯುತ್ತದೆ. ಇಂಥ ಗ್ರಂಥಿಗಳು ಶರೀರದ ಇತರ ಭಾಗದಲ್ಲಿಯೂ ಇದ್ದು ಅವುಗಳ ದ್ರವದಿಂದ ಶರೀರವು ಸುಸ್ಥಿತಿಯಲ್ಲಿರಲು, ಬೆಳೆಯಲು ಅನುಕೂಲವಾಗುತ್ತದೆ ಎಂದು ಸಿದ್ಧವಾಗಿದೆ. ಗಂಟಲಿನಲ್ಲಿರುವ 'ಥಾಯರಾಯಿಡ' ಎಂಬ ಗ್ರಂಥಿಯು ಇಂಥದೇ ಒಂದು. ಇದರಿಂದ ಹೊರಬೀಳುವ ರಸವು ಯೋಗ್ಯ ರೀತಿಯಿಂದ ಬರದಿದ್ದರೆ, ಶರೀರದ ಸ್ವಾಸ್ಥ್ಯವು ಕೆಡುವುದು. ಇಂತಪ ರೋಗಿಗಳಿಗೆ, ಆ ಗ್ರಂಥಿಯ ಅರ್ಕವನ್ನೇ ಔಷಧವೆಂದು ಕೊಡುವರು. ಈ ವಾಹಿನಿ ರಹಿತ ಗ್ರಂಥಿಗಳ ಅಭ್ಯಾಸವು (Endocrinology) ಎಂಬ ಶಾಸ್ತ್ರವನ್ನೇ ನಿರ್ಮಿಸಿದೆ.

ಪ್ರಾಣಿಗಳ ಅನ್ನವು ವನಸ್ಪತಿಯು; ಕೆಲವು ಮಾಂಸಾಹಾರಿ ಎಂದು ಕಂಡರೂ ಅದು ಯಾವುದರ ಮಾಂಸವಿರುವದೋ ಅದರ ಆಹಾರವು ವನಸ್ಪತಿಯು. ಆದುದರಿಂದ ಎಲ್ಲ ಪ್ರಾಣಿಗಳ ಅನ್ನವು ವನಸ್ಪತಿಯೇ. ಸ್ವಲ್ಪ ವಿಚಾರ ಮಾಡಿದರೆ, ಆಹಾರಕ್ಕಾಗಿ ಪ್ರಾಣಿಗಳು ಎಷ್ಟು ಪರಾವಲಂಬಿಯಿವೆ ಎಂಬುದು ಹೊಳೆಯುವದು. ಆಹಾರಕ್ಕೆ ಬೇಕಾಗುವ ಜಡ ಸೃಷ್ಟಿಯಲ್ಲಿಯ ಪದಾರ್ಥಗಳನ್ನು (ನೀರು ಹಾಗು ಕ್ಷಾರಗಳನ್ನು ಬಿಟ್ಟು) ಸಾಕ್ಷಾತ್ತಾಗಿ ಉಪಯೋಗಿಸಲು ಅವನು ಶಕ್ತನಿಲ್ಲ. ಸರ್ವ ಪದಾರ್ಥಗಳು ವನಸ್ಪತಿಗಳಿಂದ ಹುಟ್ಟುತ್ತವೆ. ಆ ಮೇಲೆ ಪ್ರಾಣಿಗಳು ತಿನ್ನಬೇಕು. ಇದೆಂಥ ಚಮತ್ಕಾರವು! ಒಂದು ವೇಳೆ ವನಸ್ಪತಿಗಳೆಲ್ಲ ನಷ್ಟವಾದರೆ, ಪ್ರಾಣಿಗಳೆಲ್ಲ ಅನ್ನವಿಲ್ಲದೆ ಸಾಯುವವು. ಹವೆಯಲ್ಲಿ ಬೇಕಾದಷ್ಟು

ನೈಟ್ರೋಜನವಿದ್ದರೂ ಅದನ್ನು ಪ್ರತ್ಯಕ್ಷ ಸೇವಿಸಲು ಶಕ್ಯವಿಲ್ಲ. ಅದನ್ನು ವನಸ್ಪತಿಜ ಪದಾರ್ಥಗಳ ಮುಖಾಂತರವಾಗಿಯೇ ಸೇವಿಸಬೇಕು.

ವನಸ್ಪತಿಯು ಇದರ ವಿರುದ್ಧವಾಗಿದೆ. ವನಸ್ಪತಿಗಳು ಪರಾವಲಂಬಿಗಳಾಗಿರದೆ, ಜಡಸೃಷ್ಟಿಯಿಂದ ಅನ್ನವನ್ನು ಸಿದ್ಧಪಡಿಸಿಕೊಂಡು ಸ್ವಂತದ ಪೋಷಣೆಯನ್ನು ಮಾಡಿಕೊಳ್ಳುವದಲ್ಲದೆ, ಪ್ರಾಣಿವರ್ಗಕ್ಕೂ ಹೊಟ್ಟೆಗೆ ಹಾಕುತ್ತದೆ.

ಪ್ರಾಣಿಗಳಂತೆ ವನಸ್ಪತಿಗಳೂ ಚೈತನ್ಯ ದ್ರವದಿಂದಲೇ ಆಗಿರುತ್ತವೆ. ಅರ್ಥಾತ್ ಪ್ರಾಣಿಗಳಂತೆಯೇ ಇವುಗಳಿಗೂ ಎಲ್ಲ ಬಗೆಯ ಅನ್ನವು ಬೇಕು. ಈ ಅನ್ನವನ್ನು ಸಿದ್ಧಪಡಿಸುವ ರಾಸಾಯನಿಕ ಕಾರಖಾನೆಯು ಪ್ರತಿಯೊಂದು ವನಸ್ಪತಿಯಲ್ಲಿಯೂ ನಡೆದಿರುತ್ತದೆ. ಪ್ರಾಣಿಗಳು ಬಿಟ್ಟ ಅತ್ಯಂತ ಕ್ಷುಲ್ಲಕ ಹಾಗು ತ್ಯಾಜ್ಯ ವಸ್ತುಗಳಿಂದ ಪ್ರಾಣಿವರ್ಗವನ್ನೇ ಪೋಷಿಸುವ ಅನ್ನವನ್ನು ವನಸ್ಪತಿಗಳೂ ಗಿಡಗಳೂ ಹುಲ್ಲುಗಳೂ ಸಿದ್ಧಪಡಿಸುತ್ತವೆ. ಇದೆಂಥ ಆಶ್ಚರ್ಯದ ಸಂಗತಿಯು! ಈ ಅದ್ಭುತ ಶಕ್ತಿಯು ಗಿಡದ ಎಲೆಗಳಲ್ಲಿರುವ ಹಸರು ಬಣ್ಣದಲ್ಲಿರುವ ದ್ರವ್ಯಗಳಿಂದ ಉಂಟಾಗುತ್ತದೆ. ಈ ಎಲೆಗಳ ಹಸರು ಬಣ್ಣವು ಕಣ್ಣಿಗೆ ಬಹು ಅಂದವಾಗಿ ಕಾಣುತ್ತದೆ. ಈ ಎಲೆಯೇ ನಮ್ಮ ಅನ್ನದಾತಾ ಎಂಬುದನ್ನು ಯಾರೂ ಮರೆಯಬಾರದು. ಅದರಿಂದಲೇ ನಾವೆಲ್ಲರೂ ಜೀವಿಸಿದ್ದೇವೆ.

ಗಿಡದ ಎಲೆಗಳ ಯಾವ ಪೃಷ್ಠಭಾಗವು ಸೂರ್ಯನ ಕಡೆಗೆ ಒಲಿದಿರುವದೋ ಆ ಭಾಗದಲ್ಲಿ ಹಸರು ದ್ರವ್ಯವಿರುತ್ತದೆ. ಅದಕ್ಕೆ ಇಂಗ್ಲೀಷಿನಲ್ಲಿ Chlorophyll ಎಂದೂ, ಕನ್ನಡದಲ್ಲಿ 'ಎಲೆಗಳ ಹಸರು' ಎಂದೂ ಅನ್ನುವರು. ಪ್ರಾಣಿಗಳಲ್ಲಿ ರಕ್ತವಾಹಿನಿಗಳಿರುವಂತೆ, ಗಿಡಗಳಲ್ಲಿ ಬೇರುಗಳಿಂದ ಎಲೆಗಳ ವರೆಗೆ ನೀರನ್ನೂ ಹಾಗು ನೀರಿನಲ್ಲಿ ಬೆರೆತ ಕ್ಷಾರಗಳನ್ನೂ ಒಯ್ಯಲು ರಸವಾಹಿನಿಗಳು ಇರುತ್ತವೆ. ಎಲೆಗಳ ಕೋಶಗಳಲ್ಲಿರುವ ಹಸರು ದ್ರವ್ಯದ ಮೇಲೆ ಸೂರ್ಯಕಿರಣವು ಬಿದ್ದೊಡನೆಯೇ ಅದಕ್ಕೆ ಅದ್ಭುತ ಸಾಮರ್ಥ್ಯ ಬರುತ್ತದೆ. ಅದು ಹವೆಯಲ್ಲಿಯ ಕಾರ್ಬನ್ ಡಾಯಾಕ್ಸಾಯಿಡ ವಾಯುವನ್ನು ಶೋಷಿಸಿಕೊಂಡು ಕಾರ್ಬನ್ ಹಾಗು ಆಕ್ಸಿಜನ

ಗಳನ್ನು ಬೇರೆ ಮಾಡುತ್ತದೆ. ಈ ಕಾರ್ಬನ್‌ದೊಡನೆ ಸಮಾರಹಿನಿಗಳ ಮುಖಾಂತರ ಬಂದ ನೀರು ಸಂಯೋಗವಾಗಿ, ಅದರಿಂದ ಪಿಷ್ಟಮಯ (ಸೆಲ್ಯೂಲೋಜ, ಪ್ರೋಟೀನ ಇತ್ಯಾದಿ) ದ್ರವ್ಯಗಳು ಹುಟ್ಟುತ್ತವೆ. ಹಾಗು ಬೇರೆ ಮಾಡಲ್ಪಟ್ಟ ಆಕ್ಸಿಜನವು ತ್ಯಾಜ್ಯವೆಂದು ಹೊರಗೆ ಹಾಕಲ್ಪಡುತ್ತದೆ. ಈ ಬಗೆಯಾಗಿ ಎಲೆಗಳ ಹಸರು ದ್ರವ್ಯವು ಸೂರ್ಯಕಿರಣಗಳ ಸಹಾಯದಿಂದ ಸ್ವತಃ ವನಸ್ಪತಿ ಹಾಗು ಪ್ರಾಣಿಗಳಿಗೆ ಬೇಕಾಗುವ ಅನ್ನವನ್ನು ಸಿದ್ಧಪಡಿಸುತ್ತದಲ್ಲದೆ, ಪ್ರಾಣಿಗಳಿಗೆ ಅಪಾಯಕಾರಕವಾದ ಹವೆಯಲ್ಲಿಯ ಕಾರ್ಬನ್‌ಡಾಯಾಕ್ಸಾಯಿಡ ಹವೆಯನ್ನು ತಾನು ತೆಗೆದುಕೊಂಡು ಪ್ರಾಣಿಗಳ ಜೀವನವಾದ (ಆಕ್ಸಿಜನ) ಪ್ರಾಣವಾಯುವನ್ನು ನಿರ್ಮಿಸುತ್ತದೆ.

ಎಲೆಹಸರು ಉತ್ಪನ್ನ ಮಾಡುವ ಪೋಷಕ ದ್ರವ್ಯಗಳಲ್ಲಿ ಕೆಲವು ಭಾಗವು ಅನ್ನದಂತೆ ಚೈತನ್ಯ ದ್ರವಕ್ಕೆ ಉಪಯೋಗ ಬೀಳುತ್ತದೆ. ಉಳಿದ ದ್ರವ್ಯವೆಲ್ಲವೂ ಎಲೆಗಳಲ್ಲಿಯೂ, ಬೀಜಗಳಲ್ಲಿಯೂ, ಹಣ್ಣುಗಳಲ್ಲಿಯೂ ಸಂಗ್ರಹವಾಗುತ್ತದೆ. ಅವನ್ನೇ ನಾವು ಅನ್ನವಾಗಿ ಉಪಯೋಗಿಸುತ್ತೇವೆ. ಅವುಗಳಲ್ಲಿ ಫಲ ಹಾಗು ಬೀಜ (ಧಾನ್ಯ) ಗಳನ್ನು ನಾವು ಸೇವಿಸುತ್ತೇವೆ. ಎಲೆಗಳನ್ನು ಇತರ ಪ್ರಾಣಿಗಳು ತಿನ್ನುತ್ತವೆ. ಆ ಪ್ರಾಣಿಗಳ ಹಾಲು ಹಾಗು ಮಾಂಸವನ್ನು ಮನುಷ್ಯನು ತಿನ್ನುವನು. ಸೂರ್ಯಕಿರಣದ ವ್ಯಾಪಾರದಿಂದ ಬೀಜ, ಹಣ್ಣುಗಳಲ್ಲಿ ಪೋಷಕ ಶಕ್ತ್ಯುತ್ಪಾದಕ 'ವ್ಹಿಟಾಮಿನ' ಎಂಬ ದ್ರವ್ಯವು ಉತ್ಪನ್ನವಾಗುತ್ತದೆ. ಇದು ವಿಶೇಷವಾಗಿ ಪ್ರಾಣಿಗಳ ಮಾಂಸದಲ್ಲಿಯೂ ಹಾಲಿನಲ್ಲಿಯೂ ಹೆಚ್ಚಾಗಿ ಇರುತ್ತದೆ. ಈ ಎಲ್ಲ ಬಗೆಯ ವ್ಹಿಟಾಮಿನಗಳು ನಾವು ತಿನ್ನುವ ಪದಾರ್ಥಗಳಲ್ಲಿ ಇರಬೇಕು. ಬೇಯಿಸುವ ಮುಂದೆ ಇವು ನಾಶವಾಗದಂತೆ ಎಚ್ಚರ ತೆಗೆದುಕೊಳ್ಳಬೇಕು.

ಯಾವ ಆಹಾರವನ್ನು ತೆಗೆದುಕೊಳ್ಳಬೇಕು, ಯಾವುದನ್ನು ತೆಗೆದುಕೊಳ್ಳಬಾರದು ಎಂಬ ವಿಷಯಕ್ಕೆ ಇಲ್ಲಿ ಹೆಚ್ಚು ವಿವರಿಸುವ ಕಾರಣವಿಲ್ಲ. ಈ ಬಗ್ಗೆ ದೇಶಿಯ ಭಾಷೆಗಳಲ್ಲಿ ಅನೇಕ ಗ್ರಂಥಗಳ ಹೊರಟಿವೆ.

ರಲ್ಲಿಯ ಆಹಾರವಿಜ್ಞಾನವನ್ನೂ ಹೇಳುತ್ತವೆ. ನಮ್ಮ ಊಟದಲ್ಲಿರುವ, ಬೇಯಿಸಿದ, ತಾಳಿಸಿದ, ಒಗ್ಗರಣೆಯನ್ನು ಕೊಟ್ಟ ಪದಾರ್ಥಗಳ ಗುಣ ಧರ್ಮಗಳ ವಿಚಾರವಾಗುವದು ಅವಶ್ಯವಿದೆ. ಇವುಗಳಲ್ಲಿ ಶರೀರಕ್ಕೆ ಪೋಷ ಕವಾದ ದ್ರವ್ಯಗಳಾವು, ಅನವಶ್ಯಕಗಳಾವು? ಎಂಬದು ನಿರ್ಣಯವಾಗ ಬೇಕಾಗಿದೆ. ಅನ್ನದ ಪರಿಣಾಮವು ಶರೀರದಲ್ಲಿಯ ಘಟಕಗಳಮೇಲೆ, ಯಾವಬಗೆಯಿಂದ ಆಗುವದೆಂಬ ಬಗ್ಗೆ ಪಾಶ್ಚಾತ್ಯರು ವಿಚಾರಮಾಡಿ ದ್ದಾರೆ. ಬುದ್ಧಿ ಹಾಗು ಸ್ವಭಾವಗಳಿಗೆ ಯಾವ ಬಗೆಯ ಅನ್ನಬೇಕು ಎಂಬುದನ್ನು ಪಾಶ್ಚಾತ್ಯರೂ ಮಾಡಿದಂತೆ ತೋರಲಿಲ್ಲ. ಅದೂ ಶೋಧ ವಾಗಬೇಕಾಗಿದೆ. ಅಂತೂ ನಮ್ಮಲ್ಲಿ ಶಾಸ್ತ್ರೀಯ ದೃಷ್ಟಿಯಿಂದ ಎಲ್ಲವೂ ವಿಚಾರವಾಗುವ ಅವಶ್ಯವಿದೆ. ಹೀಗೆ ಜೀವಶಾಸ್ತ್ರವು ಜೀವನದ ಎಲ್ಲ ಕ್ಷೇತ್ರ ಗಳನ್ನು ವ್ಯಾಪಿಸಿದ್ದು, ಮಾನವನ ಪ್ರಗತಿಗೆ ತಳಹದಿಯಾಗಿದೆ.

**ಜೀವಶಾಸ್ತ್ರದ ಉಪಯೋಗ**

ಮನುಷ್ಯನು ಜೀವವಿದ್ದಾನೆ; ಜೀವದ ಜೀವನ ಬಗ್ಗೆ ಶಾಸ್ತ್ರವಿದ್ದು ಅದರಲ್ಲಿ ಉಪಯುಕ್ತತೆಯ ಸಾರವಿದೆ. ವೈದ್ಯ, ಆರೋಗ್ಯಶಾಸ್ತ್ರಗಳು ಮುಖ್ಯವಾಗಿ ಈ ಜೀವನಶಾಸ್ತ್ರದ ಮೇಲೆ ಅವಲಂಬಿಸಿವೆ. ಶರೀರರಚನೆ, ಶರೀರ ವ್ಯಾಪಾರಗಳು ವೈದ್ಯಕದಲ್ಲಿ ಬಂದರೂ ಅವು ಜೀವಶಾಸ್ತ್ರದ ಅಂಶವೇ ಸರಿ. ವನಸ್ಪತಿ ಪ್ರಗತಿಯಿಂದ ಒಕ್ಕಲತನದಲ್ಲಿ ಅದೆಷ್ಟೋ ಸುಧಾ ರಣೆಗಳಾಗಿವೆ. ಸಾಮಾಜಿಕ ಶಾಸ್ತ್ರದಲ್ಲಿಯೂ ಜೀವಶಾಸ್ತ್ರದ ಜ್ಞಾನವು ಅತ್ಯಂತ ಉಪಯೋಗವಿದೆ. ಸುಪ್ರಜಾಜನನಶಾಸ್ತ್ರವು ಜನನಶಾಸ್ತ್ರದ ಜ್ಞಾನದ ಮೇಲೆಯೇ ಅವಲಂಬಿಸಿದೆ. ಜೀವಶಾಸ್ತ್ರದಷ್ಟು ಮನೋ ರಂಜಕವೂ, ಅದ್ಭುತವೂ ಆದ ಶಾಸ್ತ್ರವು ಮತ್ತೊಂದಿರುವದಿಲ್ಲ. ಇದರ ಅಭ್ಯಾಸವು ಉಪಯುಕ್ತವಿರುವದಲ್ಲದೆ, ಅದನ್ನು ಅಭ್ಯಸಿಸುವದು ಪ್ರತಿ ಯೊಬ್ಬ ಮಾನವನ ಆದ್ಯಕರ್ತವ್ಯವಾಗಿದೆ.

---

# ಹತ್ತನೆಯ ಮೆಟ್ಟಿಲು

## ಶಾಸ್ತ್ರಗಳ ರೂಪರೇಷೆ, ಮಾನವ ವಿಜ್ಞಾನ

### ೧. ವೈದ್ಯಕಶಾಸ್ತ್ರ

ಮನುಷ್ಯನೂ ಒಂದು ಜೀವಿಯಾದ್ದರಿಂದ ಜೀವಶಾಸ್ತ್ರದ ಪ್ರಾಂತ ದಿಂದ ನಾವು ಮಾನವಶಾಸ್ತ್ರದ ಪ್ರಾಂತದಲ್ಲಿ ಸಹಜವಾಗಿಯೆ ಪ್ರವೇಶಿ ಸುವೆವು. ಜೀವಶಾಸ್ತ್ರ ಮತ್ತು ಮಾನವನ ಶಾಸ್ತ್ರಗಳ ಸಂಬಂಧವನ್ನು ಹೊಂದಿಸುವ ಶರೀರಶಾಸ್ತ್ರ,ರೋಗವಿಜ್ಞಾನ ಮತ್ತುಉಪಚಾರಶಾಸ್ತ್ರಗಳ ಅಭ್ಯಾಸವು ಇಂದು ಎಲ್ಲ ವೈದ್ಯಕೀಯ ವಿದ್ಯಾಲಯುಗಳಲ್ಲಿ ಸಾರ್ವತ್ರಿಕ ವಾಗಿ ಸಾಗಿದೆ. ರೋಗನಿವಾರಣೆಯ ಪ್ರಶ್ನೆಯೂ ಮಹತ್ವದ್ದಿದೆ. ಈ ಪ್ರಶ್ನೆಯನ್ನು ಬಿಡಿಸಲು ಅವಶ್ಯವಾದ ಎಲ್ಲ ಶಾಸ್ತ್ರಗಳ ಅಭ್ಯಾಸವು ದೊಡ್ಡ ಪ್ರಮಾಣದಿಂದ ನಡೆಯಬೇಕು. ಅಂಥ ಈ ಅಭ್ಯಾಸವು ನಡೆಯ ಬೇಕಾದಷ್ಟು ಸ್ವತಂತ್ರ ಬುದ್ಧಿಯಿಂದ ನಡೆದಿರುವದಿಲ್ಲ. ಅದರಂತೆ ಎಲ್ಲ ಶಾಸ್ತ್ರಗಳ ಹಣೆಯುಬರಹವಾಗಿದೆ. ಇನ್ನೊಂದು ತೊಡಕೆಂದರೆ ಆಯುರ್ವೇ ದಕ್ಕೆ ಡಾಕ್ಟರರಿಂದಾಗುವ ಉಪೇಕ್ಷೆಯೆಂದು ಹೇಳಬೇಕಾಗಿದೆ. ಆದರೆ, ಆಧುನಿಕ ರೀತಿಯಲ್ಲಿ ಶಿಕ್ಷಣಪಡೆದ ವೈದ್ಯಕೀಯ ತಜ್ಞರು ನಮ್ಮ ಆಯು ರ್ವೇದವನ್ನು ಪರಿಶ್ರಮಬಟ್ಟು ಅಭ್ಯಸಿಸದಿರುವುದು ವಿಷಾದಕರ ಸಂಗ ತಿಯು. ಆರ್ಯವೈದ್ಯಕದಲ್ಲಿರಬಹುದಾದ ಅ ಶಾಸ್ತ್ರೀಯ ವಿಭಾಗ ಗಳನ್ನು ತೆಗೆದುಹಾಕಿ, ಅದನ್ನು ಸಂಪೂರ್ಣವಾಗಿ ಶಾಸ್ತ್ರೀಯ ತಳಹದಿಯ ಮೇಲೆ ಪುನರ್ಘಟನೆ ಮಾಡಬೇಕು. ಅದರಲ್ಲಿ ಕಾಣಬರುವ ಕುಂದು ಕೊರತೆಗಳನ್ನು ಪಾಶ್ಚಿಮಾತ್ಯ ವೈದ್ಯಕದಿಂದ ತುಂಬಿಕೊಂಡು, ಎರಡೂ ವೈದ್ಯಶಾಸ್ತ್ರಗಳನ್ನು ಪರಿಪೋಷಕವಾಗುವಂತೆ ಮಾಡಬೇಕು. ಅಂದರೆ

ಈ ಸಂಯುಕ್ತ ವೈದ್ಯಕವನ್ನು ಪ್ರತಿಯೊಬ್ಬ ಡಾಕ್ಟರನೂ ವೈದ್ಯನೂ ಪ್ರಮಾಣವೆಂದು ಭಾವಿಸಿ ಉಪಯೋಗಿಸಬೇಕು. ಯೋಗ್ಯ ಸಂಘಟನೆ ಯಾದಲ್ಲಿ ಈ ಮಾತು ಅಶಕ್ಯವಾಗಲಾರದು. ಭಾರತವು ಎಷ್ಟುದಿನ ಪಾಶ್ಚಿಮಾತ್ಯರ ಔಷಧಿಗಳನ್ನುಪಯೋಗಿಸುತ್ತ, ಅವರು ಹಾಕಿಕೊಟ್ಟ ಪದ್ಧತಿಯನ್ನು ಕುರುಡರಂತೆ ಅನುಸರಿಸುತ್ತ ಕೂಡಬೇಕು ?

## ಮಾನಸಶಾಸ್ತ್ರ

೧

ಶರೀರಶಾಸ್ತ್ರವನ್ನು ಬಿಟ್ಟು ಮಾನಸಶಾಸ್ತ್ರದತ್ತ ಹೊರಳಿದಾಗಲೂ ಈ ಪರಾವಲಂಬನ ಪ್ರವೃತ್ತಿಯೇ ಕಂಡುಬರುವದು. ತರ್ಕಶಾಸ್ತ್ರ, ಮಾನಸಶಾಸ್ತ್ರಗಳೇ ಮುಂತಾದ ಶಾಸ್ತ್ರಗಳ ಅಭ್ಯಾಸವು ನಮ್ಮ ದೇಶದ ಪ್ರತಿಯೊಂದು ವಿದ್ಯಾಲಯದಲ್ಲಿಯೂ ನಡೆಯುತ್ತಿತ್ತು. ಹೀಗಿದ್ದರೂ, ಈ ಶಾಸ್ತ್ರಗಳಲ್ಲಿ ಹೊಸಶೋಧನೆ ಮಾಡಬಲ್ಲ, ಹೊಸವಿಚಾರಗಳನ್ನು ಹೊರಹಾಕಬಲ್ಲ ವಿದ್ವಾಂಸನೊಬ್ಬನಾದರೂ ಆಗಿ ಹೋದನೆಂಬ ಮಾತು ಕೇಳಿಬಂದಿಲ್ಲ. ನಿಜವಾಗಿಯೂ ಈ ಶಾಸ್ತ್ರಗಳು ಮನೋವೇಧಕ ವಾಗಿಯೂ, ಮಹತ್ವವುಳ್ಳವುಗಳಾಗಿಯೂ ಇರುವವು. ಸುಸಂಸ್ಕೃತ ಜನಾಂಗದ ಜೀವಾಳದ ಶಾಸ್ತ್ರವಾದ ಮಾನಸಶಾಸ್ತ್ರವಂತೂ ದಿನ ದಿನಕ್ಕೂ ಬೆಳೆಯುತ್ತಲಿದೆ. ಹೊಸ ಹೊಸ ಪ್ರಯೋಗಗಳನ್ನು ಮಾಡಿ, ಮನಸ್ಸಿನ ಬೇರೆ ಬೇರೆ ವ್ಯಾಪಾರಗಳ ಮೇಲೆ ಹೆಚ್ಚಾಗಿ ಬೆಳಕು ಕೆಡಹುವ ಕಾರ್ಯವು ಒಂದೇಸವನೆ ಸಾಗಿದೆ. ಈ ಬೆಳವಣಿಗೆಯ ಕಾರ್ಯದಲ್ಲಿ ಭಾರತೀಯರು ತಿಲಮಾತ್ರವೂ ಭಾಗವಹಿಸದಿರುವುದಕ್ಕೆ, ಅವರ ಆಲಸ್ಯ ಮತ್ತು ಕ್ರಿಯಾಶಕ್ತಿಶೂನ್ಯತೆಗಳೇ ಕಾರಣವಲ್ಲದೆ ಬೇರೆನಿದೆ?

ಮಾನಸಶಾಸ್ತ್ರದ ಅಭ್ಯಾಸವು ನಾನಾಬಗೆಯಾಗಿ ನಡೆದುದರಿಂದ, ಆ ಶಾಸ್ತ್ರವೃಕ್ಷಕ್ಕೆ ಹೊಸ ಶಾಖೆಗಳು ಒಡೆಯುತ್ತಲಿವೆ. ಹಿಂದಕ್ಕೆ ಈ ಮನೋವ್ಯಾಪಾರದ ಅಭ್ಯಾಸವು ತತ್ವಜ್ಞಾನದ ಒಂದು ಭಾಗವೆಂದು ಎಣಿಸುತ್ತಿದ್ದರು. ಮನೋವ್ಯಾಪಾರಗಳ ಅಭ್ಯಾಸಮಾಡುವ ಸ್ವತಂತ್ರ ರೀತಿಯು ಪ್ರವೃತ್ತಿಯಾದದ್ದು ಆ ಮೇಲೆ. 'ಮನಸ್ಸು' ಎಂದರೇನು, ಮನ

ಸ್ಸಿನ ಅಂಗಗಳಾವು, ಈ ಅಂಗಗಳ ವಿಶಿಷ್ಟ ಕಾರ್ಯಗಳೇನು ಮುಂತಾದ ಮಾತುಗಳ ಪರಿಶೀಲನೆಯೇ ಮಾನಸಶಾಸ್ತ್ರದ ಮುಖ್ಯ ಕಾರ್ಯವಾಯಿತು. ಅಂದರೆ ಈ ಕಾರ್ಯಕ್ಕಾಗಿ ಮನೋವ್ಯಾಪಾರಗಳನ್ನು ಪರಿಶೀಲಿಸಿ, ಅದರ ಪರಿಣಾಮದ ಮೇಲೆ ಮನಸ್ಸಿನ ಸ್ವಭಾವಧರ್ಮದ ವಿಷಯಕ್ಕೆ ಕಟ್ಟುಗಳನ್ನು ಮಾಡುವ ರೀತಿಯೇ ಯೋಗ್ಯವೂ ಉಪಯುಕ್ತವೂ ಆಗಿತ್ತು. ಮನೋವ್ಯಾಪಾರವು ಬಾಹ್ಯಸೃಷ್ಟಿಯ ವ್ಯಾಪಾರದಂತೆ ಇಂದ್ರಿಯ ಗೋಚರವಲ್ಲ. ಅಂದಮೇಲೆ ಅದನ್ನವಲೋಕಿಸುವದೆಂದರೆ ಅಂತರ್ನಿರೀಕ್ಷಣೆಯ ಪದ್ಧತಿಯನ್ನೇ ಅನುಸರಿಸಬೇಕಾಗುವದು. ಅಂದರೆ, ನಮ್ಮ ಮನಸ್ಸಿನಲ್ಲಿ ನಡೆಯುವ ಘಟನೆಗಳನ್ನು ಕುರಿತು ನಾವೇ ವಿಚಾರಮಾಡಿ ನಿರ್ಧರಿಸತಕ್ಕದ್ದು. ಈ ರೀತಿಯಲ್ಲಿ ಅಂತರ್ನಿರೀಕ್ಷಣೆಯಿಂದ ಕಲೆಹಾಕಿದ ಸಾಮಗ್ರಿಯೇ ಈ ಮಾನಸಶಾಸ್ತ್ರಾಭ್ಯಾಸದ ವಸ್ತುವು. ಈ ಒಳನೋಟವು ಒಂದೇ ವ್ಯಕ್ತಿಯದಿರಬೇಕೆಂದಿಲ್ಲ. ಬೇರೆಯವರೂ ಕೂಡ ಇದೇ ರೀತಿಯಲ್ಲಿ ತಮ್ಮ ತಮ್ಮ ಅಂತರ್ನಿರೀಕ್ಷಣೆಯಿಂದ ಕಲೆಹಾಕಿದ ಸಂಗತಿಗಳೂ ಸ್ವಂತದ ಅಂತರ್ನಿರೀಕ್ಷಣೆಯಂತೆ ಉಪಯೋಗವಾಗುವವು. ಆದ್ದರಿಂದ 'ಒಳನೋಟವೇ' ಈ ಶಾಸ್ತ್ರದಲ್ಲಿಯ ವಿಷಯ ಸಂಗ್ರಹದ ಮುಖ್ಯ ಸಾಧನವೆನ್ನಲು ಯಾವ ಆತಂಕವೂ ಇಲ್ಲ.

ಆದರೆ ತೀರ ಇತ್ತಿತ್ತಲಾಗಿ ಶಾಸ್ತ್ರವೇತ್ತರ ವ್ಯವಸಾಯದ ದಿಶೆಯು ಬಹಳ ಅಂಶದಲ್ಲಿ ಬದಲಾಗಿದ್ದು ''ಪ್ರಯೋಗ ಪದ್ಧತಿಯ ಮಹತ್ವವು ಬಹಳೇ ಬೆಳೆದು ಬಂದಿದೆ. ಗಣಿತಶಾಸ್ತ್ರದಷ್ಟು ಸೂಕ್ಷ್ಮನಿರೀಕ್ಷಣ ಪದ್ಧತಿಯು ಈ ಶಾಸ್ತ್ರದ ವಿವೇಚನೆಯಲ್ಲಿಯೂ ಬರತೊಡಗಿದೆ. ಈ ಪ್ರಯೋಗಗಳನ್ನು ಬೇರೆ ಬೇರೆ ಕಾರಣಗಳ ಮೂಲಕ, ಭಿನ್ನ ಭಿನ್ನ ಪರಿಸ್ಥಿತಿಯಲ್ಲಿರುವ ವ್ಯಕ್ತಿಗಳ ಮೇಲೆ ಮಾಡುವದರಲ್ಲಿ ಬರುವದು; ಮತ್ತು ಈ ಬೇರೆ ಬೇರೆ ಪ್ರಯೋಗಕ್ಷೇತ್ರಕ್ಕೆ ಅನುಸರಿಸಿ ಭಿನ್ನ ಭಿನ್ನ ಶಾಖೆಗಳೂ ಶಾಸ್ತ್ರದಲ್ಲುಂಟಾಗಿವೆ. ಉದಾಹರಣೆಗಾಗಿ, ಚಿಕ್ಕ ಮಕ್ಕಳ ಮನಸ್ಸನ್ನವಲೋಕಿಸಿ ಅವರ ಮೇಲೆ 'ಪ್ರಯೋಗಮಾಡಿ' ಯಾವ ಶಾಖೆಯು ಹುಟ್ಟಿತೊ ಅದಕ್ಕೆ 'ಶಿಶುಮಾನಸಶಾಸ್ತ್ರ' ಎಂದು ಹೆಸರುಂಟಾಯಿತು.

ವಿದ್ಯಾರ್ಥಿಗಳ ಮನಸ್ಸಿನ ಸ್ಥಿತಿಯ ಪರಿಶೀಲನೆ ಮಾಡಿ, ಅವರಿಗೆ ಸುಲಭ ವಾಗಿಯೂ ಲಾಭದಾಯಕವಾಗಿಯೂ ಶಿಕ್ಷಣವನ್ನು ಹೇಗೆ ಕೊಡಲು ಬರಬಹುದೆಂಬುದನ್ನು ವಿವೇಚಿಸುವ ಶಿಕ್ಷಣಮಾನಸಶಾಸ್ತ್ರ ಎಂಬ ಹೆಸರಿನ ಸ್ವತಂತ್ರ ಶಾಖೆಯು ನಿರ್ಮಾಣವಾಗಿದೆ. ಕಾರಖಾನೆಯಲ್ಲಿ ಕೆಲಸ ಮಾಡುವ ಕೂಲಿಕಾರ ವ್ಯವಸ್ಥಾಪಕ, ಚಾಲಕ ಮೊದಲಾದವರ ಘಟಕಗಳ ಮನಸ್ಥಿತಿಯನ್ನು ವಿಚಾರಿಸಿ ಅವರಿಂದ ಹೆಚ್ಚು ಒಳ್ಳೇ ಕೆಲಸ ಹೇಗೆ ಮಾಡಿಸಿಕೊಳ್ಳಬೇಕೆಂಬ ವಿಚಾರಮಾಡುವ ಔದ್ಯೋಗಿಕ ಮಾನಸ ಶಾಸ್ತ್ರ"ವು ಇದೀಗ ಉದಯವಾಗಿದೆ. ಒಬ್ಬರೊಬ್ಬರ ಸಹವಾಸದಲ್ಲಿ ದ್ದಾಗ ಮಾನವರ ಮನಸ್ಥಿತಿಯ ವಿಚಾರವಾಗಿ ವಿವೇಚನೆಮಾಡುವ "ಸಮಾಜಮಾನಸಶಾಸ್ತ್ರ" ಇದೀಗ ಮುಂದೆ ಬರಬೇಕೆನ್ನುತಿದೆ.

ಆದರೆ ಪ್ರಯೋಗ ಪದ್ಧತಿಯಿಂದ "ವಿಕೃತಮಾನಸಶಾಸ್ತ್ರ" ವೆಂಬ ಶಾಖೆಯ ಬೆಳವಣಿಗೆಯು ಇತಿತ್ತಲಾಗಹತ್ತಿದೆ. ಶುದ್ಧಿಯ ಮೇಲಿದ್ದ ಒಬ್ಬ ಜಾಣ ಮನುಷ್ಯನ ಎಚ್ಚರಿದ್ದಾಗಿನ ಮನಸ್ಥಿತಿಯು ಸಾಧಾರಣ ಮನಸ್ಥಿತಿಯು. ಇದರ ಹೊರ್ತಾಗಿ ಉಳಿದ ಎಲ್ಲ ತರಹದ ಮನಸ್ಥಿತಿಗಳು ವಿಕೃತವಾಗುತ್ತವೆ. ಉದಾಹರಣೆಗಾಗಿ ಒಳ್ಳೇ ಮನು ಷ್ಯನ ನಿದ್ರೆಯೊಳಗಿನ ಅಥವಾ ಕನಸ್ಸಿನೊಳಗಿನ ಮನಸ್ಥಿತಿ, ಒಳ್ಳೇ ಮನು ಷ್ಯನು ಮಾದಕಪೇಯಗಳನ್ನು ಕುಡಿದು ಮದವೇರಿದಾಗ ಇರುವ ಮನ ಸ್ಥಿತಿಯು ಮುಂತಾದವು ವಿಕೃತಮನಸ್ಥಿತಿಗಳು. ಅಲ್ಲದೆ ಯಾವದೊಂದು ವಿಷಯವನ್ನೇ ಮನಸ್ಸಿಗೆ ಹಚ್ಚಿಕೊಂಡವರು, ಹುಚ್ಚು ಹಿಡಿದವರು, ಸಂಶಯ ಸ್ವಭಾವದವರು, ಕೊಲೆಯನ್ನು ಮಾಡುವವರು ಮುಂತಾದ ಪ್ರವೃತ್ತಿಯುಳ್ಳವರ ಮನಸ್ಥಿತಿಯೂ ಕೂಡ ವಿಕೃತಮನಸ್ಥಿತಿಯೆಂಬು ದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಇದರ ಹೊರ್ತು, ಉತ್ಕೃತ ಮನ ಸ್ಥಿತಿಯ ಮೂರನೆಯ ಪ್ರಕಾರವೆಂದರೆ, ಸಾಕ್ಷಾತ್ಕಾರ ಸಾಧಕರಾದ ಸಾಧುಪುರುಷರದು; ಮತ್ತು ದೇವ-ದೆವ್ವಗಳು, ಭೂತ-ಪಿಶಾಚಗಳು ಮೈಯಲ್ಲಿ ಬರುವಂಥ ಹೆಣ್ಣುಮಕ್ಕಳದು. ಈ ಪ್ರಕಾರದ ಎಲ್ಲ ವ್ಯಕ್ತಿ ಗಳ ಮನಸ್ಥಿತಿಯ ಚಿಕಿತ್ಸೆಯನ್ನು ಮಾಡಿ ಅವರ ವಿಕೃತತೆಯ ನಿರೀಕ್ಷಣೆ

ಹಾಗೂ ಸ್ಪಷ್ಟೀಕರಣಗಳನ್ನು ಮಾಡುವ ಕಾರ್ಯವು ಈ ಶಾಸ್ತ್ರ ಶಾಖೆಯದಿರುತ್ತದೆ.

ವಿಕೃತಪೂರ್ಣಮನಸ್ಥಿತಿಯ ಅವಲೋಕನೆಯಿಂದ ಅವಿಕೃತ ಅಥವಾ 'ಸಾಧಾರಣ' ಮನಸ್ಸಿನ ವ್ಯಾಪಾರಗಳ ವಿಷಯವಾಗಿ ಜ್ಞಾನ ವುಂಟಾಗಲು ಅನೇಕ ವೇಳೆ ಸಹಾಯವಾಗುತ್ತದೆ. ಈ ದೃಷ್ಟಿಯಿಂದಲೂ ವಿಕೃತಮಾನಸಶಾಸ್ತ್ರವು ಮಹತ್ವದ್ದಿದೆ. ಮನಸ್ಸಿನ ತೂಕ ತಪ್ಪಿದಾಗಲೆ ಮನುಷ್ಯನಿಗೆ ಹುಚ್ಚು ಹಿಡಿಯುವದು. ಆದುದರಿಂದ ತೂಕತಪ್ಪಿದ ಮನಸ್ಸಿನ ಪರಿಸ್ಥಿತಿಯ ಪರೀಕ್ಷಣದಿಂದ, ಮನಸ್ಸಿನ ಸಮತೋಲ ಪರಿಸ್ಥಿತಿ ಹೇಗಿರುವದೆಂಬುದರ ಅರಿವಾಗುತ್ತದೆ.

ಪ್ರಯೋಗ ಪದ್ಧತಿಯ ಮೂಲಕ, ವಿಶಿಷ್ಟ ಕ್ಷೇತ್ರಗಳನ್ನು ವ್ಯಾಪಿಸುವ ಮಾನಸಶಾಸ್ತ್ರದ ಅನೇಕ ಶಾಖೆಗಳು ಹೇಗೆ ಉದ್ಭವಿಸಿದವೆಂಬುದನ್ನು ಅವಲೋಕಿಸಿದ್ದಾಯಿತು. ಆದರೆ ಇದಕ್ಕೂ ಮುಂದರಿದು, ಮಾನಸಶಾಸ್ತ್ರದಲ್ಲಿಯೂ ಕೂಡ ಪ್ರಯೋಗಪದ್ಧತಿಯನ್ನವಲಂಬಿಸುವ ಶಾಸ್ತ್ರವೇತ್ತರು ಇತ್ತೀಚಿಗೆ ಹೊರಟಿದ್ದಾರೆ. ಈ ಶಾಸ್ತ್ರಜ್ಞರು ಮನಸ್ಸಿನ ಮೇಲೆ ಹೇಗೆ ಪ್ರಯೋಗಗಳನ್ನು ಮಾಡುವರು? ಮನಸ್ಸನ್ನು ಕಾಜಿನ ಕೊಳವೆಯಲ್ಲಾಗಲಿ ಇಲ್ಲವೆ ಸೂಕ್ಷ್ಮದರ್ಶಕ ಯಂತ್ರದ ಕೆಳಗಿಟ್ಟಾಗಲಿ ಪರೀಕ್ಷಿಸಲಾಗುವದಿಲ್ಲ. ಅಂದಮೇಲೆ ಮನಸ್ಸಿನ ಮೇಲೆ ಪ್ರಯೋಗ ಮಾಡುವದರ ಅರ್ಥವಿಷ್ಟೆ-ವಿಶಿಷ್ಟಪ್ರೇರಕರ ವಿಶಿಷ್ಟಸ್ಥಿತಿಯಲ್ಲಿರುವ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿ, ಆ ಮೂಲಕ ಉದ್ಭವಿಸುವ ಯಾವದೇ ಮಾರ್ಗದಿಂದಾಗಲಿ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವ ಬಾಹ್ಯಸೃಷ್ಟಿಯಲ್ಲಿಯ ವಸ್ತು, ಅಥವಾ ವ್ಯಾಪಾರವು, 'ಪ್ರೇರಕ' ವೆನಿಸುವದು. (ಅನೇಕಸಲ ಈ ಪ್ರೇರಣೆ, ಬಾಹ್ಯ ಸೃಷ್ಟಿಯಲ್ಲಿ ಸಿಗದೆ, ಒಳಗಿನಿಂದ ಅಂದರೆ ಸ್ವಂತಮನಸ್ಸಿನ ಮೂಲಕ ಸಿಗುತ್ತಿರುತ್ತದೆ.) ಈ ಪ್ರಕಾರದ ಸಂದೇಶವು ಮಿದುಳಿನವರೆಗೆ ಮುಟ್ಟಿದ ಮೇಲೆ ಮನುಷ್ಯನಿಂದ ಘಟಿಸುವ ಪ್ರತಿಕ್ರಿಯಾತ್ಮಕ ವ್ಯಾಪಾರವೇ ಈ ಪ್ರಯೋಗ ಮಾಡುವ ಶಾಸ್ತ್ರವೇತ್ತರ ಅಭ್ಯಾಸದ ಮುಖ್ಯ ವಿಷಯ.

ಈ ಪ್ರತಿಕ್ರಿಯೆಗಳ ಮೇಲಿಂದಲೇ ಅವರು ಭಿನ್ನ ಭಿನ್ನ ಮನೋ ವ್ಯಾಪಾರಗಳನ್ನು ತರ್ಕಿಸುತ್ತಾರೆ. ಈ ರೀತಿಯಾಗಿ ಹೊಸ ಹೊಸ ಕಲ್ಪನೆಗಳೂ ಪದ್ಧತಿಗಳೂ ಒಂದೇಸವನೆ ಬೆಳಕಿಗೆ ಬರುತ್ತಲಿದ್ದು, ಈ ಶಾಸ್ತ್ರದ ವ್ಯಾಪಕತೆ ಕ್ಷಣಕ್ಷಣಕ್ಕೂ ಬೆಳೆಯುತ್ತಿದೆ. ಸ್ವತಂತ್ರ ವಿಚಾರಕ್ಕೂ, ಪ್ರಯೋಗಕ್ಕೂ ಅವಕಾಶವನ್ನೊದಗಿಸಿಕೊಡುವ, ಒಳ್ಳೇ ಮನೋರಂಜಕ ಮತ್ತು ಜೀವಾಳದ ಶಾಸ್ತ್ರವು ಇದಾಗಿದ್ದರೂ, ನಮ್ಮ ಪಂಡಿತರು ಸಾಕಷ್ಟು ಈ ವಿಷಯದ ಒಳ್ಳೆಯ ಪರಾಮರ್ಶೆ ಯನ್ನು ಮಾಡಿಲ್ಲವೆಂಬುದು ವಿಷಾದಕರ ಸಂಗತಿ. ಸ್ವತಂತ್ರಪರೀಕ್ಷೆ ಮತ್ತು ವಿಚಾರಗಳನ್ನು ಮಾಡಿ, ಹೊಸ ಶೋಧನೆಮಾಡುವದಂತೂ ದೂರ ವುಳಿದು ಎರಡನೆಯವರು ಮಾಡಿದ ವಿಚಾರಗಳನ್ನು ಶೋಧನೆಗಳನ್ನೂ ಒಟ್ಟುಗೂಡಿಸಿ, ತಮ್ಮ ಭಾಷೆಯಲ್ಲಿ ಸರಳ ಗ್ರಂಥನಿರ್ಮಾಣಮಾಡುವ ಕಾರ್ಯವೂ ಕೂಡ ಯಾರಿಂದಲೂ ಆಗಿಲ್ಲವೆಂಬ ಮಾತು ನಮ್ಮ ವಿದ್ವಾಂಸರಿಗೆ ಶೋಭಿಸುವದಿಲ್ಲ. ಈ ಕೊರತೆಯನ್ನು ದೂರ ಮಾಡಲು ಪ್ರಯತ್ನಿಸಬೇಕಾದುದು ಅತ್ಯವಶ್ಯ.

೨

ವಾದಗ್ರಸ್ತ ವಿಷಯಗಳನ್ನು ಬಿಟ್ಟುಕೊಟ್ಟು, ನಾವು ಮನೋ ವ್ಯಾಪಾರಗಳ ನಿರೀಕ್ಷಣೆಯನ್ನು ಸ್ವಲ್ಪಮಟ್ಟಿಗೆ ಮಾಡೋಣ. ಪ್ರೇರಕ ವಸ್ತುಗಳ ಪ್ರೇರಣೆಯಿಂದಾಗುವ ಮನಸ್ಸಿನ ಮೇಲಿನ ವ್ಯಾಪಾರಗಳು 'ಪ್ರಜ್ಞೆ' ಭಾವನೆ ಮತ್ತು 'ಇಚ್ಛಾಶಕ್ತಿ' ಹೀಗೆ ಮೂರು ವಿಧ. 'ಪ್ರಜ್ಞೆ'ಯವಿಭಾಗದಲ್ಲಿ, ಇಂದ್ರಿಯದಿಂದುಂಟಾಗುವ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ವಸ್ತುವಿನ ಜ್ಞಾನ, ಮತ್ತು ಈ ಜ್ಞಾನದ ಆಧಾರದ ಮೇಲೆ ಮಾಡಿದ ವಿಚಾರ, ತರ್ಕ, ನಿರ್ಣಯಗಳೆಲ್ಲ ಸೇರ್ಪಡೆ ಯಾಗುತ್ತವೆ. ಪ್ರೇರಕಗಳ ಸಂಬಂಧದಿಂದ ಮನುಷ್ಯನ ಮನಸ್ಸಿನಲ್ಲಿ ಉದ್ಭವಿಸುವ, ಸಿಟ್ಟು,ತಿರಸ್ಕಾರ,ಪ್ರೇಮ ಮತ್ತು ಅಭಿರುಚಿ ಮುಂತಾದ ವಿಕಾರಗಳು ಭಾವನೆಯ ಪ್ರಕಾರಕ್ಕೆ ಸೇರುತ್ತವೆ. ಶರೀರದಿಂದ ಯಾವ ದೊಂದು ಉದ್ದಿಷ್ಟ ಕಾರ್ಯವನ್ನು ಮಾಡಲು ಹಚ್ಚುವ ಮನಸ್ಸಿನ

ಶಕ್ತಿಯೆ ಇಚ್ಛಾಶಕ್ತಿ. ದಾರಿಯಲ್ಲಿ ಹೋಗುತ್ತಿರುವಾಗ ಯಾರಾದರೂ ಗುದ್ದಿದರೆ, ಸಹಜವಾಗಿಯೆ ನಮಗೆ ಸಂತಾಪುಂಟಾಗುವದು. ಅಂದರೆ ಬಾಹ್ಯಪ್ರೇರಣೆಯು ಮೂಲಕ ಮನಸ್ಸಿನಲ್ಲಿ 'ಸಂತಾಪ' ಭಾವನೆಯು ಹುಟ್ಟಿತು; ಆಮೇಲೆ ತಿರುಗಿ ಗುದ್ದನ್ನು ನಾನು ಕೊಡಬೇಕೆಂದು ನನ್ನ ಕೈ ಮುಂದೆ ಸರಿಸಿದೆನೆಂದರೆ ತೀವ್ರಭಾವನೆಯು ಮೂಲಕ ಇಚ್ಛಾ ಶಕ್ತಿಯು ಪ್ರಬಲವಾಗಿ ನನ್ನ ಕೈಗೆ ಪ್ರೇರಣೆ ಮಾಡಿತು. ಆದರೆ ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನಿಗೆ ಗುದ್ದುತ್ತಿರುವದನ್ನು ನಾನು ನೋಡಿದಾಗ ನನ್ನ ಮನಸ್ಸಿನಲ್ಲಿ ಕೇವಲ 'ಏನು ನಡೆದಿದೆ' ಎಂಬುದರ ಪರಿಜ್ಞಾನ ಮಾತ್ರ ಆಗುವದು. ಒಂದು ವೇಳೆ ಗುದ್ದುವವನ ಮೇಲೆ ಸ್ವಲ್ಪುಮಟ್ಟಿಗೆ ಸಿಟ್ಟು ಬರಬಹುದು. ಆದರೆ ಈ ಸಂದರ್ಭದಲ್ಲಿ ವಿಚಾರವೇ ಪ್ರಬಲವಾಗಿ ಮನಸ್ಸಿನಲ್ಲಿ "ಆ ಮನುಷ್ಯನು ಈ ಮನುಷ್ಯನಿಗೆ ಏನಾದರೂ ಅನ್ಯಾಯ ಮಾಡಿರಲೇಬೇಕು. ಆದುದರಿಂದಲೇ ಈ ಮನುಷ್ಯನು ಅವನನ್ನು ಗುದ್ದುತ್ತಿರುವನು. ಇಲ್ಲದಿದ್ದರೆ ಹಗಲಿನಲ್ಲಿಯೇ ತುಂಬಿದ ಬೀದಿಯಲ್ಲಿ ಒಬ್ಬನು ಇನ್ನೊಬ್ಬನೊಡನೆ ಗುದ್ದಾಡುವದಕ್ಕೆ ಈ ಆಂಗ್ಲರಾಜ್ಯದಾಡಳಿತದ ಕಾಲದಲ್ಲಿ ಹೇಗೆ ಸಾಹಸ ಮಾಡಿದನು? ಅಂದಮೇಲೆ ನಾವು ಈ ಜಗಳದ ನಡುವೆ ಕೈಹಾಕದೆ ಹೊರಟು ಹೋಗುವದು ಉತ್ತಮ ಪಕ್ಷ" ಎಂದು ನುಡಿಯಬಹುದು. ಅಂದರೆ ಇಲ್ಲಿ ಮೊದಲಿಗೆ ಕೆಲಮಟ್ಟಿಗೆ ಭಾವನೆಯು ಉತ್ಪನ್ನವಾಗಿದ್ದರೂ, ವಿಚಾರವೇ ಪ್ರಬಲವಾಗಿ ಭಾವನೆಯನ್ನು ಹೊಡೆದು ಹಾಕಿತು.

ಇಲ್ಲಿ ಒಂದು ಮಾತನ್ನು ಲಕ್ಷ್ಯದಲ್ಲಿಡುವದು ಅವಶ್ಯ. ಈ ಶಕ್ತಿಗಳೆಂದರೆ ಒಂದಕ್ಕೊಂದು ತೀರ ವಿರೋಧವಾಗಿ ವರ್ತಿಸುವ ಮನಸ್ಸಿನ ಭಾಗಗಳಲ್ಲ. ಆದರೆ ಇವು ಮೂರೂ ಒಂದಕ್ಕೊಂದು ಪರಿಪೋಷಕಗಳಾಗಿದ್ದುಕೊಂಡು ಮನೋವ್ಯಾಪಾರವನ್ನು ನಿಯಂತ್ರಿಸುತ್ತವೆ. ಕೆಲವು ಸಮಯ ಎಲ್ಲವೂ ಒಂದೇ ಕಡೆಗೆ ಸಮ್ಮಿಳಿತವಾಗಿರುವದೂ ಇಲ್ಲ. ವಿಶಿಷ್ಟ ಪ್ರಸಂಗದಲ್ಲಿ ಯಾವ ಕಾರಣದ ಪ್ರಭಾವ ಪ್ರಬಲವಾಗುತ್ತದೋ, ಆದರ ಮೇಲಿಂದ ಆ ವೇಳೆಯ ಮನಸ್ಥಿತಿಗೆ ಹೆಸರುಂಟಾಗುತ್ತದೆ

ಮೇಲಿನ ಉದಾಹರಣೆಯಲ್ಲಿ, ನಾನು ಗುದ್ದಿಸಿಕೊಂಡಾಗ ನನ್ನಲ್ಲಿ ವಿಚಾರಕ್ಕಿಂತಲೂ ಸಿಟ್ಟಿನ ಭಾವನೆಯೇ ಪ್ರಬಲವಾಗಿತ್ತು; ಆದರೆ ಎರಡನೆಯವನಿಗೆ ಗುದ್ದು ಬಿದ್ದದ್ದನ್ನು ನೋಡಿದಾಗ ಮಾತ್ರ, ಸಿಟ್ಟು ಕಡಿಮೆಯಾಗಿ, ಒಬ್ಬ ತತ್ವಜ್ಞನಂತೆ ವಿಚಾರಗಳು ನನ್ನ ಮನಸ್ಸಿನಲ್ಲಿ ಉಂಟಾದವು. ಅಂದಮೇಲೆ, 'ಮನಸ್ಸು' ಒಂದೇ ಇದೆ, ಮತ್ತು ಮೇಲೆ ಹೇಳಿದ ಮನೋವ್ಯಾಪಾರಗಳನ್ನು ಪರಸ್ಪರ ಪರಿಪೋಷಕವಾಗುವಂತೆ ಉಪಯೋಗಿಸಿಕೊಳ್ಳಲು ಬರುವದೆಂಬ ಮಾತನ್ನು ಲಕ್ಷ್ಯದಲ್ಲಿಡತಕ್ಕದ್ದು. ಒಬ್ಬ ಅಭ್ಯಾಸಿಗೆ ಕೂಡಲೇ ವಿಷಯ ಅವಗತವಾಗದಿದ್ದಲ್ಲಿ, ಆ ವಿಷಯದಲ್ಲಿ ಅಭಿರುಚಿಯನ್ನು ಹುಟ್ಟಿಸಲಾಗಿ, ಬಹು ಬೇಗನೆ ತಿಳಿಯಹತ್ತುವದು. ನನಗೆ ಭೂಗೋಲ ಮತ್ತು ಗಣಿತದ ವಿಷಯಗಳಲ್ಲಿ ಹೆಚ್ಚಿನ ಅಭಿರುಚಿಯುಂಟು. ಆದುದರಿಂದ, ಬೇರೆ ವಿದ್ಯಾರ್ಥಿಗಳಿಗೆ ಗಡಚಾಗಿ ತೋರುವ ವಿಷಯಗಳು ನನಗೆ ಸಹಜವಾಗಿ ತಿಳಿಯುವವಲ್ಲದೆ ಇವುಗಳಲ್ಲಿ ನನ್ನ ಪ್ರಗತಿಯು ವಿಶೇಷವಾಗುವದು. ಶಿಕ್ಷಕರು ಈ ಮಾತಿನ ಕಡೆಗೆ ಹೆಚ್ಚು ಲಕ್ಷ್ಯ ಕೊಡಬೇಕಾದುದು ಅತ್ಯವಶ್ಯ. ನಾವು ಯಾವ ವಿಷಯವನ್ನು ಕಲಿಸಬೇಕಾಗಿದೆಯೋ, ಆ ವಿಷಯದ ಬಗ್ಗೆ ವಿದ್ಯಾರ್ಥಿಗಳಲ್ಲಿ ಅಭಿರುಚಿಯನ್ನೂ ಆಕಾಂಕ್ಷೆಯನ್ನೂ ಉಂಟುಮಾಡಿದರೆ, ಅವರಿಗೆ ಅದು ಬೇಗನೆ ಹಿಡಿಯಬಹುದು.

ಭಾವನೆಯ ಬಲದಿಂದ ಪ್ರಚಂಡ ಇಚ್ಛಾಶಕ್ತಿಯು ಉಂಟಾಗುತ್ತದೆ. ಉತ್ಕೃಷ್ಟ ಬುದ್ಧಿಮತ್ತೆ, ಪ್ರಬಲವಾದ ಭಾವನೆ, ಇಚ್ಛಾಶಕ್ತಿ ಈ ಮೂರೂ ಗುಣಗಳು ಯಾವನಲ್ಲಿವೆಯೋ ಅವನೇ ಆದರ್ಶ ಪುರುಷನಾಗಬಲ್ಲನು. ಪ್ರೇರಕವಸ್ತುಗಳ ಸಂಬಂಧದಿಂದಾಗುವ ಮನೋವ್ಯಾಪಾರಗಳಲ್ಲದೆ ಬೇರೊಂದು ಅದ್ಭುತಶಕ್ತಿಯು ಮನದ ಮನೆಯಲ್ಲಿ ವಾಸಿಸುತ್ತಿರುತ್ತದೆ. ಆ ಶಕ್ತಿಯೆಂದರೆ ಸ್ಮರಣ ಶಕ್ತಿ. ಸ್ಮರಣವೆಂಬುದು ಸಂಯುಕ್ತ ಅಂದರೆ ಅನೇಕ ಕ್ರಿಯೆಗಳಿಂದ ಕೂಡಿದ ಒಂದು ವ್ಯಾಪಾರವಿರುತ್ತದೆ. ಇಂದ್ರಿಯಗಳ ಮುಖಾಂತರವಾಗಿ ಆಗುವ ಬಾಹ್ಯವಸ್ತುಗಳ ಸಂಸ್ಕಾರವು ಮೊದಲನೇ ಕ್ರಿಯೆ; ಈ ಸಂಸ್ಕಾರಗಳ 'ಧಾರಣಮಾಡುವದು' ಎಂದರೆ ಕೊನೆಯವರೆಗೂ ಕಾಯ್ದಿಡುವದು.

ನೆನಪಿನಲ್ಲಿಡುವದು ಎರಡನೇ ಕ್ರಿಯೆ; ಮತ್ತು ಪ್ರಸಂಗ ಬಂದಾಗ ಅದನ್ನು ಪುನಃ ಸ್ಥಾಪಿಸುವದು ಮೂರನೇ ಕ್ರಿಯೆಯು. ಈ ರೀತಿಯಾಗಿ ಪೂರ್ವ ಸಂಸ್ಕಾರಗಳನ್ನು ಕಾರಣಾಂತರಗಳಿಂದ ತಿರುಗಿ ತರುವದಕ್ಕೆ ನಾವು 'ನಮಗೆ ನೆನಪಾಯಿತು' ಎಂದೆನ್ನುತ್ತೇವೆ. ಈ ಸ್ಮರಣವ್ಯಾಪಾರದಲ್ಲಿ ಎಲ್ಲರಿಗೂ ನೆನಪಿನ ಶಕ್ತಿ ಸಮವಿರುವದಿಲ್ಲ. ನೆನಪಿನ ಶಕ್ತಿಯಿರುವಷ್ಟರ ಮೇಲಿಂದ ಅದರ ಒಳಿತು-ಕೆಡಕುಗಳನ್ನು ನಿರ್ಧರಿಸುತ್ತೇವೆ. ನೆನಪಿಡುವ ಶಕ್ತಿಯ ಬೆಳವಣಿಗೆಯು ನಮ್ಮ ಕೈಯಲ್ಲಿಲ್ಲದಿದ್ದರೂ ಈ ಶಕ್ತಿಗೆ ಎಲ್ಲ ಸಿಟ್ಟಿನಿಂದ ಸಹಾಯವಾಗುವಂತೆ ಮಾಡಿ ನೆನಪಾಗುವಂತೆ ಮಾಡು ವದು ಸಂಪೂರ್ಣ ನಮ್ಮ ಕೈಯ್ಯಲ್ಲಿದೆ. ಬಾಹ್ಯ ವಿಷಯಗಳ ಮೊದ ಲಿನ ಆಘಾತವು ಬಲವತ್ತರವಾಗಿರುವದಿಲ್ಲವಾದ್ದರಿಂದ ನೆನಪಿನಲ್ಲುಳಿ ಯುವದಿಲ್ಲವೆಂದು ಕಂಡುಬಂದಿದೆ. ಅಂದಮೇಲೆ ನಾವು ಆಳವಾಗಿ ಮತ್ತು ಒಳ್ಳೇ ಸೂಕ್ಷ್ಮವಾಗಿ ನಿರೀಕ್ಷಣೆಮಾಡಿದಲ್ಲಿ, ಈ ಆಘಾತವಾದ ವಿಷಯಗಳ ಚಿತ್ರ ನೆನಪಿನಿಂದ ಹಾರಿ ಹೋಗುವ ಹೆದರಿಕೆಯೇ ಉಳಿಯು ಲಾರದು. ಇದರ ಜೊತೆಗೆ, ಭಾವನಾತ್ಮಕದ ಜೊತೆಯಾದರೆ ಬಹಳೇ ಒಳ್ಳೆಯದು. ನಮ್ಮ ಪ್ರಿಯಜನರ ಮರಣಶಯ್ಯೆಯಲ್ಲಿಯ ಉದ್ಗಾರಗಳು ಅಥವಾ ಮುಖಚರ್ಯೆಗಳು ಇದ್ದಕ್ಕಿದ್ದಂತೆ ನಮ್ಮ ಮನಸ್ಸಿನ ಮೇಲೆ ಎಷ್ಟೋ ವರ್ಷಗಳೇಕೆ, ಇಡಿ ಆಯುಷ್ಯವೆಲ್ಲ ಮೂಡಿದಂತೆ ನಮ್ಮ ಲಕ್ಷ್ಯ ದಲ್ಲಿರುವ ಅನುಭವವು ಯಾರಿಗೆ ಇರುವದಿಲ್ಲ! ದಂಡಕಾರಣ್ಯದಲ್ಲಿ ಸೀತೆ ಯೊಡನೆ ಸುಖದಿಂದ ಕಾಲವನ್ನು ಕಳೆಯುತ್ತಿರುವ ಪ್ರಸಂಗವು ೧೨ ವರ್ಷ ಗಳ ಮೇಲೆಯೂ ಕೂಡ ಇದ್ದಕ್ಕಿದ್ದಂತೆ ರಾಮನಿಗೆ ಪುನಃ ಆ ಪ್ರದೇಶ ದಲ್ಲಿ ಬರುತ್ತಲೇ ಅದೆಲ್ಲವೂ ನೆನಪಾಗಿ ಮಾತಾಡುತ್ತಿರುವದನ್ನು ಭವ ಭೂತಿಯ ಉತ್ತರರಾಮಚರಿತದಲ್ಲಿ ವರ್ಣಿಸಿದ ಪ್ರಕಾರವೂ ಮಾನಸಶಾಸ್ತ್ರ ದೃಷ್ಟಿಯಿಂದ ತೀರ ಸರಿಯಾಗಿದೆ! ಉತ್ಕಟ ಭಾವನಾಯೋಗದಿಂದ ವನ ವಾಸದಲ್ಲಾದ ಅನುಭವದ ಸಂಸ್ಕಾರದಿಂದ ಅವು ಅಂತಃಕರಣದಲ್ಲಿ ವಜ್ರ ಲೇಪವಾಗಿರಲು ಸಾಕು. ಅದರಂತೆ ವಸ್ತುವಿನಲ್ಲಿಯ ಹೊಸತನದಿಂದಲೂ ಅಥವಾ ಎರಡನೆಯ ಯಾವುದೊಂದು ಅಸಾಧಾರಣ ಗುಣದಿಂದಲೂ ಅವು ಲಕ್ಷ್ಯದಲ್ಲಿ ಉಳಿಯಲು ನೆರವಾಗುತ್ತವೆ. ಆದ್ದರಿಂದ ಯಾವುದೊಂದು

ವಸ್ತುವನ್ನು ನೋಡಿದಾಗ ಅದರಲ್ಲಿ ಏನಾದರೂ ಹೊಸತನವೂ ಅದ್ಭುತತೆಯೂ ಇವೆಯೋ ಇಲ್ಲವೋ ಎಂಬುದನ್ನು ನೋಡುವ ದೃಷ್ಟಿಯಿದ್ದರೆ ಅದು ಹೆಚ್ಚು ಸುಲಭತೆಯಿಂದ ಲಕ್ಷ್ಯದಲ್ಲಿ ಉಳಿಯುವದು. ಸ್ಮರಣದ ವಿಷಯವಾಗಿ ಮತ್ತೊಂದು ಸಾಹಚರ್ಯದ ನಿಯಮವು ಬಹಳ ದೊಡ್ಡದಿದೆ. ಒಂದು ವೇಳೆ ಎರಡು ಸಂಗತಿಗಳು ಒಂದೇ ಕಾಲಕ್ಕೆ, ಒಂದೇ ಸ್ಥಳದಲ್ಲಿ, ಒಂದೇ ವಿಷಯವಾಗಿ ಅನುಭವಕ್ಕೆ ಬಂದಿದ್ದರೆ ಮತ್ತೆ ಅವುಗಳಲ್ಲಿ ಒಂದು ಮನಸ್ಸಿನಲ್ಲಿ ಉದ್ಭವವಾದರೆ, ಎರಡನೆಯದೂ ಉದ್ಭವಿಸುತ್ತದೆ. ಇಂದು ಸಾಯಂಕಾಲ ಸಭೆಯಿರುವದೆಂಬ ಮಾತು ತೀರ ಮರೆತಿದ್ದರೂ ವ್ಯಾಖ್ಯಾತ ಇಲ್ಲವೆ ಅಧ್ಯಕ್ಷರು ಬೀದಿಯಲ್ಲಿ ಕಣ್ಣಿಗೆ ಬಿದ್ದರೆಂದರೆ ಸಭೆಯ ನೆನಪು ಕೂಡಲೇ ನೆನಪಾಗುವದು. ನಾವು ಚಿಕ್ಕತನದಲ್ಲಿದ್ದ ಹಳ್ಳಿಗೆ ಮರಳಿ ಹೋದರೆ ನಮಗೆ ಅದೆಷ್ಟೋ ಸಣ್ಣ ದೊಡ್ಡ ಮಾತುಗಳು ನೆನಪಾಗುವವು. ಈ ಸಾಹಚರ್ಯ ನಿಯಮವನ್ನು ಕುಶಲತೆಯಿಂದ ಉಪಯೋಗ ಮಾಡಿಕೊಂಡರೆ ಸ್ಮರಣಶಕ್ತಿಯನ್ನು ಹೆಚ್ಚಿಸುವ ಅನೇಕ ಯುಕ್ತಿಗಳು ಬರತೊಡಗದೆ ಇರಲಾರವು.

೩

ಈ ವ್ಯಾಪೃತ ಅಥವಾ ಸಾವಧಾನ ಮನಸ್ಸಿನ ಹೊರತಾಗಿ ಸುಪ್ತಮನವೊಂದಿರುತ್ತದೆಂದು ಇತ್ತೀಚೆ ಶೋಧವಾಗಿದೆ. ಈ ಸುಪ್ತಮನಸ್ಸಿನ ಸೂಚನೆಯ ಮೇರೆಗೆ ಅನೇಕ ಮಾನಸಿಕ, ಶಾರೀರಿಕ ವ್ಯಾಧಿಗಳು ಗುಣಹೊಂದಬಲ್ಲವು. ಈ ಮನಸ್ಸಿನ ಪೃಥಕ್ಕರಣಾತ್ಮಕ ಜ್ಞಾನ ಮಾಡಿಕೊಳ್ಳುವ ರೀತಿಗೆ "ಮನೋವಿಶ್ಲೇಷಣ" ಎನ್ನುತ್ತಾರೆ. ಮನುಷ್ಯನ ಮನಸ್ಸಿನಲ್ಲಿ ಕೆಲವೊಂದು ಉತ್ಕಟವಾಸನೆಗಳುಂಟಾಗಿ ಸಾಮಾಜಿಕ ಬಂಧನದ ಮೂಲಕ ಆ ವಾಸನೆಯ ತೃಪ್ತಿಯಾಗದಿದ್ದರೆ ಆ ವಾಸನೆಯು ಕುಗ್ಗಿದಂತಾಗಿ ಸುಪ್ತಮನಸ್ಸಿನಲ್ಲಿ ಮನೆಮಾಡಿಕೊಳ್ಳುವದು. ಈ ಸುಪ್ತಮನವು ಯಾವುದನ್ನೂ ಮರೆಯದಿರುವದರಿಂದ ಅಲ್ಲಿ ಆ ವಾಸನೆಯು ಸೆಲೆಯಾಗಿ ನಿಂತು ಹೊತ್ತು ಬಂದರೆ ಮೇಲೇಳುವ ಪ್ರಯತ್ನಮಾಡುತ್ತಿರುತ್ತದೆ. ಮೇಲೆ ಬರಲು ಸುಲಭಮಾರ್ಗವಿರದ್ದರಿಂದ ಮನಸ್ಸಿನಲ್ಲಿಯೂ,

ಶರೀರದಲ್ಲಿಯೂ ಅನೇಕ ವಿಕೃತಿ ಉತ್ಪನ್ನವಾಗುತ್ತದೆ. ಇಂಥ ಸ್ಥಿತಿಯಲ್ಲಿ ಬಿಗಿಹಿಡಿದ ವಾಸನೆಯ ತೃಪ್ತಿಗೆ ಒಳ್ಳೇ ಹಾದಿಯನ್ನು ತೋರಿಸುವದು ಮಾನಸಶಾಸ್ತ್ರದ ಕರ್ತವ್ಯವು. ಫ್ರಾಯಿಡ', ಯುಂಗ ಮೊದಲಾದ ಜರ್ಮನ್ ಮತ್ತು ಆಸ್ಟ್ರಿಯನ್ನ ಶಾಸ್ತ್ರಜ್ಞರು ಈ ಮನೋವಿಶ್ಲೇಷಣ ಪದ್ಧತಿಯ ಉತ್ಪಾದಕರೂ, ಪುರಸ್ಕರ್ತರೂ ಆಗಿದ್ದಾರೆ. ಇದಕ್ಕೆ ಮನೋವಿಶ್ಲೇಷಣ ಸಂಪ್ರದಾಯವೆಂಬ ಹೆಸರು ಈಚೆಗೆ ಬಂದಿರುತ್ತದೆ.

ಪಾಶ್ಚಾತ್ಯ ಹಾಗೂ ಭಾರತೀಯ ಮಾನಸಶಾಸ್ತ್ರಗಳ ತುಲನಾತ್ಮಕ ಅಭ್ಯಾಸ ಮಾಡುವದೊಂದು ವಿಷಯವೇ ಇದೆ. ಅಂದರೆ ಅವರ ಮಾನಸ ಶಾಸ್ತ್ರಕ್ಕಿಂತಲೂ ನಮ್ಮ ಮಾನಸಶಾಸ್ತ್ರದಲ್ಲಿ ವಿಷಯವು ಸಯುಕ್ತಿಕ ಮತ್ತು ಯೋಗ್ಯವಾದ ರೀತಿಯಲ್ಲಿ ಮಂಡಿಸಿದ್ದು ಕಂಡುಬರುವದು. ಸಮತೋಲನ ದೃಷ್ಟಿಕೋನದಿಂದ ಪರೀಕ್ಷೆ ಮಾತ್ರ ಆಗಬೇಕು. ನಮ್ಮ ಶಾಸ್ತ್ರದಲ್ಲಿ ಅಂತಃಕರಣದ ನಾಲ್ಕು ಒಳಭೇದಗಳಿವೆ. ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತ ಇವುಗಳು ಕೂಡಿಯೇ ಅಂತಃಕರಣವಾಗಿರುತ್ತದೆ. ಸಂಶಯ, ನಿಶ್ಚಯ, ಅಭಿಮಾನ ಮತ್ತು ಸ್ಮರಣಗಳು ಅನುಕ್ರಮವಾಗಿ ಮೇಲಿನ ನಾಲ್ಕು ಭಾಗಗಳ ವಿಷಯಗಳಾಗಿವೆ. ತಜ್ಞರು ಆಧುನಿಕ ಮಾನಸಶಾಸ್ತ್ರದ ಸಿದ್ಧಾಂತಕ್ಕೂ ಈ ವರ್ಣನೆಗೂ ಒರೆಹಚ್ಚಿ ತುಲನೆಮಾಡಿ ನೋಡಬೇಕು.

ಮಾನಸಶಾಸ್ತ್ರದಲ್ಲಿಯ ವಿಷಯಗಳ ದಿಗ್ದರ್ಶನವನ್ನಷ್ಟೇ ಇಲ್ಲಿ ಮಾಡಿದೆ; ಆದರೂ ಅದರ ಮೇಲಿಂದ ಈ ಶಾಸ್ತ್ರವು ಎಷ್ಟು ಮನರಂಜಕ, ಉದ್ಬೋಧಕ ಮತ್ತು ಉಪಯುಕ್ತವಿದೆ ಎಂಬುದು ಲಕ್ಷ್ಯದಲ್ಲಿ ಬಂದಿರಲು ಸಾಕು. 'ಮಾನಸಶಾಸ್ತ್ರವು' ಮನೋವ್ಯಾಪಾರವು ಹೇಗೆ ನಡೆಯುತ್ತದೆಂಬುದನ್ನು ಹೇಳುತ್ತದೆ. ' ತರ್ಕಶಾಸ್ತ್ರ' ವು ಮನೋವ್ಯಾಪಾರಗಳ ಒಪ್ಪು–ತಪ್ಪುಗಳಾವವೆಂಬದನ್ನು ತಿಳಿಸುತ್ತದೆ. 'ನೀತಿಶಾಸ್ತ್ರ'ವು ಯಾವ ಮನೋವ್ಯಾಪಾರವು ಒಳ್ಳೆಯದು ಕೆಟ್ಟದೆಂಬದನ್ನು ನಿಶ್ಚಿತಮಾಡುತ್ತದೆ. ಈ ಶಾಸ್ತ್ರವೂ ಕೂಡ ಬಹು ಮಹತ್ವದಿದ್ದು ಉದಾತ್ತವೂ ಇದೆ.

## ಸಮಾಜ ವಿಷಯದ ಶಾಸ್ತ್ರಗಳು

### ಭೂಮಿಕೆ

ಮಾನಸಶಾಸ್ತ್ರದಂತೆ ಸಾಮಾಜಿಕಶಾಸ್ತ್ರದ ಬೆಳವಣಿಗೆಯೂ ಕೂಡ ಅವಿಚ್ಛಿನ್ನವಾಗಿ ನಡೆದಿದೆ. ಇದರಲ್ಲಿಯ ಸಣ್ಣ ಸಣ್ಣ ಭಾಗಗಳು ಬಹಳ ಬೆಳೆದು, ಅವುಗಳೂ ಕೂಡ ಒಂದೊಂದು ಸ್ವತಂತ್ರ ಶಾಸ್ತ್ರಗಳಾಗ ಹತ್ತಿವೆ.

ಅರ್ಥಶಾಸ್ತ್ರ ಮತ್ತು ರಾಜಕಾರಣಗಳ ಅಭ್ಯಾಸವು ವಿದ್ಯಾಲಯ ಗಳಲ್ಲಿ ಸಾರ್ವತ್ರಿಕವಾಗಿ ನಡೆದಿದೆ. ಈ ಎರಡೂ ವಿಷಯಗಳ ಕುರಿತು ನಮ್ಮಲ್ಲಿಯ ಆಧುನಿಕ ಪಂಡಿತರು ವಿಚಾರ ಮಾಡಿದುದೂ ಉಂಟು. ಅರ್ಥಶಾಸ್ತ್ರದಲ್ಲಿಯಂತೂ ನಮ್ಮಲ್ಲಿಯ ಎಷ್ಟೋ ಪಂಡಿತರು ದೊಡ್ಡ ಅಧಿಕಾರವನ್ನು ಸಂಪಾದಿಸಿದ್ದಲ್ಲದೆ ಭಾರತದ ಅರ್ಥಶಾಸ್ತ್ರದ ಪ್ರತಿಯೊಂದು ಶಾಖೆಯ ಮೇಲೆ ಪ್ರಮಾಣಭೂತವಾದ ರಚನೆಯನ್ನು ಮಾಡಿದ್ದಾರೆ. ಆದರೆ ಎಲ್ಲ ಸೌಭಾಗ್ಯವನ್ನು (ಇಂಗ್ಲೀಷ) ಪರಭಾಷೆಗೇ ತಂದು ನೀಡಿದ್ದರಿಂದ ಇಲ್ಲಿಯ ಭಾಷೆಗಳು ಅನಾಥಸ್ಥಿತಿಯಲ್ಲಿದ್ದುದೇ ಒಂದು ಕೊರತೆಯಾಗಿದೆ. ಆಂದಮೇಲೆ ಇನ್ನು ಮೇಲಾದರೂ ಎಲ್ಲ ಅರ್ಥಶಾಸ್ತ್ರವಿಷಯದ ಪ್ರಶ್ನೆಗಳನ್ನು ದೇಶೀಯಭಾಷೆಗಳಲ್ಲಿ ಸುಲಭರೀತಿಯಿಂದ ತಿಳುಹಿಸಿಕೊಡುವ ಪುಸ್ತಕಗಳನ್ನು ಪಂಡಿತರು ಬರೆಯಬೇಕೆಂದು ಈ ಲೇಖಕನ ಆಸೆಯಿದೆ. ಆಮೂಲಾಗ್ರವಾಗಿ ವಿಚಾರಮಾಡಿ ಅಭ್ಯಾಸಮಾಡುವ ಕೊರತೆಯಿದೆ. ರಾಜಕಾರಣಪಟುಗಳನೇಕರು ನಮ್ಮಲ್ಲಿ ಇದ್ದಾರೆ. ಆದರೆ ಅವರು ಮೂಕರಾಗಿರುವ ಕಾರಣ ತಿಳಿಯದಾಗಿದೆ. ಅವರು ತಮ್ಮ ಸ್ವತಂತ್ರ ಅಭ್ಯಾಸವನ್ನು ಬೆಳೆಯಿಸಿ, ದೇಶೀಯಭಾಷೆಯಲ್ಲಿ ತಮ್ಮ ವಿಚಾರಗಳನ್ನು ಪ್ರಕಟಮಾಡುವುದು ಉಚಿತವಾಗಿದೆ.

ಕಾಯಿದೆ ಕಾನೂನುಗಳ ಅಭ್ಯಾಸವು ಎಷ್ಟೊಂದು ಹೆಚ್ಚಾಗಿ ಸಾಗಿರುವದನ್ನು ಹೇಳಲವಶ್ಯವಿಲ್ಲ. ಆದರೆ ಕಾಯಿದೆಗಳ ತಾತ್ವಿಕ ವಿಚಾರ ಮಾಡುವ ಶಾಸನಶಾಸ್ತ್ರಗಳ ಅಭ್ಯಾಸದ, ಗ್ರಂಥರಚನೆಯ ಸುಳುವು ಕೂಡ ನಮ್ಮಲ್ಲಿಲ. ಶಿಕ್ಷಾ ಶಾಸ್ತ್ರ, ಗುನೆಗಳಶಾಸ್ತ್ರ, ಬಾಷಾಶಾಸ್ತ್ರ

ತುಲನಾತ್ಮಕ ಧರ್ಮಶಾಸ್ತ್ರ ಮೊದಲಾದವುಗಳ ವಿಷಯಕ್ಕೆ ಮಾತೆತ್ತು ವಂತಿಲ್ಲ. ಮಾನವಶಾಸ್ತ್ರ, ಸಮಾಜಶಾಸ್ತ್ರಗಳಂಥ ದೊಡ್ಡ ಸಮುದ್ರ ಗಳೇ ಒಣಗಿರುವಾಗ ಇಂಥ ಚಿಕ್ಕ ಹೊಂಡದ ಪಾಡೇನು ?

ಮಾನವ, ಸಮಾಜಶಾಸ್ತ್ರಗಳು ಬಹು ವಿಸ್ತಾರವಾಗಿ ಒಂದೇಸವನೆ ಬೆಳೆಯುತ್ತಿರುವ ಶಾಸ್ತ್ರಗಳು ಮಾನವಶಾಸ್ತ್ರಕ್ಕೆ ಆಂಗ್ಲಭಾಷೆಯಲ್ಲಿ Anthropology ಎಂದೆನ್ನುವರು. ಈ ಹೆಸರು ಗ್ರೀಕಭಾಷೆಯಿಂದಾ ಗಿದ್ದು, Anthropos ಅಂದರೆ ಮನುಷ್ಯ, ಮತ್ತು Logos ಅಂದರೆ ಪ್ರಬಂಧ ಅಥವಾ ಶಾಸ್ತ್ರ; ಹೀಗೆ ಇದರ ಘಟಕಾವಯವಗಳ ಅರ್ಥವಿದೆ. ಇದರಿಂದ ಮನುಷ್ಯನ ವಿಷಯವಾಗಿ ಎಲ್ಲ ರೀತಿಯಿಂದ ವಿಚಾರಮಾಡುವ ಶಾಸ್ತ್ರವೆಂದು ಅರ್ಥವಾಗುವದು. ಈ ಅರ್ಥದಲ್ಲಿ ಕಾಲದ ಅಥವಾ ಸ್ಥಿತಿಯ ಮರ್ಯಾದೆಯನ್ನು ತೋರಿಸಲಾಗುವದಿಲ್ಲ. ಆದರೆ ಮನುಷ್ಯಸಮಾಜಕ್ಕೆ ಸಂಘಸ್ವರೂಪ ಬಂದ ಮೇಲೆ ಅದರ ಬೆಳವಣಿಗೆಯ ವಿಚಾರವನ್ನು ಎಷ್ಟೋ ಶಾಸ್ತ್ರಗಳು ವಿಶೇಷತಃ ಸಮಾಜಶಾಸ್ತ್ರವು ತನ್ನ ಕಡೆಗೆ ತೆಗೆದು ಕೊಂಡದ್ದರಿಂದ ಪೂರ್ವಕಾಲದ ಮನುಷ್ಯನ ಸ್ಥಿತಿಯ ಮತ್ತು ಬೆಳವಣಿ ಗೆಯ ಸ್ಥಿತಿಯನ್ನು ವಿಚಾರಿಸುವದು ಮಾನವಶಾಸ್ತ್ರಕ್ಕೆ ಉಳಿಯಿತು. ಪುರಾಣಕಾಲದ ಜನಾಂಗದ ಸ್ಥಿತಿಯ ವಿಚಾರಮಾಡುವಾಗ, ಪ್ರಗತಿಯ ಸ್ಪರ್ಧೆಯಲ್ಲಿ ಹಿಂದುಳಿದ—ಈಗಲೂ ಕೂಡ ಶೈಶಾವಾವಸ್ಥೆಯಲ್ಲಿರುವ ಸಮಾಜಗಳ ಪರಿಸ್ಥಿತಿಯನ್ನು ಅಭ್ಯಾಸಮಾಡುವದು ಬಹಳೇ ಉಪಯು ಕ್ತವಿದೆ. ಯಾಕಂದರೆ ಅವುಗಳ ಪರಂಪರೆಯ ರೀತಿನೀತಿಗಳು ಮನುಷ್ಯನ ಹಿಂದಿನ ಇರುವಿಕೆಯ ಮೇಲೆ ಬೆಳಕು ಕೆಡವುತ್ತವೆ.

## ೩ ಸಮಾಜ ಶಾಸ್ತ್ರ

ಈ ಶಾಸ್ತ್ರವು ಈಗಿನ ಸಮಾಜದಲ್ಲಿಯ ವ್ಯಕ್ತಿಗಳ ಪರಸ್ಪರ ಸಂಬಂಧದ ವಿಚಾರಮಾಡುತ್ತದೆ. "ಮಾನವಶಾಸ್ತ್ರಕ್ಕೂ ಸಮಾಜ ಶಾಸ್ತ್ರಕ್ಕೂ ಬೇರೊಂದು ವಿಶಿಷ್ಟ ಸಂಬಂಧವಿದೆ. ವಸ್ತುತಃ ಈ ಮಾನವಶಾಸ್ತ್ರವು ಕೇವಲ ಮನುಷ್ಯ ಜೀವಿಯ ವಿಷಯವಾಗಿ ವಿಚಾರ ಮಾಡುವಂಥದು. ಆದರೆ ಕೆಲವು ಗ್ರಂಥಕಾರರು ಇದರ ಮರ್ಯಾದೆ

ಯನ್ನು ಬೆಳೆಯಿಸಿ, ಇದರಲ್ಲಿ ಸಮಾಜಶಾಸ್ತ್ರವನ್ನೂ ಸೇರಿಸಿದ್ದಾರೆ. ಆದರೆ ಇದು ಬಹಳೇ ಮರ್ಯಾದಿತವಿದೆ. ಸ್ವತಂತ್ರವಾಗಿ ವಿಚಾರವಮಾಡಿ ಮನುಷ್ಯನ ಹಿಂದಿನ ಇತಿಹಾಸವನ್ನು ಬೆಳಕಿಗೆ ತರುವದೇ ಮಾನವ ಶಾಸ್ತ್ರದ ಕೆಲಸವಾಗಿದೆ. ಮನುಷ್ಯನು ಹುಟ್ಟಿದ ಬಗೆಯನ್ನು ಮತ್ತು ಇತಿಹಾಸದ ಕಾಲದವರೆಗೆ ಒರುವ ಮೊದಲು ಯಾವ ಯಾವ ಅವಸ್ಥೆ ಯನ್ನು ದಾಟಬೇಕಾಯಿತೆಂಬುವದನ್ನು ಈ ಶಾಸ್ತ್ರವೇತ್ತರು ನಿರ್ಧರಿಸು ವದಿದ್ದು, ಆದರ ಮುಂದಿನ ಕಾರ್ಯವನ್ನು ಸಮಾಜಶಾಸ್ತ್ರ ಶೋಧಕರು ಮಾಡಬೇಕಾಗಿದೆ. ಅಂತೂ, ಮಾನವಶಾಸ್ತ್ರವು ಮೊದಲನೆಯ ಪದ ರಾಗಿಯೂ, ಸಮಾಜಶಾಸ್ತ್ರವು ಆದರ ಮೇಲಿನ ಎರಡನೆಯ ಪದರ ವಾಗಿದೆ. ಸಾಮಾಜವು ಸ್ವತಂತ್ರ ಮಾನವಪ್ರಾಣಿಯ ಸಂಗತಿಯನ್ನು ಹೇಳುವದು ಮಾನವಶಾಸ್ತ್ರದ ಕೆಲಸವಿದೆ. ಸಮಾಜವು ಹೇಗೆ ರೂಪು ಗೊಂಡಿತೆಂಬುದನ್ನು ಹೇಳಿ ಆದರ ಮುಂದಿನಕಾಲದ ಮನುಷ್ಯ ಪ್ರಾಣಿಯ ಸಂಗತಿಯನ್ನು ಹೇಳುವದು ಸಮಾಜಶಾಸ್ತ್ರದ ಕರ್ತವ್ಯವಾಗಿದೆ'' *

ಮೇಲಿನ ವಿವರಣದಲ್ಲಿ ಪ್ರೊ. ಗೋ. ಚಿ. ಭಾಟೆಯವರು ಸಮಾಜ, ಮಾನವಶಾಸ್ತ್ರಗಳ ವಿಚಾರಕ್ಷೇತ್ರದ ಪೃಥಕ್ಕರಣವನ್ನು ಚನ್ನಾಗಿ ಮಾಡಿದ್ದಾರೆ. ಇದರಂತೆಯೇ ಸಮಾಜಶಾಸ್ತ್ರದ ಹಿಂದಿನ ಇತಿಹಾಸ ವನ್ನೂ ಮತ್ತು ಆದರ ರೂಪರೇಷೆಯನ್ನೂ ಕುರಿತು ಪ್ರೊ. ಭಾಟೆಯವರು ಬರೆದ ಲೇಖನದ ಅವತರಣಿಕೆಯನ್ನು ಇಲ್ಲಿ ಕೊಟ್ಟಿದೆ.

''ಸುಪ್ರಸಿದ್ಧ ಫ್ರೆಂಚ ತತ್ವಜ್ಞಾನಿಯಾದ ಕಾಮ್ಟನು ೧೮೩೯ ರ ಸುಮಾರಿಗೆ ಕೊಟ್ಟ ಉಪನ್ಯಾಸವೊಂದರಲ್ಲಿ ಅವನು ಸಮಾಜಶಾಸ್ತ್ರ ಎಂಬ ಶಬ್ದದ ಯೋಜನೆಯನ್ನು ಮೊದಲು ಹೇಳಿದನು. ಈ ಶಾಸ್ತ್ರದ ಹೆಸರು ಹೊಸದಿದ್ದರೂ ಆದರ ವಿಷಯವು ಹೊಸದಲ್ಲ. ಅದು ಬಹಳೇ ಹಳೆಯದು. ಪ್ಲೇಟೊ, ಅರಿಸ್ಟಾಟಲರಿಗೆ '' ಸೋಶಿಯಾಲಾಜಿ '' ಎಂಬ ಶಬ್ದವು ಗೊತ್ತಿಲ್ಲದಿದ್ದರೂ ಅವರು ಈ ಶಾಸ್ತ್ರದಲ್ಲಿಯ ಅನೇಕ ತತ್ವಗಳ ಚರ್ಚೆಯನ್ನು ತಮ್ಮ ಗ್ರಂಥಗಳಲ್ಲಿ ಅಲ್ಲಲ್ಲಿ ಮಾಡಿದ್ದಾರೆ. ಪು. ೪

---

* ಶ್ರೀ. ಭಾಟೆ ಇವರ ಸಮಾಜ ಶಾಸ್ತ್ರದ ಮೇಲಿನ ವ್ಯಾಖ್ಯಾನ ಪು. ೧೮

"ಆಡಮ್ ಸ್ಮಿಥನನ್ನು ಅರ್ವಾಚೀನ ಅರ್ಥಶಾಸ್ತ್ರದ ಜನಕನೆಂದು ತಿಳಿಯುವಂತೆ, ಕಾಮ್ಟನನ್ನು ಸಮಾಜಶಾಸ್ತ್ರದ ಜನಕನೆಂದು ಕರೆಯಲು ಯಾವ ಆತಂಕವೂ ಇಲ್ಲ. ಸಮಾಜದ ಹುಟ್ಟು, ಬೆಳವಣಿಗೆಗಳು ಯಾವ ಒಂದು ನಿಯಮ ಮತ್ತು ಸಿದ್ಧಾಂತಗಳಿಗೆ ಸರಿಯಾಗಿ ಆಗುವವೋ ಅಂಥವುಗಳ ಸಂಶೋಧನೆ ಮಾಡುವದು ಅತ್ಯವಶ್ಯವಿದೆ. ಮತ್ತು ಸಾಮಾಜಿಕಸಂಸ್ಥೆ, ನೀತಿನಡಾವಳಿಗಳು, ನೀತಿಯ ಕಲ್ಪನೆ ಮತ್ತು ಧಾರ್ಮಿಕ ತಿಳುವಳಿಕೆಗಳ ಸಾದ್ಯಂತ ಜ್ಞಾನವಾಗಬೇಕೆಂಬ ಆಶೆಯಿದ್ದರೆ ಸಮಾಜದ ಮತ್ತು ಸಾಮಾಜಿಕ ಕಾರಣಪರಂಪರೆಯ ಶಾಸ್ತ್ರೀಯ ಜ್ಞಾನವನ್ನು ದೊರಕಿಸಬೇಕೆಂದು ಕಾಮ್ಟನು ಮೊದಲು ಪ್ರತಿಪಾದಿಸಿದ್ದಾನೆ. ಅಂದರೆ ಕಾಮ್ಟನನ ಸಮಾಜಶಾಸ್ತ್ರವೆಂದರೆ ಸಮಾಜ, ಅದರ ರೀತಿನೀತಿಗಳು ಮತ್ತು ನೈತಿಕ ಕಲ್ಪನೆಗಳು ದೇವದತ್ತವಾದ್ದರಿಂದ ಅವು ಸನಾತನೀಯವಾಗಿವೆ ಎಂಬ ಹುಚ್ಚು-ಧರ್ಮದ ತಿಳಿವಳಿಕೆಯ ಬಲದಿಂದ ನಿಷೇಧಿಸುವ ಒಂದು ಶಾಸ್ತ್ರವಾಗಿತ್ತು" ಪು. ೭

ಆಮೇಲೆ ಹರ್ಬರ್ಟ ಸ್ಪೆನ್ಸರನು "ಸಮಾಜಶಾಸ್ತ್ರದ ಅಭ್ಯಾಸ" ಎಂಬ ಹೊತ್ತಿಗೆಯನ್ನು ಪ್ರಕಟಿಸಿ ಕಾಮ್ಟನನಿಗಿಂತಲೂ ಒಂದು ಹೆಜ್ಜೆ ಮುಂದಿಟ್ಟಿದ್ದಾನೆ. ಅವನು ಸ್ಥಿತ್ಯಾತ್ಮಕ ಸಮಾಜಶಾಸ್ತ್ರದ ಮೇಲೆ ಎಷ್ಟೋ ಗ್ರಂಥಗಳನ್ನು ರಚಿಸಿ "ಸಮಾಜಶಾಸ್ತ್ರಗಳ ಮೂಲತತ್ವ" ಎಂಬ ಹೊತ್ತಿಗೆಯ ಮೂರು ದೊಡ್ಡ ಭಾಗಗಳನ್ನು ಪ್ರಸಿದ್ಧಿಸಿದ್ದಾನೆ. "ಬೇರೆಬೇರೆ ರಾಷ್ಟ್ರಗಳ ವರ್ಣನೆಯುಳ್ಳ ಸಮಾಜಶಾಸ್ತ್ರ" ಎಂಬುದೇ ಈ ಶಾಸ್ತ್ರದ ಮೇಲಿನ ಅವನ ಕೊನೆಯ ಗ್ರಂಥವು. ಸ್ಪೆನ್ಸರನು ಇಂತಹ ದೊಡ್ಡ ಗ್ರಂಥಗಳನ್ನು ಬರೆದು ಈ ಶಾಸ್ತ್ರವನ್ನು ಜನರು ಮೆಚ್ಚುವಂತೆ ಮಾಡಿದನು. ವಿದ್ವಾಂಸರಿಗೆ ಅವನ ಗ್ರಂಥಾಭ್ಯಾಸದ ರುಚಿಹತ್ತಿತ್ತು. ಮತ್ತು ಜನರಿಗೆ ಶಾಸ್ತ್ರಾಭ್ಯಾಸದ ಒಂದುತರದ ಹುಚ್ಚೇಹಿಡಿಯಿತೆಂದು ಹೇಳಬಹುದು. ಪು. ೮

"ಈವರೆಗೆ ಮಾಡಿದ ಐತಿಹಾಸಿಕ ವಿವೇಚನೆಯ ಮೇಲಿಂದ ನಿಮಗೆ ಈ ಶಾಸ್ತ್ರದ ಪೂರ್ವ ಪೀಠಿಕೆಯು ತಿಳಿದಿರಬೇಕು. ಅಂದಮೇಲೆ ನಾವು

ಈಗ ಆ ಶಾಸ್ತ್ರದ ಸದ್ಯಸ್ವರೂಪ ಹಾಗೂ ಲಕ್ಷಣಗಳನ್ನು ಅವಲೋಕಿಸೋಣ. ಬೇರೆಬೇರೆ ಜನರು ಸಮಾಜದ ಕಟ್ಟುನಿಟ್ಟಿನಿಂದ ಒಂದಾಗಿ ಅವರ ಸಮಾಜವು ಹೇಗಾಯಿತು; ಅದರ ಬೆಳವಣಿಗೆಯಾದ ಬಗೆ; ಈ ಜನಸಾಮಾನ್ಯರಲ್ಲಿ ಒಂದೇತರನಾದ ತಿಳುವಳಿಕೆ, ಒಂದೇತರದ ರೀತಿನೀತಿಗಳು ಮತ್ತು ಬಹುಭಾಗಗಳಲ್ಲಿ ಒಂದೇರೀತಿಯ ರಾಜ್ಯವ್ಯವಸ್ಥೆ ಹೇಗುಂಟಾದವು; ಅವರೆಲ್ಲರೂ ಒಂದೇ ಭಾಷೆಯನ್ನು ಹೇಗೆ ಮಾತಾಡತೊಡಗಿದರು ಮತ್ತು ಅವರಲ್ಲಿ ಒಂದೇತರಹದ ಧರ್ಮಕಲ್ಪನೆಗಳು ಹೇಗೆ ಪ್ರಚಾರದಲ್ಲಿ ಬಂದವು ಮುಂತಾದ ಸಮಸ್ಯೆಗಳನ್ನು ಬಿಡಿಸಿ, ಸಮಾಜದ ಧ್ಯೇಯವೇನಿರಬೇಕೆಂಬುದನ್ನೂ ಮತ್ತು ಅದರ ವಿಕಾಸವು ಹೇಗಾಗುವದೆಂಬದನ್ನೂ ಹೇಳುವದೇ ಸಮಾಜಶಾಸ್ತ್ರದ ಕೆಲಸವಾಗಿದೆ. ಯಾವದೇ ಒಂದು ಸಮಾಜದ ಸ್ಥಿತಿಯಲ್ಲಿ ಬದಲಾವಣೆ ಹೇಗಾಯಿತು; ಆ ಸಮಾಜದ ಕಾರ್ಯವು ಹೇಗೆ ಸಾಗಿದೆ; ಅದರ ಸಾಮಾನ್ಯಸ್ವರೂಪ ಮತ್ತು ಲಕ್ಷಣಗಳಾವವು; ಮತ್ತು ಅದರ ವೈಶಿಷ್ಟ್ಯವೇನು ಮೊದಲಾದ ಪ್ರಶ್ನೆಗಳಂತೆ, ಜನ್ಮಗಳಿಂದ ಇಲ್ಲವೆ ಸಾಂಪತ್ತಿಕ ಸ್ಥಿತಿಗಳ ಮೇಲಿಂದ ಬಂದಿರುವ ಭೇದಾಭೇದಗಳು ಬೇರೆಬೇರೆ ಜಾತಿಗಳು, ಪಂಗಡ, ಒಳಪಂಗಡಗಳು ವರ್ಣ ಮತ್ತು ವರ್ಗ ಹೇಗೆ ಮತ್ತು ಯಾಕೆ ಹುಟ್ಟಿದವು ಮುಂತಾದ ಪ್ರಶ್ನೆಗಳ ಮೀಮಾಂಸೆಯನ್ನೂ ಕೂಡ ಇದೇ ಶಾಸ್ತ್ರವೇ ಮಾಡತಕ್ಕದ್ದಿದೆ.

ಪು. ೯-೧೦

**೪ ಮಾನವಶಾಸ್ತ್ರ**

ಸಮಾಜಶಾಸ್ತ್ರಾಭ್ಯಾಸವು ಅಲ್ಪ ಪ್ರಮಾಣದಿಂದಾದರೂ ಮೊದಲಾದುದು ಕಂಡುಬರುತ್ತದೆ. ಈಗ್ಗೆ ಎಷ್ಟೋ ವರುಷಗಳಿಂದ ಮುಂಬಯಿ ವಿಶ್ವವಿದ್ಯಾಲಯುದವರು ಮೇಲ್ತರಗತಿಯ ವಿದ್ಯಾರ್ಥಿಗಳಿಗೆ ಸಮಾಜಶಾಸ್ತ್ರ ಕಲಿಸುವ ಪಾಠಶಾಲೆಯೊಂದನ್ನು ನಡಸುತ್ತಿದ್ದಾರೆ. ಅದೇ ರೀತಿಯಾಗಿ ದೇಶೀಯ ಭಾಷೆಯಲ್ಲಿ ಕೆಲವು ಲೇಖಕರು ಸಮಾಜಶಾಸ್ತ್ರದಮೇಲೆ ಪುಸ್ತಕಗಳನ್ನೂ, ಕೆಲವು ಪ್ರಬಂಧಗಳನ್ನೂ ಬರೆದಿದ್ದಾರೆ. ಆದರೂ ಮಾನಸಶಾಸ್ತ್ರದ ಸುಳುವು ಕೂಡ ಬಹುಶಃ ಯಾರಿಗೂ ಇದ್ದಂತೆ ಕಂಡು

ಬಂದಿಲ್ಲ. ಮುಂಬೈಯಲ್ಲಿ "ಆಂಥ್ರೊಪಾಲಾಜಿಕಲ್ ಸೊಸಾಯಿಟಿ" ಎಂಬ ಸಂಸ್ಥೆಯೊಂದಿದೆ. ಆದರೆ ಅದು ಎಷ್ಟೊಂದು ಕಾರ್ಯಮಾಡು ವುದೋ ಯಾರಿಗೆ ಗೊತ್ತು! ನಿಜವಾಗಿಯೂ, ಭಾರತದಲ್ಲಿ ಈ ಶಾಸ್ತ್ರಾ ಭ್ಯಾಸಕ್ಕೆ ಸಿಗುವಷ್ಟು ಕ್ಷೇತ್ರವು ಉಳಿದೆಡೆಯಲ್ಲಿ ಸಿಕ್ಕುವದು ವಿರಳ. ಪ್ರಾಥಮಿಕ ಮತ್ತು ಕಾಡುಸ್ಥಿತಿಯಲ್ಲಿದ್ದ ಜನಾಂಗವೇ ಈ ಶಾಸ್ತ್ರಾ ಭ್ಯಾಸದ ಸಾಮಗ್ರಿ ಮತ್ತು ಹಿಂದುಸ್ಥಾನದಲ್ಲಿ ಈ ಸಾಮಗ್ರಿಯ ಕೊರತೆ ಯಿಲ್ಲೆಂಬುದು ಸುಪ್ರಸಿದ್ಧವಿದೆ. ಇಷ್ಟಲ್ಲದೆ ಬಹಳೇ ಕಾಡುಸ್ಥಿತಿಯಲ್ಲಿದ್ದ ಸಮಾಜದಿಂದ ಅತ್ಯಂತ ಸುಧಾರಿಸಿದ ಸಮಾಜದವರೆಗೆ ಬೇರೆಬೇರೆ ಸುಧಾ ರಣಾವಸ್ಥೆಯಲ್ಲಿದ್ದಂತಹ ಸಮಾಜಗಳು ಹೋಲಿಸಿನೋಡುವದಕ್ಕಾಗಿ ಇದೇ ದೇಶದಲ್ಲಿ ಅನೇಕ ಸಮಾಜಗಳು ಉಪಲಬ್ಧವಾಗುವಂತಿವೆ. ಆದರೆ ಈ ಸಾಮಗ್ರಿಯ ಕಡೆಗೆ ಲಕ್ಷ್ಯಕೊಡುವವರಾರು? ಉಳಿದೆಲ್ಲ ಉಪಯುಕ್ತ ವಿಷಯಗಳ ಸಾಮಗ್ರಿಗಳಂತೆ ಈ ಸಾಮಗ್ರಿಯ ಉಪಯೋಗವನ್ನು ಪರ ಕೀಯರೆ ಮಾಡಿಕೊಂಡು ತಮ್ಮ ಭಾಷೆಯಲ್ಲಿ ನಮ್ಮ ದೇಶದ ಜಾತಿಗಳ ಮೇಲೆ ಹೊತ್ತಿಗೆಗಳನ್ನು ಹೊರಡಿಸಿದರೂ ನಾವು ತಣ್ಣಗೆ ಕೂಡ್ರುವವರೆ! ಸರಕಾರದ ಸಹಾಯವಿಲ್ಲ, ಜನರು ದುಡ್ಡಿಲ್ಲದವರು ಎಂಬ ಮಾತು ಯಾವಾಗಲು ಇದ್ದದ್ದೇ! ಈ ಮಾತೂ ಹುರುಳಿಸದೆ ಇಲ್ಲ. ಆದರೂ ಜನರ ಕೈಯಲ್ಲಿ ರೊಕ್ಕವಿಲ್ಲೆಂದು ಸಿನೇಮಾ, ನಾಟಕ,ಸಿಗರೇಟ, ಸೀಸೆಗಳ ಸುಳಿದಾಟವಿಲ್ಲೆಂದೂ ಅಲ್ಲ. ಅವುಗಳ ಉತ್ತರೋತ್ತರ ಅಭಿವೃದ್ಧಿಯು ನಡೆದಿದೆ. ಕೋಟ್ಯಾವಧಿ ಅದೇಕೆ ಅಬ್ಜಾವಧಿ ರೂಪಾಯಿಗಳು ವ್ಯಯ ವಾಗುತ್ತಿರುವವು. ಇದರ ೧೦ ದಷ್ಟು ಇಲ್ಲವೆ ೧/೧೦ ದಷ್ಟಾದರೂ ಹಣವು ಶಾಸ್ತ್ರೀಯ ಸಂಸ್ಥೆಗಳಿಗೆ ದೊರೆತರೆ ಎಷ್ಟೋ ಶಾಸ್ತ್ರೀಯ ಸಂಸ್ಥೆಗಳು ಚನ್ನಾಗಿ ಮೆರೆದಾಡಬಹುದು. ಪಾಶ್ಚಾತ್ಯದೇಶದಲ್ಲಿ ಇಂಥ ಅನೇಕಾ ನೇಕ ಸಂಸ್ಥೆಗಳು ಜನರ ವರ್ಗಣಿಯ ಮೂಲಕವೇ ನಡೆದಿರುತ್ತವೆ. ಆದರೆ ಅದಕ್ಕೆ ಲಕ್ಷ್ಯಕೊಡುವವರಾರು!

೨

ಪ್ರಾಣಿಶಾಸ್ತ್ರವು ಪ್ರಾಣಿಗಳ ಬಗ್ಗೆ ವಿಚಾರಮಾಡುವಂತೆ ಮಾನವ ಶಾಸ್ತ್ರವು ಮಾನವನ ವಿಚಾರದಲ್ಲಿ ಪ್ರವೃತ್ತವಾಗಿದೆ. ಮನುಷ್ಯನ

ಹುಟ್ಟು ಹೇಗಾಯಿತು, ಮುಂದೆ ಅವನ ಜೀವನಕ್ರಮವು ಹೇಗೆ ಹೇಗಾಗುತ್ತ ಬಂದಿತು ಮತ್ತು ಮನುಷ್ಯನು ಜೀವನಕಲಹದಲ್ಲಿ ಸ್ಥಿರವಾಗಿ ನಿಂತು ಉಳಿದ ಪ್ರಾಣಿಗಳ ಮೇಲೆ ತನ್ನ ಒಡೆತನವನ್ನು ಸ್ಥಾಪಿಸುವದಕ್ಕಾಗಿ ಅವನು ಹೇಗೆ ಬಲಗೊಂಡನೆಂಬುದನ್ನು ಹೇಳುವದೇ ಈ ಶಾಸ್ತ್ರದ ಮುಖ್ಯ ಕೆಲಸವಾಗಿದೆ. ಅಂದರೆ ಈ ಜೀವನಕಲಹದಲ್ಲಿ ಬೀಳುವಾಗ ಮನುಷ್ಯನ ಶಾರೀರಿಕ ಹಾಗೂ ಮಾನಸಿಕ ಸಾಮುಗ್ರಿಗಳಾವವು, ಹೇಗಿದ್ದವೆಂಬದನ್ನು ಪರೀಕ್ಷಿಸುವದು ತೀರ ಅಗತ್ಯವಿದೆ. ಪ್ರಾಣಿಗಳ ತುಲನೆಯಿಂದ ಮನುಷ್ಯನ ಶರೀರರಚನೆಯು ಮೇಲಿನ ಮಟ್ಟದ್ದು ಮತ್ತು ಹೆಚ್ಚು ಕಾರ್ಯಕ್ಷಮವುಳ್ಳದೆಂದು ಶಾಸ್ತ್ರಜ್ಞರು ವಿಚಾರಮಾಡಿದ್ದಾರೆ. ಮನುಷ್ಯನಿಗೆ ನೇರವಾಗಿ ನಿಲ್ಲಬರುವದರಿಂದ ಅವನ ಕೈಗಳು ಬೇರೆ ಕೆಲಸದಲ್ಲಿ ತೊಡಗಲು ತೆರವಿರುತ್ತವೆ. ಮಾನವನಿಗೆ ಬೇರೆ ಪ್ರಾಣಿಗಳಿಗೆ ಇಲ್ಲದ ಪೃಥಕ್ ವರ್ಣೋಚ್ಚಾರಮಾಡುವ ಶಕ್ತಿಯಿದೆ ಎಂಬಿವೇ ಮೊದಲಾದವುಗಳು ಮಾನವನು ಪ್ರಗತಿಪಥವನ್ನು ಹಿಡಿಯುವದಕ್ಕೆ ಕಾರಣಗಳಾಗಿವೆಯೆಂದು ಶಾಸ್ತ್ರವೇತ್ತರು ತೋರಿಸಿಕೊಟ್ಟಿದ್ದಾರೆ.

ಆದರೆ ಮಾನವ ಮತ್ತು ಉಳಿದ ಪ್ರಾಣಿಗಳಲ್ಲಿರುವ ಮುಖ್ಯ ಅಂತರವು ಅವನ ಮಾನಸಿಕಶಕ್ತಿಯಲ್ಲಿದೆ. ಮಾನವನು ಶಾರೀರಿಕ ಸಾಮರ್ಥ್ಯದಲ್ಲಿ, ಎಷ್ಟೋ ಪ್ರಾಣಿಗಳಿಗಿಂತ ತೀರ ಕಡಿಮೆಯಿದ್ದನು. ಆದರೆ ಸಾಮರ್ಥ್ಯದಲ್ಲಿರುವ ಈ ಕೊರತೆಯನ್ನು ಅವನು ತನ್ನ ಬುದ್ಧಿಯ ಬಲದಿಂದ ತುಂಬಿಕೊಳ್ಳುವಷ್ಟು ಚುರುಕಾಗಿದ್ದಾನೆ. ಈ ಬುದ್ಧಿಬಲವು ಸಾವಿರಾರು ವರ್ಷಗಳಿಂದಲೂ ನಡೆದಿರುವ ವಿದುಳಿನ ವಿಕಸನದಿಂದಲೇ ಮನುಷ್ಯನಿಗೆ ಪ್ರಾಪ್ತವಾಗಿದೆ.

೩

### ಬಾಹ್ಯಪರಿಸ್ಥಿತಿ

ಮನುಷ್ಯನಲ್ಲಿ ಇದ್ದ ಮೂಲಭೂತ ಸಾಮುಗ್ರಿಯ ವಿಷಯವನ್ನು ಮೇಲಿನಂತೆ ವಿಚಾರಮಾಡಿದಮೇಲೆ, ಈ ಸಾಮುಗ್ರಿಯ ಬಲದಿಂದ ಮಾನವನು ಪ್ರಗತಿಹೊಂದಿದ ಮಾರ್ಗವನ್ನು ನಾವು ಇಲ್ಲಿ ನಿರೀಕ್ಷಿಸುವದು ಸಹಜವಿದೆ. ಬಾಹ್ಯಪರಿಸ್ಥಿತಿಯ ಕೂಡ ಹೊಡೆದಾಡಿ ಪ್ರಗತಿಹೊಂದ

ಬೇಕಾಗುವದು. ಆಗ ಬಾಹ್ಯಪರಿಸ್ಥಿತಿಯು ಮತ್ತು ಮನುಷ್ಯನ ಮೇಲಾಗುವ ಅದರ ಪರಿಣಾಮಗಳೇ ಈ ಶಾಸ್ತ್ರಾಭ್ಯಾಸದಲ್ಲಿ ಎರಡನೆಯ ದೊಡ್ಡ ವಿಷಯವಾಗಿವೆ.

ಮೊಟ್ಟಮೊದಲು ಮನುಷ್ಯನು ಪರಿಸ್ಥಿತಿಯ ಸೇವಕನಾಗಿದ್ದನು. ಇಂಥ ಸ್ಥಿತಿಯಲ್ಲಿ, ಒಂದು ದೇಶದ ಹವೆ-ನೀರು ಸರಿ ಹೋಗದಿದ್ದರೆ, ಅಥವಾ ಅಲ್ಲಿ ಅನ್ನದ ಕೊರತೆಯಾದರೆ ಮನುಷ್ಯನು ಆ ಸ್ಥಳವನ್ನು ಬಿಟ್ಟುಹೋಗುತ್ತಿರಬೇಕು. ಅಂದಮೇಲೆ ಪ್ರಾಚೀನಕಾಲದಲ್ಲಿ ಮಾನವ ಜನಾಂಗದ ಓಡಾಟದ ರೀತಿ ಮತ್ತು ಯಾವ ಕಾರಣಗಳ ಸಲುವಾಗಿ ಆಗುತ್ತಿತ್ತೆಂಬುದರ ಸಮಾಲೋಚನೆಯನ್ನು ಅಭ್ಯಾಸಿಗಳು ಮಾಡಬೇಕಾಗುವದು. ವಿಶಿಷ್ಟಪ್ರದೇಶದಲ್ಲಿಯ ವಿಶಿಷ್ಟಪರಿಸ್ಥಿತಿಯು ಭೌಗೋಲಿಕದಲ್ಲಿರುವ ಇರುವಿಕೆ ಮತ್ತು ಸ್ವಭಾವದ ಮೇಲೆ ಯಾವ ಪರಿಣಾಮವಾಗುತ್ತದೆಂಬದನ್ನು ಇಲ್ಲಿ ಹೇಳಲಾಗುವದು. ಸಾರಾಂಶ, ಮೊದಲು ಪರಿಸ್ಥಿತಿಯು ಮಾನವನ ಮೇಲೆ ಹಕ್ಕನ್ನು ನಡೆಯಿಸುತ್ತಿತ್ತು. ಅನು ತಿರುವುಮುರುವಾಗಿ ಮನುಷ್ಯನು ಪರಿಸ್ಥಿತಿಯನ್ನು ಹೇಗೆ ಆಳಹತ್ತಿದನೆಂಬುದರ ಇತಿಹಾಸವನ್ನು ಮಾನವಶಾಸ್ತ್ರಜ್ಞನು ಬರೆಯಲೇಬೇಕಾಗುತ್ತದೆ.

**ವಂಶ**

ಪರಿಸ್ಥಿತಿಯಿಂದ ಮನುಷ್ಯಶರೀರದಲ್ಲಿಯ ಬದಲಾವಣೆಗಳು, ಆಕಾರ, ರೂಪಬಣ್ಣಗಳ ಮೊದಲಾದ ಪ್ರಭೇದಗಳು ಹೇಗುಂಟಾದವೆಂಬುದನ್ನು ಶಾಸ್ತ್ರಜ್ಞರು ಮಾಡಬೇಕಾಗುತ್ತದೆ. ಮಾನವಜನಾಂಗದ ಅನೇಕ ಜಾತಿಗಳು ಜಗತ್ತಿನಲ್ಲಿ ದೂರ ದೂರ ಅನೇಕ ಪ್ರದೇಶಗಳಲ್ಲಿ ಸ್ವತಂತ್ರರೀತಿಯಿಂದ ಹುಟ್ಟಿದವೆಂದು ಕೆಲ ಪಂಡಿತರ ಮತವಿದೆ. ಆಫ್ರಿಕೆಯಲ್ಲಿ ಒಂದು ಜಾತಿ ಹುಟ್ಟಿತು; ಮಧ್ಯ ಆಶಿಯಾದಲ್ಲಿ ಒಂದು ಜಾತಿ ಹುಟ್ಟಿದರೆ, ಆಶಿಯಾದ ಆಗ್ನೇಯ ದ್ವೀಪಸಮೂಹದಲ್ಲಿ ( ಈ ದ್ವೀಪಸಮೂಹವು ಬಹಳ ಪೂರ್ವಕಾಲದಲ್ಲಿ ಭೂಭಾಗಕ್ಕೆ ಕೂಡಿಕೊಂಡಿತ್ತು.) ಬೇರೊಂದು ಜಾತಿ ಜನ್ಮತಾಳಿತು. ಇದಕ್ಕೆ "ಬಹುವಿಧೋತ್ಪತ್ತಿಯ ಸಿದ್ಧಾಂತ" ವೆನ್ನುತಾರೆ. ಈ ಸಿದ್ಧಾಂತವನ್ನು ಮನ್ನಿ

ಸಿವರೆ ವಂಶಭೇದದ ಪ್ರಶ್ನೆಯು ಪ್ರಾರಂಭಕ್ಕೆ ಬಿಡಿಸಿದ ಹಾಗಾಗಿ ಬಿಡು ವದು. ಯಾಕಂದರೆ, ಮೊದಲಿಗೆ ಜನ್ಮತಾಳಿದ ಎರಡು ಮೂರು ಜಾತಿ ಗಳು ಬೇರೆ ಬೇರೆ ಗುಣಧರ್ಮಗಳಿಂದ ಕೂಡಿದವುಗಳೆಂದು ಸಹಜ ವಾಗಿಯೇ ಒಪ್ಪಬೇಕಾಗುವದು. ಒಂದು ವೇಳೆ ಬೇರೆ ಬೇರೆ ಜಾತಿಗಳ ಅತ್ಯಂತ ಭಿನ್ನವಾದ ಗುಣಧರ್ಮಗಳ ಉಪಪತ್ತಿಯನ್ನು ಹಚ್ಚಲು ಬರ ಬೇಕೆಂದು ಈ "ಬಹು ವಿಧೋತ್ಪತ್ತಿಯು" ಕಲ್ಪನೆಯು ಮುಂದುವರೆ ದಿಡೆಯೆಂದರೂ ನಡೆದೀತು. ಆದರೆ ಈ ಬಹು ವಿಧೋತ್ಪತ್ತಿಯ ಸಿದ್ಧಾಂ ತವು ಹಿಂದುಬಿದ್ದಿದೆಯಲ್ಲದೆ ಬಹುಶಃ ಅದನ್ನು ಯಾರೂ ಮಾನ್ಯಮಾಡು ವದಿಲ್ಲ. ಒಂದು ಬೊಡ್ಡೆಯಿಂದಲೇ ಈ ಎಲ್ಲ ಶಾಖೆಗಳು ಒಡೆದು ಮನುಷ್ಯ ಜಾತಿಯೆಂಬ ವೃಕ್ಷವು ನಿರ್ಮಾಣವಾಯಿತೆಂಬ ಮತವೇ ಶಾಸ್ತ್ರದಿಂದ ನಿರ್ಧಾರವಾಗಿದೆ. ಈ ಮತವನ್ನು ಒಪ್ಪಿಕೊಂಡರೆ, ಶಾಸ್ತ್ರಜ್ಞರು ಒಬ್ಬ ರೊಬ್ಬರಿಂದ ಅತ್ಯಂತ ವಿಸದೃಶವಾದ ಮಾನವವಂಶವು ನಿರ್ಮಾಣವಾದ ರೀತಿಯನ್ನು ಹೇಳಬೇಕಾಗುವದು. ಜೀವನಕಲಹವನ್ನು ಮತ್ತು ನೈಸರ್ಗಿಕ ನಿಯಮಗಳನ್ನು ಮನುಷ್ಯನು ಬಿಟ್ಟಿರದ್ದರಿಂದ ಅವನಲ್ಲಿ ಹೆಚ್ಚುಕಡಿಮೆಯಾಗುತ್ತ ಅವನ ಬೇರೆ ಬೇರೆ ವಂಶಗಳಾದವು. ಈ ವಂಶಗಳಿಂದ ಉಪವಂಶಗಳು ನಿರ್ಮಾಣವಾದವೆಂಬ ಸಿದ್ಧಾಂ ತವು ಈ ವಿಷಯದಲ್ಲಿ ನಿಜವಾಗಿದೆ. ಆದರೆ ಈ ವಿಷಯಗಳ ಪ್ರಶ್ನೆಗಳನ್ನು ಸೂಕ್ಷ್ಮರೀತಿಯಿಂದ ಮಾನವಶಾಸ್ತ್ರಜ್ಞರು ಸಂಶೋಧನ ಮಾಡಬೇಕಾ ಗುತ್ತದೆ. ಜನನಶಾಸ್ತ್ರದ ತತ್ವಕ್ಕನುಸಾರವಾಗಿ, ಪೂರ್ವ ಪರಂಪರೆ ಯಿಂದ ನಡೆದುಬಂದ ವಿಶಿಷ್ಟಗುಣಧರ್ಮಗಳುಳ್ಳ ಯೋಗ್ಯವಾದ ಮಾನ ವಜಾತಿಯ ವಿಭಾಗವೆಂದರೆ ವಂಶ. ಈ ವಂಶವನ್ನು ನಿಶ್ಚಿತ ಮಾಡುವದ ಕ್ಕಾಗಿ. ಶಾಸ್ತ್ರವೇತ್ತರು ಜಗತ್ತಿನಲ್ಲಿಯ ಮನುಷ್ಯರಲ್ಲಿ ಒಡೆದುಕಾಣುವ ಎಷ್ಟೋ ಸಮುದಾಯಗಳ ಗುಣಧರ್ಮಗಳ ಅಭ್ಯಾಸವನ್ನು ಮಾಡಬೇ ಕಾಗುತ್ತದೆ. ಬೇರೆ ಬೇರೆ ವಂಶಗಳಲ್ಲಿ ಕಂಡುಬರುವ ಭಿನ್ನಭೇದವು, ಶಾರೀರಿಕ ಹಾಗೂ ಮಾನಸಿಕವಾದ ಎರಡು ಪ್ರಕಾರಗಳಾಗಿರಲೇಬೇಕು. ಮಾನಸಿಕಭೇದವು ಅಳತೆಗೆ ಸಿಕ್ಕಲಾರದಿದ್ದುದರಿಂದ ವಂಶಶಾಸ್ತ್ರಜ್ಞರು ಶಾರೀರಿಕ ಭಿನ್ನತೆಯನ್ನೇ ತುಂಬಿಬಿಟ್ಟಿದ್ದಾರೆ. ಶಾರೀರಿಕ ಗುಣಧರ್ಮಗಳ

ತೂಕ ಆಳತೆಗಳನ್ನು ತಿಳುಹಿಸುವ ಬೇರೊಂದು ಶಾಸ್ತ್ರವನ್ನೇ ರಚಿಸಿದ್ದಾರೆ. ಕಣ್ಣಾಲ್ಲಿಯ ಗೊಂಬೆಯ ಬಣ್ಣ, ತೊಗಲಿನಬಣ್ಣ, ಮೂಗಿನ ಉದ್ದ, ಅಗಲಿನ ಪ್ರಮಾಣ, ಮುಖದ ಆಕೃತಿ, ಶರೀರದ ನಿಲುವು, ಅಗಲ, ಇವೇ ಮೊದಲಾದ ಶರೀರದ ನಿರೀಕ್ಷಣೆಯನ್ನು ವಂಶನಿರ್ಧರಿಸುವದಕ್ಕಾಗಿ ಶಾಸ್ತ್ರಜ್ಞರು ಮಾಡುತ್ತಾರೆ. ಆದರೆ ಎಲ್ಲದರಲ್ಲಿಯೂ ಹೆಚ್ಚು ಪ್ರಚಲಿತವಾದ ಮತ್ತು ಮಹತ್ವದ್ದಾದ ಪದ್ಧತಿಯೆಂದರೆ ತಲೆಯ ಉದ್ದ ಳತೆ ನೋಡಿ ಅದರ ಪ್ರಮಾಣ ತೆಗೆಯುವ ಶೀರ್ಷಮಾಪನಪದ್ಧತಿಯು.

ಈ ಶರೀರನಿರೀಕ್ಷಣೆ, ಶರೀರದ ಆಳತೆಗಳ ಮೇಲಿಂದ ಸರ್ವರಿಂದಲೂ ಮಾನ್ಯವಾದ ಸಿದ್ಧಾಂತದ ಸ್ಥಾಪನೆ ಇನ್ನೂ ಆಗಿಲ್ಲ; ಆದ್ದರಿಂದ ಈಗ ಜಗತ್ತಿನಲ್ಲಿ ಎರಡು ಅಥವಾ ಮೂರು ವಂಶಗಳು ಇರುವವೆಂದು ಬಹುಮತಾನುಸಾರ ನಿರ್ಧರಿಸಲ್ಪಟ್ಟಿದೆ. ಒಂದನೆಯದು 'ಮಾಂಗೊಲಾಯಿಡ್,' ಎರಡನೆಯದು 'ಆಸ್ಟ್ರೊಲಾಯಿಡ್'' ಮೂರನೆಯದು 'ನಿಗ್ರೊ'. ಮಾಂಗೊಲಾಯಿಡ ಜನರು ವಿಶೇಷವಾಗಿ ಚೀನಿ ಜಪಾನದಲ್ಲಿದ್ದಾರೆ. ಕಾಕೇಶೀಯ ವಂಶದವರೆಂದೆನ್ನಿಸಿಕೊಳ್ಳುವ ಯುರೋಪದಲ್ಲಿಯ ಜನಸಮುದಾಯ (ಇರಾಣದಲ್ಲಿಯ ಮತ್ತು ಹಿಂದುಸ್ಥಾನದಲ್ಲಿಯ ಆರ್ಯರು) ವು ಮಾಂಗೋಲಾಯಿಡ್ ಜನರ ಅತಿ ಪುರಾತನ ಕಾಲದ ಬೇರೆಯಾದ ಒಂದು ವಿಭಾಗ. ಅಮೇರಿಕದ ಇಂಡಿಯನ್ನರು ಹೀಗೆಯೇ ಆದ ಬೇರೊಂದು ಶಾಖೆಯು. ಆಸ್ಟ್ರೇಲಿಯಾದ ವಂಶದವರು ಆಸ್ಟ್ರೇಲಿಯಾ ಮತ್ತು ಸುತ್ತುಮುತ್ತಲಿನ ನಡುಗಡ್ಡೆಯ ಮೂಲನಿವಾಸಿಗಳ ನಿಗ್ರೋವಂಶವು ಮಧ್ಯಆಫ್ರಿಕಾದ ಮೂಲನಿವಾಸಿ ವಂಶವಿದೆ. ಒಂದು ವೇಳೆ ನಿಗ್ರೋವಂಶವು ಆಸ್ಟ್ರೊಲಾಯಿಡ ವಂಶದ ಒಂದು ಭಾಗವಾಗಿರಲೂ ಸಾಧ್ಯವಿದೆ. ಹಿಂದುಸ್ತಾನದ ದಕ್ಷಿಣಭಾಗದಲ್ಲಿಯ ಜನಾಂಗವು ಆಸ್ಟ್ರೋಲಾಯಿಡ್ ಜನರ ಶಾಖೆಯೆಂದು ತಿಳಿಯುತ್ತಾರೆ. ಎಷ್ಟೋ ಜನರು ಕಾಕೇಶಿಯನ್ ಮತ್ತು ಡ್ರಾವಿಡಿಯನ್‌ರ ವಂಶಗಳು ಸ್ವತಂತ್ರವೆಂದು ಭಾವಿಸುತ್ತಾರೆ. ಅವರ ಅಭಿಪ್ರಾಯದಂತೆ ವಂಶಗಳು ೪ ಅಥವಾ ೫ ಆಗುತ್ತವೆ. ಇವು ತೀರ ದೊಡ್ಡವಂಶ ವಿಭಾಗಗಳು. ಅವುಗಳ ಶಾಖೋಪಶಾಖೆಗಳು ಲೆಕ್ಕವಿಲ್ಲದಷ್ಟು ಬೆಳೆದಿವೆ.

ಈ ವಶೋಪವಂಶ ಅಭ್ಯಾಸವೇ ಮಾನವವಂಶಶಾಸ್ತ್ರವೆಂಬ ಶಾಸ್ತ್ರವಾಗಿದೆ. ಬೇರೆ ಬೇರೆ ವಂಶಗಳ ಪರಸ್ಪರ ಸಂಮಿಶ್ರಣ ದಿಂದಾಗುವ ಪರಿಣಾಮಗಳ ಅವಲೋಕನವನ್ನು ಶಾಸ್ತ್ರಜ್ಞರು ನಡೆ ಸಿದ್ದಾರೆ. ನಮ್ಮ ಹಿಂದುಸ್ಥಾನದಲ್ಲಿಯ ವಂಶಶಾಸ್ತ್ರೀಯ ನಿರೀಕ್ಷಣ ವನ್ನು ಸರ್ ಹರ್ಬರ್ಟರಿಸ್ಲೆ ಎಂಬ ತಜ್ಞರನ್ನು ನೇಮಿಸಿ ಸರಕಾರದವರು ಮಾಡಿಸಿದರು. ಆ ನಿರೀಕ್ಷಣಾನುಸಾರವಾಗಿ ಹಿಂದುಸ್ಥಾನದಲ್ಲಿ ಶುದ್ಧ ಆರ್ಯವಂಶದ ಜನರು ಕೇವಲ ಪಂಜಾಬ, ರಾಜಪುತಾನ, ಕಾಶ್ಮೀ ರಗಳಲ್ಲಿರುವರೆಂದು ಸಿದ್ಧವಾಗಿದೆ. ಮರಾಟಿಯರು ಸಿಥಿಯನ್ ಮತ್ತು ದ್ರಾವಿಡಿಯನ್ ಈ ಎರಡು ವಂಶಗಳ ಮಿಶ್ರ ಪ್ರಜೆಗಳೆಂದು ಈ ನಿರೀಕ್ಷ ಣೆಯ ನಿರ್ಣಯವಿದೆ.

## ಸಂಸ್ಕೃತಿ

ವಂಶಪರಂಪರೆಯಿಂದ ಅಂದರೆ ಶರೀರದಲ್ಲಿಳಿದ ಯಾವ ಗುಣಧರ್ಮ ಗಳನ್ನು ಮನುಷ್ಯನು ಪ್ರಯತ್ನವಿಲ್ಲದೆ ಸಂಪಾದಿಸಿರುವನೋ ಅವುಗಳ ವಿವೇಚನೆಯೇ "ವಂಶವು." ಆದರೆ ಮನುಷ್ಯನು ಬುದ್ಧಿಪೂರ್ವಕವಾಗಿ ಇಂದು ಯಾವ ಪ್ರಗತಿಯನ್ನು ಮಾಡಿದ್ದಾನೋ ಅವುಗಳಿನ್ನೂ ನೆತ್ತರದ ಲ್ಲಿಳಿದಿಲ್ಲ. ಉದಾ: ಶಾಸ್ತ್ರಜ್ಞನ ಮಗನು ಶಾಸ್ತ್ರಜ್ಞನಾಗಿಯೇ ಹುಟ್ಟು ವದಿಲ್ಲ. ಗಾಯಕನ ಮಗನು ಅತ್ತರೂ ಸ್ವರ ಹಿಡಿದು ಅಳುವನೆಂಬ ಗಾದೆಯಿದ್ದರೂ ನಿಜವಾಗಿಯೂ ಗಾಯಕನ ಮಗನು ಹುಟ್ಟಿದೊಡನೆ ಹಾಡತೊಡಗುವದಿಲ್ಲ. ಆದುದರಿಂದ ಈ ಪ್ರಗತಿಯೆಲ್ಲ ಒಂದು ದೃಷ್ಟಿಯಿಂದ ಹೊರಗಿನದಿದ್ದು ಅದು ಹೇಳಿಕೆ ಕೇಳಿಕೆಗಳಿಂದಾಗಲಿ, ಶಿಕ್ಷಣ ಪರಂಪರೆಯಿಂದಾಗಲಿ ಬಂದಿರುತ್ತದೆ. ಈ ಪರಂಪರಾಗತ ಬಾಹ್ಯ ಪ್ರಗ ತಿಗೇ ಸಂಸ್ಕೃತಿಯೆನ್ನುತ್ತಾರೆ. ಸಂಸ್ಕೃತಿಯೆಂದರೆ ನಮ್ಮ ಪೂರ್ವ ಜರು ಗಳಿಸಿದ ಜ್ಞಾನಾನುಭವಗಳ ಸಂಚಯವು. ಸಂಸ್ಕೃತಿಯು ಮನುಷ್ಯ ಜಾತಿಯ ವೈಶಿಷ್ಟ್ಯವು. ಅದರಿಂದಲೇ ಮನುಷ್ಯನು ಸಾವಿರ ವರ್ಷ ಮೊದಲಿನ ಬೇರೆ ಪ್ರಾಣಿಗಳನ್ನು ಹಿಂದೆ ಹಾಕಿದ್ದಾನೆ. ಉಳಿದ ಪ್ರಾಣಿಗಳಿಗೆ ತಮ್ಮ ಅನುಭವದ ಸಂಗ್ರಹವನ್ನು ಮಾಡಿ ತಮ್ಮ ವಂಶಜ

ರಿಗೆ ಕೊಡಬರುವದಿಲ್ಲ; ಮನುಷ್ಯನಿಗೆ ಹಾಗೆ ಬರುತ್ತದೆ. ಅದರಿಂದಲೇ ಮನುಷ್ಯನು ಇಂದಿನವರೆಗೆ ಹಿಮಾಲಯದಂಥ ಜ್ಞಾನದ ರಾಶಿಯನ್ನು ಸಂಗ್ರಹಿಸಿಟ್ಟಿದ್ದಾನೆ. ಈ ಅನುಭವವನ್ನು ಮುಖ್ಯವಾಗಿ ಭಾಷೆಯ ಸಹಾಯದಿಂದ ಮಾಡುವದಿದೆ. ಅದರಿಂದಲೇ ಭಿನ್ನ ಭಿನ್ನ ಭಾಷೆಗಳನ್ನು ಅಭ್ಯಸಿಸುವದು ಮಾನವ ಶಾಸ್ತ್ರದಲ್ಲಿ ಅಂತರ್ಭೂತವಾಗಿದೆ. ಈಗ ಸುಧಾರಣೆಯ ಶಿಖರದಲ್ಲಿರುವ ಯಾವ ಸಮಾಜಗಳಿರುವವೋ ಅಂಥವುಗಳ ಭಾಷೆಯು ವಸ್ತುಗಳನ್ನು ವ್ಯಕ್ತಮಾಡುವ ಶಬ್ದಗಳಿಂದ ತುಂಬಿದ್ದರೂ, ಮಾನವಶಾಸ್ತ್ರದ ಅಭ್ಯಾಸಕ್ಕೆ ಸಾಕಷ್ಟು ಉಪಯೋಗವಿರುವದಿಲ್ಲ. ಆದರೆ ಸುಧಾರಿಸದಿದ್ದ ಜನರ ಕಲ್ಪನೆಯೂ, ವ್ಯಾಪಾರವೂ ತೀರ ಮರ್ಯಾದಿತವಿರುವದರಿಂದ ಅಷ್ಟೇ ಭಾಷೆಯ ಪ್ರತಿಬಿಂಬವು ಅಲ್ಲಿ ಮೂಡುವದು. ಅದರಿಂದ ಇಂಥ ಭಾಷಾಭ್ಯಾಸದ ಆ ಕಾಲದ ಸಂಸ್ಕೃತಿಯನ್ನು ಸಾಧಾರಣ ತಿಳಿದುಕೊಳ್ಳಲು ಉಪಯೋಗವಾಗುತ್ತದೆ. ಉದಾ: ಬರ್ಫ ಬೀಳುವ ಪ್ರದೇಶವಲ್ಲಿಯ ಎಸ್ಕಿಮೋಜನರ ಭಾಷೆಯಲ್ಲಿ ಬೀಳುವ ಬರ್ಫ, ತೇಲುವ ಬರ್ಫ, ಭೂಮಿಯಮೇಲಿನ ಬರ್ಫಗಳ ಅರ್ಥವನ್ನು ವ್ಯಕ್ತಮಾಡುವ ಸ್ವತಂತ್ರ ಶಬ್ದಗಳಿವೆ. ಆದರೆ ಸ್ನೋ ಹಾಗು ಆಯಿಸ್ ಇವುಗಳ ಕಲ್ಪನೆಕೊಡಲು ನಮ್ಮಲ್ಲಿ ಸರಿಯಾದ ಶಬ್ದಗಳಿಲ್ಲ. ನಮ್ಮ ಭಾಷೆಯಲ್ಲಿ ಒಕ್ಕಲತನದ ನೂರಾರು ಶಬ್ದಗಳಿವೆ. ಆದರೆ ಎಸ್ಕಿಮೋಜನರಲ್ಲಿ ಈ ಶಬ್ದಗಳು ಕಿಂಚಿನ್ ಮಾತ್ರವಿರುವದಿಲ್ಲ. ಭಾಷಾಭ್ಯಾಸದಿಂದ ಸಮಾಜದ ಸಂಸ್ಕೃತಿಯ ಚಿತ್ರವನ್ನು ಹೇಗೆ ತೆಗೆಯಬೇಕೆಂಬುದರ ಲಕ್ಷ್ಯವು ಇದರಿಂದಾಗುವದು. ಈ ಮುಂದೆ ಪ್ರತ್ಯಕ್ಷ ಸಂಸ್ಕೃತಿಯ ಅಭ್ಯಾಸವನ್ನು ಶಾಸ್ತ್ರ ಜಿಜ್ಞಾಸುಗಳು ಮಾಡಬೇಕು. ಸಂಸ್ಕೃತಿಯೆಂದರೆ ಇಂದಿನ ಸುಧಾರಿಸಿದ ರಾಷ್ಟ್ರಗಳ ನಡೆ-ನುಡಿ, ಕಲ್ಪನೆ, ಜ್ಞಾನ ಇಷ್ಟೇ ಎಂದು ತಿಳಿಯಲಾಗದು. ತೀರ ಮೊದಲಿನಿಂದ ಮನುಷ್ಯನು ತನ್ನ ಅನುಭವ ಸಂಗ್ರಹವನ್ನು ಮಾಡುತ್ತ ಬಂದಿರುವದರಿಂದ ಮನುಷ್ಯನ ಸಂಸ್ಕೃತಿಯು ಅಂದಿನಿಂದ ಪ್ರಾರಂಭವಾಗುತ್ತದೆ. ಈ ಸಂಸ್ಕೃತಿಯಲ್ಲಿ ಸ್ಥೂಲವಾಗಿ ಮೂರು ವಿಭಾಗಗಳಿವೆ. ಬಾಹ್ಯ ಪರಿಸ್ಥಿತಿಯ ಪರಿಚಯ ಮಾಡಿಕೊಡುವ ಮನುಷ್ಯನು ಶೋಧಿಸಿದ ಉಪಾಯ:— ೧ ಇದರಲ್ಲಿಯೇ ಅನ್ನ ದೊರಕಿಸುವ

ಪದ್ಧತಿ, ವಾಸಿಸುವ ಸ್ಥಳ, ಉದ್ಯೋಗ, ಪಾತ್ರಗಳ ನಿರ್ಮಾಣ, ಆಯುಧ ನಿರ್ಮಾಣ ಮೊದಲಾದ ಉಪಯುಕ್ತ ಪದಾರ್ಥಗಳನ್ನು ಮಾಡುವ ವಿಚಾರವಿದೆ. ಇದಕ್ಕೆಯೇ ಮನುಷ್ಯನ ವಾಸ್ತವ ಸಂಸ್ಕೃತಿಯೆನ್ನುತ್ತಾರೆ. ಎರಡನೆಯ ವಿಭಾಗದಲ್ಲಿ ಮಾನವ ಸಾಮಾಜಿಕ ವಿವೇಚನೆ ಮಾಡಲಾಗುಗುವದು. ಮನುಷ್ಯ-ಮನುಷ್ಯರಲ್ಲಿಯ ಸಂಬಂಧವು ಮೊದಲಿಸಿಂದಲೂ ಮೂರು ಪ್ರಕಾರವಿರಬೇಕು; ಆರ್ಥಿಕ, ರಾಜಕೀಯ, ಕಾಮುಕ (ವೈಷಯಿಕ) ಮನುಷ್ಯನು ಅನ್ನಸಂಗ್ರಹ ಮಾಡಿದಾಗಿನಿಂದಲೇ ಅರ್ಥಶಾಸ್ತ್ರವು ಉತ್ಪನ್ನವಾಯಿತು. ಬೇರೆ ಮನುಷ್ಯರೊಡನೆ ಸಹಕಾರ, ಲೇವಾದೇವಿ, ಅಪಹಾರ ಈ ಮೂರೂ ಕಾರಣಗಳಲ್ಲಿ ಯಾವದೊಂದು ದೃಷ್ಟಿಯಿಟ್ಟುಕೊಂಡು ನೋಡಹತ್ತಿದನು. ರಾಜಕೀಯ ಸಂಬಂಧವು ಕಟ್ಟುನಿಟ್ಟುಗಳನ್ನು ಪಾಲಿಸುವದೂ, ಮುಖಂಡನನ್ನು ಅನುಸರಿಸುವದೂ ಮೊದಲಾದವುಗಳಲ್ಲಿ ಪರಿಣಮಿಸಿತು. ಕಾಮುಕತನದ ಸಂಬಂಧವು ಮೆಲ್ಲಮೆಲ್ಲಗೆ ನಿಯಮಿತವಾಗುತ್ತಾ ಪತಿಪತ್ನೀ ಸಂಬಂಧವಾಗಿ ವಿವಾಹ ಸಂಸ್ಥೆಯುಂಟಾಯಿತು. ಇದು ಮನುಷ್ಯನ ಸಾಮಾಜಿಕ ಸಂಸ್ಕೃತಿಯಾಯಿತು. ಇದಾದಮೇಲೆ ಆಧ್ಯಾತ್ಮಸಂಸ್ಕೃತಿಯ ವಿಚಾರ ಬರುತ್ತದೆ. ಮನದ ರಂಜನೆ, ಸಮಾಧಾನಕ್ಕಾಗಿ ಬೇರೆ ಬೇರೆ ಪ್ರಕಾರಗಳನ್ನು ನಿರ್ಮಿಸುವ ಉತ್ಸುಕತೆಯೂ ಮನುಷ್ಯನಲ್ಲಿ ತೀರ ಮೊದಲಿಸಿಂದಲೂ ಕಂಡುಬರುತ್ತದೆ. ಕಲೆ, ಧರ್ಮ, ನೀತಿ, ತತ್ವಜ್ಞಾನ, ಸೃಷ್ಟಿಯ ನಿರೀಕ್ಷಣ ಮೊದಲಾದ ಮಾನಸಿಕ ವ್ಯಾಪಾರವೆಂದರೆ ಮನುಷ್ಯನ ಆಧ್ಯಾತ್ಮಿಕ ತೃಷ್ಣೆಯನ್ನು ಶಾಂತಗೊಳಿಸುವ ಆತ್ಮಸುಖದ ಸೆಲೆಯೇ ಸರಿ. ಇದರ ವಿಕಾಸವು ಪ್ರಾಚೀನ ಕಾಲದಲ್ಲಿ ಹೇಗಾಗುತ್ತ ಬಂದಿತೆಂಬುದನ್ನು ನೋಡುವದು ಮಾನಸಶಾಸ್ತ್ರದ ಕಾರ್ಯವಾಗಿದೆ. ಮನುಷ್ಯನ ಸಂಸ್ಕೃತಿ ವಿಕಸನದ ಅವಲೋಕನವೇ ಮಾನವಶಾಸ್ತ್ರದ ಮಹತ್ವವಾದ ಬೋಧಪ್ರದ ಭಾಗವಿದೆ. ಇದರ ಬೆಳೆವಣಿಗೆಯು ಈಗ ಅನೇಕ ಮುಖಗಳಿಂದ ಅವ್ಯಾಹತವಾಗಿ ಸಾಗಿದೆ.

**೫ ಪುರಾಣವಸ್ತುಶಾಸ್ತ್ರ**

ಈ ಶಾಸ್ತ್ರವು ಮಾನವಶಾಸ್ತ್ರಕ್ಕೂ, ಇತಿಹಾಸಕ್ಕೂ ಪರಿಪೋಷಕ

ಏದೆ. ಭೂಪೃಷ್ಠದ ಕೆಳಗೆ ಲುಪ್ತವಾಗಿರುವ ಪ್ರಾಚೀನಕಾಲದ ಮನುಷ್ಯ ನಿರ್ಮಿತವಸ್ತುಗಳನ್ನು ಶೋಧಿಸಿತೆಗೆದು ಅದರ ಅಭ್ಯಾಸ ಮಾಡುವದು. ಮತ್ತು ಆಗಿನ ಯೋಗದಿಂದ ಪ್ರಾಚೀನ ಮಾನವಜಾತಿಯ ಇತಿಹಾಸದ ರೂಪರೇಖೆಯನ್ನು ಸಿದ್ಧಪಡಿಸುವದು ಈ ಶಾಸ್ತ್ರದ ಕಾರ್ಯವಿದೆ. ಈ ಶಾಸ್ತ್ರಕ್ಕೆ ವ್ಯವಹಾರದ ಸಂಬಂಧವು ಹೆಚ್ಚಾಗಿದೆ. ಪ್ರಾಚೀನ ಅವಶೇಷ ಗಳು ಎಲ್ಲಿ ಅಡಗಿರುವವೋ ಆ ಸ್ಥಳವನ್ನು ಶೋಧಿಸಿ ಆ ಅವಶೇಷಗಳನ್ನು ಮುಕ್ಕುಮಾಡದೆ ಅಗಿದು ಹೇಗೆ ತೆಗೆಯಬೇಕು, ತೆಗೆದನಂತರ ಅದನ್ನು ವರ್ಗೀಕರಿಸಿ ಅದರ ವರ್ಣನೆಯನ್ನು ಹೇಗೆಮಾಡಬೇಕು ಮೊದಲಾದ ಸಂಗತಿಗಳ ಜ್ಞಾನವು ವ್ಯವಹಾರಿಕ ಭಾಗದಲ್ಲಿ ಬರುತ್ತದೆ. ಇದಾದ ನಂತರ ಶೋಧಿಸಿ ತೆಗೆದ ವಸ್ತುಗಳನ್ನು ಪರೀಕ್ಷಿಸುವದು, ಅವು ದೊರೆತ ಸ್ಥಳದ ಸೂಕ್ಷ್ಮನಿರೀಕ್ಷಣೆ ಮಾಡುವದು, ಮತ್ತು ಅನುಮಾನವನ್ನು ಕಟ್ಟುವದು ಮೊದಲಾದವು ತಾತ್ವಿಕಭಾಗದಲ್ಲಿ ಬರುತ್ತವೆ. ಈ ಕೆಲಸ ವನ್ನು ಶಾಸ್ತ್ರಜ್ಞರು ತಮ್ಮ ಕೋಣೆಯಲ್ಲಿಯೇ ಕುಳಿತು ಮಾಡಬಹುದು; ಈ ತಾತ್ವಿಕಭಾಗದಲ್ಲಿಯೂ ಪ್ರವೀಣನಾಗಬೇಕಾದರೆ ಭೂಸ್ತರ ಶಾಸ್ತ್ರ, ಪುರಾತನ ಜೀವಶಾಸ್ತ್ರ, ಮಾನವಶಾಸ್ತ್ರ, ಜಗತ್ತಿನ ಇತಿಹಾಸ ಮೊದ ಲಾದ ವಿಷಯಗಳ ಸಂಪೂರ್ಣ ಜ್ಞಾನವಿರುವದು ಅಗತ್ಯ. ಭೂಶಾಸ್ತ್ರದ ವರ್ಣನೆಯಲ್ಲಿ ನಾಲ್ಕು ಯುಗಗಳಲ್ಲಿ ಪೃಥ್ವಿಯ ಮೇಲೆ ಒಟ್ಟು ೪ ಹಿಮ ಕಾಲವೂ, ಮತ್ತು ೩ ಹಿಮಮಧ್ಯಕಾಲ ಅವುಗಳಲ್ಲಿ ಇರುವವೆಂದು ಶಾಸ್ತ್ರಜ್ಞರ ಕಲ್ಪನೆಯಿದೆ. ವಸ್ತುನಿರ್ಮಿತ ವಸ್ತುಗಳು ಯಾವ ಭೂಗರ್ಭದಲ್ಲಿ ದೊರೆಯುತ್ತವೆಯೋ ಅವಗಳಲ್ಲಿ ಪ್ರಾಚೀನತಮ ವಸ್ತು ಗಳು ಎರಡನೇ ಹಿಮಮಧ್ಯಕಾಲದಲ್ಲಿರಬೇಕೆಂದು ಅನೇಕ ಶಾಸ್ತ್ರಜ್ಞರು ಅನ್ನುತ್ತಾರೆ. ಕಾಲದ ಅನುಮಾನವು ಇಂಥ ವಿಷಯದಲ್ಲಿ ತೀರ ಅನಿಶ್ಚಿತವಿದ್ದು ಈ ಮನುಷ್ಯಸದೃಶಪ್ರಾಣಿಯು ಮೂರು, ನಾಲ್ಕು ಲಕ್ಷ ವರ್ಷ ಪೂರ್ವದಲ್ಲಿ ಉತ್ಪನ್ನವಾಗಿರಬೇಕೆಂದು ವಿಧಾನಮಾಡಿ ದರೆ ಅದು ಶಾಸ್ತ್ರಜ್ಞರ ಈಗಿನ ಕಲ್ಪನೆಯಂತೆ ಅಷ್ಟೊಂದು ಅಯುಕ್ತ ವಾಗಲಾರದೆಂದೆನಿಸುತ್ತದೆ. (ಮನುಷ್ಯಸದೃಶಪ್ರಾಣಿಯ ಉತ್ಪತ್ತಿಯು ೫೦-೬೦ಲಕ್ಷ ವರ್ಷ ಪೂರ್ವದಲ್ಲಾಗಿತ್ತೆಂದು ಮನ್ನಿಸುವ ಶಾಸ್ತ್ರಜ್ಞ

ರಿದ್ದಾರೆಂದು ಇಲ್ಲಿ ಹೇಳಬೇಕಾಗಿದೆ.) ಈ ಮನುಷ್ಯಸದೃಶಪ್ರಾಣಿಯು ಈಗಿನ ಸುಧಾರಿಸಿದ ಮನುಷ್ಯನಿಗಿಂತ ಶರೀರ, ಮಿದುಳಿನ ರಚನೆಯಲ್ಲಿಯೂ ಬಹಳಷ್ಟು ಕಡಿಮೆಯುವನಿದ್ದನೆಂದು ಹಾಯ್‌ಡೆಲ್‌ಬರ್ಗ ಅಥವಾ ನಿಆಂಡರ್‌ಥಾಲ್ ಮೊದಲಾದ ಸ್ಥಳಗಳಲ್ಲಿ ದೊರೆತ ಇಂಥ ಪ್ರಾಣಿಗಳ ಎಲುವುಗಳ ಮೇಲಿಂದ ಹೇಳಬಹುದಾಗಿದೆ! ನಾಲ್ಕನೆಯ ಹಿಮಕಾಲ ಮುಗಿದ ಮೇಲೆ ಅಂದರೆ ೪೦ ಸಾವಿರ ವರ್ಷಗಳಮೊದಲು ಯುರೋಪ ದಲ್ಲಿ ಈಗಿನಂಥ ಮನುಷ್ಯಜಾತಿಯು ದಕ್ಷಿಣದಿಂದ ಪ್ರವೇಶಮಾಡಿತು. ಅದಕ್ಕೂ ಮೊದಲು ೧೦, ೨೦ ಸಾವಿರ ವರ್ಷವೆಂದರೆ ಇಂದಿನಿಂದ ೫೦, ೬೦ ಸಾವಿರ ವರ್ಷಗಳ ಮೊದಲು ಜಗತ್ತಿನ ಮೇಲೆ ಎಲ್ಲಿಯಾದರೂ ಈಗಿ ನಂತಹ ಮನುಷ್ಯಜಾತಿಯು ಉಂಟಾಗಿರಲಿಕ್ಕೆ ಸಾಕು. ಭೂಗರ್ಭದಲ್ಲಿ ಸಿಕ್ಕ ಮನುಷ್ಯನಿರ್ಮಿತವಸ್ತುಗಳಿಂದ ಪುರಾತನ ಮಾನವೀಯ ಸಂಸ್ಕೃತಿಯ ಇತಿಹಾಸದಲ್ಲಿ ಶಾಸ್ತ್ರಜ್ಞರು ಕೆಲವು ಭಾಗಗಳನ್ನು ಮಾಡಿದ್ದಾರೆ. ಅವುಗಳ ಸಾಧಾರಣ ವಿವರಣೆಯನ್ನು ಇಲ್ಲಿಕೊಡಲಾಗುವದು.

**೧ ಪುರಾಣಪಾಷಾಣಯುಗ**

ಇದರಲ್ಲಿ ಎರಡು ವಿಭಾಗಗಳನ್ನು ಕಲ್ಪಿಸಿದ್ದಾರೆ. ಮನಷ್ಯಸದೃಶ ಪ್ರಾಣಿಯ ಉತ್ಪತ್ತಿಯಿಂದ ನಿಜವಾದ ಮನುಷ್ಯಜಾತಿಯ ಉದಯವಾ ಗುವ ಕಾಲವು ಮೊದಲನೆ ವಿಭಾಗದಲ್ಲಿ ಬರುತ್ತದೆ. ಈ ಕಾಲವು ಎಷ್ಟೋ ಲಕ್ಷ ವರ್ಷಗಳದಿದ್ದು ಅದರಲ್ಲಿ ಮನುಷ್ಯನ ಪ್ರಗತಿಯು ಬಹಳ ಕಡಿಮೆ ಯಾಗಿದೆ. ಮನುಷ್ಯನು ಕಲ್ಲಿನ ಆಯುಧಗಳನ್ನು ಬರಬರುತ್ತಾ ನಯ ವಾಗಿ ಮಾಡತೊಡಗಿದ್ದನು. ಸತ್ತ ಮನುಷ್ಯನನ್ನು ಸಮಾರಂಭದಿಂದ ಹುಗಿದ ಅವಶೇಷಗಳು ದೊರೆತಿವೆ. ನಿಜವಾದ ಮನುಷ್ಯನ ಉದಯದಿಂದ ಎರಡನೆಯ ವಿಭಾಗವು ಆರಂಭವಾಗುತ್ತದೆ. ಕಲಾಕೌಶಲ್ಯಗಳ ಈಕಾಲದಲ್ಲಿ ಪ್ರಗತಿಯು ಬಹಳಾಯಿತು. ಎಲುವಿನ ಸೂಜಿ, ಚಮಚೆ ಮೊದಲಾದ ಒಡವೆಗಳು ಮಾಡಲ್ಪಟ್ಟಿದ್ದವು. ಚಿತ್ರಕಲೆಯ ಉತ್ಕೃಷ್ಟ ಮಾದರಿಗಳೂ ದೊರೆತಿವೆ.

**೨ ಮಧ್ಯಪಾಷಾಣಯುಗ**

ಈ ಯುಗದಲ್ಲಿ ಎರಡನೆಯ ತರಗತಿಯ ವಂಶವು ಯುರೋಪ

ದಲ್ಲಿತ್ತು. ಹಿಂದಾದ ಪ್ರಗತಿಯೂ ಕುಗ್ಗಿತು. ಆದೇಕೆ ಕೆಲವೊಂದು ಪರಾಗತಿಯೂ ಆಗಿತ್ತು.

**೩ ನವಪಾಷಾಣಯುಗ**

ಇದು ಯುರೋಪದಲ್ಲಿ ೧೦, ೧೨ ಸಾಪಿರ ವರ್ಷಗಳ ಮೊದಲು ಆರಂಭವಾಯಿತು. ಉಳಿದ ಕಡೆ ಇದಕ್ಕೂ ಮೊದಲು ಎಷ್ಟೋ ವರ್ಷಗಳ ಹಿಂದೆ ಆರಂಭವಾಗಿರಲಿಕ್ಕೇ ಬೇಕು. ಮಣ್ಣಿನ ಪಾತ್ರೆ, ಪರ್ಣಕುಟೀರಗಳು, ದನಕರುಗಳನ್ನು ಸಾಕುವದು, ಒಕ್ಕಲತನ ಮಾಡುವದು, ಅನ್ನ ಬೇಯಿಸಿ ತಿನ್ನುವದು ಮೊದಲಾದ ಸುಧಾರಣೆಯಾಗಿದ್ದವು.

**೪ ತಾಮ್ರಯುಗ**

ಸುಮಾರಾಗಿ ಇ. ಸ. ಪೂ. ೪೦೦೦ ವರ್ಷದಂದಿನಿಂದ ಮುಂದೆ. ಧಾತುಗಳ ಉಪಯೋಗ. ಉಳಿದೆಲ್ಲವುಗಳಲ್ಲಿ ಸುಧಾರಣೆ.

**೫ ಲೋಹಯುಗ**

ಇ. ಸ. ಪೂ. ೧೫೦೦ ರ ಮುಂದೆ. ನಿಜವಾದ ಮಾನವಜಾತಿಯು ಉದಯವಾಗುವ ವರೆಗಿನ ಸಾಧಾರಣ ಇತಿಹಾಸವನ್ನು ಮೇಲೆ ಕೊಟ್ಟ ಯುಗದ ಹೆಸರು ಮತ್ತು ಉಳಿದ ಶಾಸ್ತ್ರೀಯ ಪರಿಭಾಷೆಗಳನ್ನು ಬಿಟ್ಟು ಹಿಂದೆ ಎರಡನೇ ಪ್ರಕರಣದಲ್ಲಿ ಕೊಟ್ಟಿದೆ. ಕಾಲವನ್ನು ನಿಶ್ಚಯಿಸುವ ವಿಷಯದಲ್ಲಿ ಶಾಸ್ತ್ರಜ್ಞರಲ್ಲಿ ಬಹಳ ಮತಭೇದಗಳಿದ್ದುದು ಕಂಡುಬರುತ್ತದೆ. ಪ್ರಸ್ತುತ ಲೇಖಕನು ಸಯುಕ್ತಿಕವೆನಿಸಿದ ಕಾಲವನ್ನು ಸ್ವೀಕರಿಸಿದ್ದಾನೆ.

೨

ಪುರಾಣವಸ್ತುಸಂಶೋಧನದ ವಿಷಯದಲ್ಲಿ ನಮ್ಮ ಜನರಿಂದ ಸಾಕಷ್ಟು ಕೆಲಸವಾಗುತ್ತಲಿದೆ. ಮತ್ತು ಸರಕಾರದ ಲಕ್ಷ್ಯವಾದರೂ ಅತ್ತಕಡೆಗೆ ಎಳೆದಿದೆ. ಹಿಂದುಸ್ಥಾನದಲ್ಲಿ ಆಗುತ್ತಿರುವ ಎಲ್ಲ ಸಂಶೋಧನೆಗಳು ಉತ್ತರೇತಿಹಾಸದ ಕಾಲದ್ದಿದೆ. ಅಶೋಕ, ಗುಪ್ತಸಾಮ್ರಾಟ ಮತ್ತು ಅನೇಕ ರಾಜರ ಶಿಲಾಲೇಖ, ತಾಮ್ರಪಟ, ನಾಣ್ಯ, ಸ್ತಂಭ, ಸ್ತೂಪ, ಗುಹೆಗಳು ಮೊದಲಾದವುಗಳ ಸಂಶೋಧನವಾಗಿದ್ದು ಅದರಿಂದ ಭಾರತ ಇತಿಹಾಸದ ಮೇಲೆ ಅಪೂರ್ವ ಪ್ರಕಾಶ ಬಿದ್ದಿದೆ. ಮೊಹೆಂಜೋ

ದಾರೋ, ಹರಾಪಾ ಮೊದಲಾದ ಸ್ಥಳಗಳಲ್ಲಾದ ಶೋಧದಿಂದ ಪುರಾಣೇತಿಹಾಸದ ಮಾರ್ಗವು ತೆರೆಯಲ್ಪಟ್ಟಿತು. ಮೊದಲು ಈ ಸಂಶೋಧನ ಕ್ಷೇತ್ರದಲ್ಲಿ ಯುರೋಪಿಯನ್ ವಿದ್ವಾಂಸರ ಸಂಖ್ಯೆಯು ಹೆಚ್ಚಿಗಿತ್ತು. ಈಗ ಹಿಂದೀ ಎಷ್ಟೋ ವಿದ್ವಾಂಸರೂ ಬೆಳಗಹತ್ತಿದ್ದಾರೆ. ಆದರೂ ಇದಕ್ಕೂ ಹೆಚ್ಚಿನ ಪ್ರಯತ್ನವು ನಮ್ಮ ಕಡೆಯಿಂದ ಆಗಲೇಬೇಕಾಗಿದೆ.

ಸರಕಾರವು ಈ ಕೆಲಸಕ್ಕಾಗಿ ಪುರಾಣವಸ್ತುಸಂಶೋಧನವೆಂಬ ಸ್ವತಂತ್ರ ಖಾತೆಯನ್ನು ಏರ್ಪಡಿಸಿದ್ದಾರೆ. ೧೮೭೦ ರಲ್ಲಿ ಪುರಾಣವಸ್ತು ನಿರೀಕ್ಷಣಕ್ಕಾಗಿ ಜನರಲ್ ಕನಿಂಗಹಾಮ್‌ನನ್ನು ಹಿಂದುಸ್ತಾನ ಸರಕಾರವು ನಿಯಮಿಸಿಕೊಂಡಿದ್ದಿತು. ಅವನು ೩ ವರ್ಷವಿದ್ದನು. ಆಮೇಲೆ ಕೆಲವು ಯೋಜನೆಗಳು ಹೊರಬಿದ್ದವು. ಆದರೆ ಏನೂ ಪ್ರಯೋಜನವಾಗಲಿಲ್ಲ. ಮುಂದೆ ಕರ್ಝನ್ ಸಾಹೇಬನು ಈ ಪ್ರಶ್ನೆಯನ್ನು ಜೋರಿನಿಂದ ತಲೆಯಲ್ಲಿ ತೆಗೆದುಕೊಂಡನು. ೧೯೦೪ ರಲ್ಲಿ ಪುರಾಣವಸ್ತು ಸಂಶೋಧನೆಯು ಕಾನೂನಾಗಿ ಅದರಂತೆ ಆ ಖಾತೆಯು ನಿರ್ಮಾಣವಾಯಿತು. ಈ ಕೆಲಸಕ್ಕಾಗಿ ಹಿಂದುಸ್ತಾನದಲ್ಲಿ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಮಧ್ಯ, ಬ್ರಹ್ಮದೇಶ, ಮತ್ತು ಸೀಮಾಂತರ ಹೀಗೆ ೭ ವಿಭಾಗಗಳನ್ನು ಮಾಡಿ, ಅವುಗಳ ಮೇಲೆ ದೊಡ್ಡ ಸಂಬಳದ ಒಬ್ಬೊಬ್ಬ ಅಧಿಕಾರಿಯನ್ನು ನಿಯಮಿಸಲಾಯಿತು. ಮೇಲಿನ ಅಧಿಕಾರಿಯೆಂದು 'ಡಾಯರೆಕ್ಟರ ಜನರಲ್ ಆಫ್ ಆರ್ಕಿಯಾಲಜಿ' ಎಂಬ ಜಾಗೆಯನ್ನು ಮಾಡಿ ಆ ಜಾಗೆಯ ಮೇಲೆ ಸರ್ ಜಾನ್ ಮಾರ್ಶಲ್ ಎಂಬವರು ಅಧಿಕಾರಿಗಳಾದರು. ಮುಖ್ಯವಾಗಿ ಅವರ ನೇತೃತ್ವದಲ್ಲಿಯೇ ಸಿಂಧು ಸಂಸ್ಕೃತಿಯ ಉತ್ಖನನವು ನಡೆಯಿತು. ಹೈದರಾಬಾದ, ಮೈಸೂರಗಳಂಥ ದೊಡ್ಡ ಸಂಸ್ಥಾನಗಳಲ್ಲಿ ಪುರಾಣವಸ್ತುಸಂಶೋಧನದ ಖಾತೆಗಳು ಏರ್ಪಟ್ಟಿವೆ. ಮೈಸೂರ ಸಂಸ್ಥಾನದ ಪುರಾಣವಸ್ತುಸಂಶೋಧನ ಖಾತೆಯ ಮುಖ್ಯಾಧಿಕಾರಿಗಳಾದ ಡಾ. ಎಂ. ಎಚ್. ಕೃಷ್ಣ ಇವರು ಚಿತ್ರದುರ್ಗ ಜಿಲ್ಹೆಯಲ್ಲಿಎರಡು-ಮೂರು ಸ್ಥಳಗಳಲ್ಲಿ ಅಗಿಸುತ್ತಿರುವಾಗ ಪಾಷಾಣ ಹಾಗು ಲೋಹಯುಗದಲ್ಲಿಯ ಚಂದ್ರವಳ್ಳಿ ಮೊಲಾದ ಪಟ್ಟಣ

ಗಳ ಶೋಧವಾಗಿ ಪ್ರಸಿದ್ಧವಾಗಿದೆ. ಮೊಹೆಂಜೊದಾರೋದಂಥ ಯಾವ ದಾದರೊಂದು ಎರಡನೆಯ ಸಂಸ್ಕೃತಿಯು ಈ ಶೋಧದಿಂದ ಬೆಳಕಿಗೆ ಬರಬಾರದೇಕೆ? ಇತ್ತೀಚೆ ಮುಂಬೈ ಸರಕಾರದವರೂ ಧಾರವಾಡದಲ್ಲಿ ಕನ್ನಡ ಸಂಶೋಧನೆಯೆಂಬ ಖಾತೆಯನ್ನು ಏರ್ಪಡಿಸಿ ಕೆಲಸ ಪ್ರಾರಂಭಿಸಿದ್ದಾರೆ.

**ಸಮಾರೋಪ ಮತ್ತು ಇತ್ಯರ್ಥ**

ಜ್ಞಾನದ ಸಾರಭೂತವಾದ ಶಾಸ್ತ್ರಗಳಲ್ಲಿ ಕೆಲವೊಂದು ಪ್ರಮುಖ ಶಾಸ್ತ್ರಗಳ ವಿವೇಚನೆಯನ್ನು ಈವರೆಗೆ ಅಲ್ಪ ಪ್ರಮಾಣದಿಂದ ಮಾಡಿದ್ದಾಯಿತು. ಆದರೂ ಅದರಿಂದ ಶಾಸ್ತ್ರಗಳ ಅಪರಂಪಾರ ವಿಸ್ತಾರದ ಅಸ್ಪಷ್ಟ ಕಲ್ಪನೆಯಾದರೂ ವಾಚಕರಿಗೆ ಆಗದಿರದು. ಬೇರೆ ಬೇರೆ ಶಾಸ್ತ್ರತತ್ವಗಳ ಒಳ್ಳೇ ಜ್ಞಾನವಾಗಬೇಕಾದರೆ ಆ ಶಾಸ್ತ್ರಗಳ ಮೇಲೆ ಅನೇಕ ಸ್ವತಂತ್ರ ಪುಸ್ತಕಗಳು ಪ್ರಕಟವಾಗಬೇಕು. ಶಾಸ್ತ್ರಗಳ ಪ್ರಸಾರವು ಎಷ್ಟು ಪ್ರಚಂಡ ಮತ್ತು ಭವ್ಯವಿದೆ; ಅದರ ಸ್ವರೂಪವು ನಮಗನಿಸುವಷ್ಟು ರುಕ್ಷ ಮತ್ತು ಕ್ಲಿಷ್ಟವಿಲ್ಲದೆ ನಿಜವಾಗಿಯೂ ಅತ್ಯಂತ ಮನೋರಂಜಕವೂ ಉದ್ಬೋಧಕವೂ ಹೇಗಿದೆ ಮತ್ತು ಶಾಸ್ತ್ರಜ್ಞಾನವನ್ನು ಮಾಡಿಕೊಳ್ಳುವ ಆವಶ್ಯಕತೆಯು ಪ್ರತಿಯೊಬ್ಬರಿಗೆ ಈಗಿನ ಕಾಲದಲ್ಲಿದೆಯೆಂಬುದನ್ನು ಹೇಳುವದಕ್ಕಾಗಿ ಇಲ್ಲಿ ಶಾಸ್ತ್ರಗಳ ರೂಪರೇಷೆಯನ್ನು ನಿರೂಪಿಸುವ ಯತ್ನಮಾಡಿದೆ. ಈ ಯೋಗದಿಂದ ವಾಚಕರ ಮನಸ್ಸಿನಲ್ಲಿ ಕುತೂಹಲಬುದ್ಧಿಯು ಜಾಗ್ರತವಾಗಿ ಶಾಸ್ತ್ರಜ್ಞಾನವನ್ನು ಹೊರಕಿಸುವ ಆವಶ್ಯಕತೆಯು ವಾಚಕರಲ್ಲುಂಟಾದರೆ ಈ ಪ್ರಯತ್ನವು ಸಫಲವಾದೀತೆಂದು ಲೇಖಕನಿಗೆ ಅನಿಸುವದು.

ವಿದ್ಯೆ, ಕಲೆ, ವಾಙ್ಮಯ, ಇತಿಹಾಸ ಮೊದಲಾದ ಶಾಖೆಗಳೂ ಮಹತ್ವವಿವೆ. ಆದರೂ ಶಾಸ್ತ್ರಜ್ಞಾನದ ಮಹತ್ವವು ಹೆಚ್ಚಿಗಿದೆಯೆಂಬುದನ್ನು ಭಾರತವಾಸೀಯರು ಲಕ್ಷ್ಯದಲ್ಲಿಡುವದು ಆವಶ್ಯವಿದೆ. ಶಾಸ್ತ್ರಾಭ್ಯಾಸವು ದೊಡ್ಡ ದೊಡ್ಡ ಕಾಲೇಜಗಳಲ್ಲಿ ಆಧುನಿಕ ಉಪಕರಣಗಳಿಂದ ಸುಸಜ್ಜಿತವಾದ ಪ್ರಯೋಗಶಾಲೆಯಲ್ಲಿ ನಡೆಯುತ್ತಿದೆ; ಹಾಗೆ ಅದು ಶಕ್ಯವಿದೆ ಎಂದು ಯಾರಾದರೂ ಭಾವಿಸಿದರೆ ಅದು ಸರಿಯಾಗಲಾರದು.

ಆಧುನಿಕ ಉಪಕರಣಗಳು, ಪರಿಣತ ಪ್ರಾಧ್ಯಾಪಕರ ನೆರವು ಆನುಷಂಗಿಕ ಸಂಗತಿಯಾದ್ದರಿಂದ ಕಲಿಯಲು ಸುಲಭವಾಗಬಹುದು. ಆದರೆ ಜ್ಞಾನ ದೊರಕಿಸುವ ಇಚ್ಛೆಯು, ದುರ್ದಮ ಮಹತ್ವಾಕಾಂಕ್ಷೆಯು, ಸಂಪೂರ್ಣವಾಗಿ ಅದಕ್ಕೆ ಅಂಟಿಕೊಂಡಿರುವದು ಮೊದಲಾದವುಗಳು ಜ್ಞಾನ ಸಾಧನಕಾರ್ಯದಲ್ಲಿ ನಿಜವಾಗಿಯೂ ಮಹತ್ವವಿವೆ. ಇವಿದ್ದರೆ ಶಾಸ್ತ್ರಾಭ್ಯಾಸವು ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಮಾಡಬರುವದು. ಬಾಹ್ಯ ಸಾಧನಗಳ ಸಂಗ್ರಹವನ್ನೂ ಮಾಡಿಕೊಳ್ಳಬಹುದು. ಈ ವರೆಗಾದ ಎಷ್ಟೋ ಶಾಸ್ತ್ರಜ್ಞರ ಜೀವನವೃತ್ತಾಂತದಿಂದ ತಿಳಿದುಬರುವದೇನಂದರೆ- ಶಾಸ್ತ್ರಜ್ಞನಾಗಲು ದೊಡ್ಡ ಸಂಪತ್ತಿಯು ಅಥವಾ ವಿಶ್ವವಿದ್ಯಾಲಯದ ಶಿಕ್ಷಣವು ಅವಶ್ಯವಾಗಿರಬೇಕೆಂಬ ನಿಯಮವಿಲ್ಲ. ದೊಡ್ಡ ದೊಡ್ಡ ಶಾಸ್ತ್ರಜ್ಞರಿಗೆ ವಿದ್ಯಾಲಯದ ಶಿಕ್ಷಣವಿಲ್ಲದ ಮೂಲಕ ತಡೆಯಾಗಲಿಲ್ಲ; ದುಡ್ಡಿನಿಂದಲೂ ಅಥವಾ ಸಾಧನ ಸಾಮುಗ್ರಿಗಳಿಲ್ಲೆಂದೂ ಅವರು ಸುಮ್ಮನೆ ಕುಳ್ಳಿರಲಿಲ್ಲ. ಜಗತ್ತಿನ ರಾಜಕೀಯ ಇತಿಹಾಸದಲ್ಲಿ ಪ್ಯಾದೆಯೇ ಫರ್ಜಿಯಾದ ಉದಾಹರಣೆಗಳಿವೆ. ನೆಪೋಲಿಯನ್, ಅಬ್ರಾಹಿಮ್- ಲಿಂಕನ್, ಬಾಳಾಜಿ ವಿಶ್ವನಾಥ, ಹೈದರಅಲ್ಲಿ, ರ್‍ಯಾಮಸೆ ಮೆಕ್‌ಡೊನಾಲ್ಡ, ಸ್ಟ್ಯಾಲಿನ್, ಹಿಟ್ಲರ್ ಮೊದಲಾದ ಉದಾಹರಣೆಗಳು ಕೇವಲ ಕತೃತ್ವಶಕ್ತಿಯ ಮೇಲೆ ಹೀನಸ್ಥಿತಿಯಿಂದ ಅತ್ಯಂತ ಶ್ರೇಷ್ಠ ಪದವಿಗೇರಿದುದನ್ನು ತೋರಿಸುತ್ತವೆ. ಆದರೆ ಈ ಪಾಠವನ್ನು ಸಾತ್ವಿಕ ರೀತಿಯಿಂದ ಕಲಿತ ಉದಾಹರಣೆಗಳು ಜಗತ್ತಿನ ಶಾಸ್ತ್ರೀಯ ಇತಿಹಾಸದಲ್ಲಿ ಕಡಿಮೆಯಿರುತ್ತವೆಂತಲ್ಲ. ಪ್ರಖ್ಯಾತ ಜರ್ಮನ್ ಜ್ಯೋತಿಷಿಯಾದ ಕೆಪ್ಲರ್‌ನ ಬಾಲ್ಯವು ಅತ್ಯಂತ ಹೃದಯವನ್ನು ಕರಗಿಸುವಂಥ ಹದಿದೆ. ಅವನ ತಂದೆ ಹೇಗೊ ಸಂಸಾರವನ್ನು ಸಾಗಿಸುವ ಖಾನಾವಳಿಯವನು; ತಾಯಿಯು ಬಹು ಕರ್ಕಸಿಯು. ಪಾಪ! ಕೆಪ್ಲರ್‌ನಿಗೆ ಮುಸುರೆ ಗಲಬರಿಸುವ ಕೆಲಸವನ್ನು ಆ ಖಾನಾವಳಿಯಲ್ಲಿ ಮಾಡಬೇಕಾಗುತ್ತಿತ್ತು. ಮುಂದೆ ಅವನ ಅಲೌಕಿಕ ಬುದ್ಧಿಯನ್ನು ನೋಡಿ ಅವನ ಆಪ್ತರಲ್ಲೊಬ್ಬರು ಅವನನ್ನು ಧಾರ್ಮಿಕಶಿಕ್ಷಣ ಕೊಡಿಸುವದಕ್ಕಾಗಿ ಶಾಲೆಗೆ ಕಳಿಸಿದರು. ಆದರೆ ಅವನು ಅದನ್ನು ದುರ್ಲಕ್ಷಿಸಿ ಗಣಿತ,

ಜ್ಯೋತಿಷಗಳನ್ನು ಸ್ವಂತವಾಗಿ ಅಭ್ಯಸಿಸಿದನು. ವಿಖ್ಯಾತ ಇಂಗ್ಲಿಷ್ ಶಾಸ್ತ್ರಜ್ಞನಾದ ಸರ್ ಹಂಫ್ರಿಡೇವ್ಹಿಯುಂತೂ ತಾರುಣ್ಯದಲ್ಲಿ ಹಳ್ಳಿಯಲ್ಲಿರುವ ಒಬ್ಬ ಡಾಕ್ಟರಸ ಸೀಸೆಗಳನ್ನು ತೊಳೆಯುವ ಕಂಪೌಂಡರನಾಗಿದ್ದನು. ಅಲ್ಲಿಯೇ ಅವನು ಶಾಸ್ತ್ರಾಧ್ಯಯನವಮಾಡಿ ಹೊಸ ಪ್ರಯೋಗಗಳನ್ನು ಮಾಡಲಾರಂಭಿಸಿದನು. ಮಾಯಾಕೇಲ್ ಫೆರಡೆಯ ಸಂಗತಿಯು ಇದಕ್ಕೂ ಅದ್ಭುತ ಮತ್ತು ಸ್ಫೂರ್ತಿದಾಯಕವಿದೆ. ಅವನು ಒಬ್ಬ ಕಂಬಾರನ ಮಗನು; ತಂದೆಗೆ ಹೀನಸ್ಥಿತಿ ಬಂದು ೫ ವರ್ಷದ ಮಾಯಕೇಲನಿಗೆ ಒಂದು ಬ್ರೆಡ್ಡಿನಮೇಲೆ ಎಂಟೆಂಟು ದಿವಸಗಳನ್ನು ಕಳೆಯಬೇಕಾಗುತ್ತಿತ್ತು! ಅವನ ಅದ್ವಿತೀಯ ಶೋಧದಿಂದ ಈಗ ವಿದ್ಯುಲ್ಲತೆಯು ನಮ್ಮ ಬೇಕಾದ ಕೆಲಸಕ್ಕೆ ಸಾನುಕೂಲವಿದ್ದು, ಅದರ ನಿರ್ಮಾಪಕನಿಗೆ ಚಿಕ್ಕತನದಲ್ಲಿ ತಿನ್ನಲು ಹೊಟ್ಟೆಗೆ ಸಿಗುತ್ತಿದ್ದಿಲ್ಲವೆಂದ ಮೇಲೆ ವಿದ್ಯಾಲಯದ ಶಿಕ್ಷಣ ಮತ್ತು ಸಾಧನ ಸಾಮಗ್ರಿಗಳ ಮಾತನ್ನೇಕೆ ತೆಗೆಯಬೇಕು? ಮುಂದೆ ಫೆರಡೆಯು ತುಸು ದೊಡ್ಡವನಾದ ಮೇಲೆ ಒಬ್ಬ ಬಾಯಿಂಡರನಕಡೆಗೆ ಉಮೇದವಾರನಾಗಿ ಪುಸ್ತಕಗಳನ್ನು ಹೊಲಿಯುವದರ ಜೊತೆಗೆ ಶಾಸ್ತ್ರೀಯ ಪುಸ್ತಕಗಳನ್ನು ಒಳ್ಳೇ ಉತ್ಸುಕತೆಯಿಂದ ಓದಿ ವಿದ್ಯಾಲಯದ ವಿದ್ಯಾರ್ಥಿಗಳಿಗಿಂತ ಹೆಚ್ಚು ಜ್ಞಾನಸಂಪನ್ನನಾದ. ಅವನ ಶಾಸ್ತ್ರಜಿಜ್ಞಾಸೆಯು, ಮಾರ್ಮಿಕ ಅಧ್ಯಯನವು ಡೇವ್ಹಿಯ ಕಣ್ಣಿಗೆ ಬಿದ್ದು ಅವನು ಅವನನ್ನು ತನ್ನ ಪ್ರಯೋಗಶಾಲೆಯಲ್ಲಿ ಕೆಲಸಕ್ಕೆ ತೆಗೆದುಕೊಂಡನು. ಆಯಿತು, ಬಿಸಿಲಲ್ಲಿ ಬಳಲುವ ಮುಸಳೆಯನ್ನು ನೀರಲ್ಲಿ ಬಿಟ್ಟಂತೆ ಫೆರಡೆಯು ತನ್ನ ಅದ್ವಿತೀಯ ಸಂಶೋಧನಕ್ಕಾರಂಭಿಸಿದನು. ವಿಕಾಸವಾದದ ಪ್ರಣೇತನಾದ ಲಾಮಾರ್ಕನು ಮೊದಲು ಶಿಪಾಯಿಯಾಗಿದ್ದನು. ಮುಂದೆ ಯುದ್ಧದಲ್ಲಿ ಗಾಯಹೊಂದಿ ತಿರುಗಿದಬಳಿಕ ಅವನು ಸ್ವತಂತ್ರರೀತಿಯಿಂದ ವನಸ್ಪತಿಯ ಅಭ್ಯಾಸದಲ್ಲಿ ತೊಡಗಿದನು. ೫ ವರ್ಷಗಳನ್ನು ವಿಪನ್ನಾವಸ್ಥೆಯಲ್ಲಿ ನೂಕಿದ ಬಳಿಕ "ಫ್ರಾನ್ಸದಲ್ಲಿಯ ವನಸ್ಪತಿ" ಎಂಬ ಅವನ ಗ್ರಂಥವು ಪ್ರಸಿದ್ಧವಾದಾಗ ಬೇರೆ ಶಾಸ್ತ್ರಜ್ಞರ ಲಕ್ಷವು ಅವನ ಕಡೆಗೆ ಎಳೆಯಲ್ಪಟ್ಟು ಅವನಿಗೆ ಒಳ್ಳೆಯದಿನಗಳು ಬಂದವು. ಹೀಗೆ ಒಂದೇ, ಎರಡೇ ಎಷ್ಟೋ ಉದಾಹರ

ಣೆಗಳಿವೆ. ಶಾಸ್ತ್ರಜ್ಞರ ಚರಿತ್ರಮಾಲಿಕೆಯು ಇಂಥ ಉದಾಹರಣೆಗಳಿಂದಲೇ ತುಂಬಿದೆ. ಹಿಂದುಸ್ಥಾನಲ್ಲಿ ಮನೋವೇಧಕವಾದ ಉದಾಹರಣೆಯೆಂದರೆ ಪ್ರಸಿದ್ಧ ಗಣಿತಜ್ಞನಾದ ರಾಮಾನುಜಂ ಇವನದು. ಈ ಬಡ ಪಾಪಿಯು ಪದವೀಧರನಿರದೆ ಕಚೇರಿಯೊಂದರಲ್ಲಿ ಸಾದಾ ಕಾರಕೂನನಿದ್ದನು. ಆದರೆ ಅವನ ಬುದ್ಧಿಮತ್ತೆಯು ಎಂಥದು! ಯುರೋಪದಲ್ಲಿಯ ನಾನೀ ಎನ್ನು ವಂಥ ಪಂಡಿತರಿಗೆ ಬಿಡಿಸಲಸದಳವಾದ ಗಣಿತದ ಕೂಟ ಪ್ರಶ್ನೆಗಳನ್ನು ಲೀಲಾಜಾಲವಾಗಿ ಬಿಡಿಸುತ್ತಿದ್ದನು. ಇನ್ನೊಂದು ಉದಾಹರಣೆಯೆಂದರೆ ಶಂಕರ ಬಾಳಕೃಷ್ಣ ದೀಕ್ಷಿತ ಇವರದು. ಇವರು ಶಾಲೆಯ ಶಿಕ್ಷಕರು. ಇವರು ಜ್ಯೋತಿಷ್ಯದ ಉತ್ಕೃಷ್ಟ ಅಭ್ಯಾಸಮಾಡಿ "ಭಾರತೀಯ ಜ್ಯೋತಿಷ್ಯಶಾಸ್ತ್ರದ ಇತಿಹಾಸ" ಎಂಬ ಪುಸ್ತಕವನ್ನು ಬರೆದು ಮರಾಠಿ ವಾಙ್ಮಯದಲ್ಲಿ ಅದ್ವಿತೀಯ ಸ್ಥಾನ ದೊರಕಿಸಿದ್ದಾರೆ. ಆದರೆ ಇದ ರಂತಹ ಪುಸ್ತಕವು ದೇಶೀಯ ಭಾಷೆಗಳಲ್ಲಾಗಲಿ, ಇಂಗ್ಲಿಷಿನಲ್ಲಾಗಲಿ ಇರುವದೋ ಇಲ್ಲವೋ ಸಂಶಯಾಸ್ಪದವಿದೆ.

ಈ ಎಲ್ಲ ಉದಾಹರಣೆಗಳಿಂದ ನಾವು ಏನಾದರೂ ಕಲಿತುಕೊಳ್ಳು ವಂತಿಲ್ಲವೇ? ಈಗ ನಾವು ಶಾಸ್ತ್ರಾಭ್ಯಾಸ ಮಾಡತೊಡಗಿನೆವೆಂದರೆ ಎಲ್ಲರೂ ಕೆಪ್ಲರ, ಡೇವ್ಹಿ, ಫೆರಡೆ, ಲಾಮಾರ್ಕ ಅಥವಾ ರಾಮಾನುಜಂ ಇವರಂತೆ ಆಗುವೆವೆಂದಲ್ಲ; ಆದರೆ ಪ್ರತಿಯೊಬ್ಬರು ದೊಡ್ಡ ಸಂಶೋ ಧಕರಾಗದಿದ್ದರೂ ಅನೇಕ ಶಾಸ್ತ್ರಗಳ ಸಾಮಾನ್ಯ ಜ್ಞಾನವನ್ನಾದರೂ ಗಳಿಸಿಕೊಳ್ಳಲು ಬಂದೇಬರುತ್ತದೆ. ಅಂಥವರಲ್ಲಿಯೇ ಯೋಗಾಯೋಗ ದಿಂದ ಒಬ್ಬಾನೊಬ್ಬ ಸಂಶೋಧಕನಾದರೂ ಎಂದಾದರೂ ಹೊರಡ ಬಹುದು. ಇದನ್ನು ಯಾರು ಹೇಳಬಲ್ಲರು! ಆದರೆ ನಾವೆಲ್ಲರು ಕೈಮು ಚ್ಚಿಕೊಂಡು ಕುಳಿತರೆ ಮಾತ್ರ ಏನೂ ಆಗುವದಿಲ್ಲ. ಪ್ರತಿಭಾಶಾಲಿ ಯಾದ ಮನುಷ್ಯನ ಪ್ರತಿಭೆಯು ಪ್ರಕಟವಾಗಲು ಅವಕಾಶ ದೊರೆ ಯಲಿಕ್ಕಿಲ್ಲ.

ಶಾಸ್ತ್ರಾಭ್ಯಾಸವು ಎಲ್ಲ ಕಡೆಗೂ ಯಾವಾಗ ಪ್ರಸಾರವಾಗು ವದೋ ಆಗ ಅವರಲ್ಲಿಯೇ ಪ್ರಥಮ ತರಗತಿಯ ಅನೇಕ ಶಾಸ್ತ್ರಜ್ಞರೂ, ಪ್ರತಿಭಾಶಾಲಿ ಸಂಶೋಧಕರೂ ನಿರ್ಮಾಣವಾಗಬಹುದು. ರಾಮಾ

ಸುಜಂ, ಜಗದೀಶಚಂದ್ರ ಬೋಸ, ಸಿ.ವ್ಹಿ. ರಾಮನ್, ಮೇಘನಾದ ಶಹ ಇವರಂಥವರು ಸ್ವಲ್ಪ ಜನರಾದರೂ ಪ್ರಥಮತರಗತಿ ಶಾಸ್ತ್ರಜ್ಞರು ಆಗಿರುವರು, ಮತ್ತು ಪ್ರತಿಕೂಲಪರಿಸ್ಥಿತಿಗೆ ಎದೆಗುಂದದೆ ಮುಂದೆ ಬಂದಿರುತ್ತಾರೆ. ಒಟ್ಟಿನಲ್ಲಿ ಜನಸಮಾಜದ ಜ್ಞಾನದ ದರ್ಜೆಯು ಬೆಳೆದರೆ ಅವರಲ್ಲಿಂದ ಅಭ್ಯಾಸಕ, ತಜ್ಞ, ಸಂಶೋಧಕ ಮೊದಲಾದವರು ಹೆಚ್ಚುಹೆಚ್ಚಾಗಿ ಹುಟ್ಟುವರೆಂಬುವದರಲ್ಲಿ ಯಾವ ಸಂಶಯವೂ ಇಲ್ಲ.

ಹೀಗೆ ಶಾಸ್ತ್ರಾಭ್ಯಾಸದ ವಿಷಯಕ್ಕೆ ನಮ್ಮಲ್ಲಿ ಅನೇಕ ತೊಂದರೆಗಳಿರುವದು ಸುಳ್ಳಲ್ಲ. ಪ್ರಯೋಗಶಾಲೆಯಿಲ್ಲ, ಅಲ್ಪ ಬೆಲೆಯಲ್ಲಿ ಸುಲಭವಾಗಿ ದೊರೆಯುವ ಉಪಕರಣಗಳಿಲ್ಲ, ಮತ್ತು ಎಲ್ಲಕ್ಕೂ ಮುಖ್ಯವಾಗಿ ಸ್ವಭಾಷೆಯಲ್ಲಿ ಇಂದಿನವರೆಗಿನ ಉಚ್ಚತರಗತಿಯ ಶಾಸ್ತ್ರೀಯ ಜ್ಞಾನದ ವಾಙ್ಮಯವಿಲ್ಲ. ಇವೆಲ್ಲ ತೊಂದರೆಗಳಿವೆ. ಈ ತೊಂದರೆಯೊಳಗಿಂದಲೇ ದಾರಿಯನ್ನು ತೆಗೆಯಬೇಕು. ಆದುದರಿಂದ ಮುಖ್ಯ ತೊಂದರೆಯು ಬಾಹ್ಯಪರಿಸ್ಥಿತಿಯದಿರದೆ ನಮ್ಮ ಮಾನಸಿಕ ಶೂನ್ಯತೆಯದೇ ಇದೆ. ನಮ್ಮಲ್ಲಿ ಜಿಜ್ಞಾಸೆ, ಉತ್ಸುಕತೆ, ಅಂಟಿಕೊಳ್ಳುವ ಬುದ್ಧಿ ಮೊದಲಾದವುಗಳಿಲ್ಲ. ನಮ್ಮಲ್ಲಿ ಶಾಸ್ತ್ರೀಯ ವಿಷಯದ ರುಚಿಹತ್ತಿದರೆ ಜಿಲ್ಹಾ ಸ್ಥಳದಲ್ಲಿ ಒಂದಾದರೂ ಶಾಸ್ತ್ರೀಯಚರ್ಚಾಮಂಡಳವನ್ನು ಸ್ಥಾಪಿಸಿ, ಸಭಾಸದರಿಂದ ವರ್ಗಣಿಯನ್ನು ಕೂಡಿಸಿ ತೀರ ಉಪಯುಕ್ತವಾದ ಶಾಸ್ತ್ರೀಯ ಪುಸ್ತಕಗಳ ಸಣ್ಣ ಗ್ರಂಥಾಲಯವನ್ನು ಏರ್ಪಡಿಸಲಿಕ್ಕೆ ಬಂದೀತು. ಕೆಲವೊಂದು ಉಪಕರಣಗಳನ್ನು ಸಂಗ್ರಹಿಸಲಾದೀತು ಅಥವಾ ಸ್ಥಾನಿಕ ಸ್ಕೂಲು ಅಥವಾ ಕಾಲೇಜದಲ್ಲಿರುವ ಉಪಕರಣಗಳ ಉಪಯೋಗವನ್ನು ತೆಗೆದುಕೊಳ್ಳಲು ಬಂದೀತು. ಮಾನಸಿಕ, ಸಾಮಾಜಿಕ, ಶಾಸ್ತ್ರದ ಅಭ್ಯಾಸಕ್ಕೆಂದೂ ಉಪಕರಣಗಳ ಅಗತ್ಯವಿಲ್ಲ. ತಾತ್ಪರ್ಯ ವಿಷ್ಟೇ—ಏನಾದರೂ ಮಾಡಬೇಕೆಂದು ಮನಸ್ಸಿನಲ್ಲಿ ತಳಮಳವಿದ್ದರೆ ಮುಂದಿನ ಮಾರ್ಗವು ಕಾಣುವದು. ಈ ತಳಮಳವು ಉತ್ಪನ್ನವಾಗಲಿ, ಜ್ಞಾನೋಪಾಸನೆಯು ಮುಖಾಂತರ ನವಭಾರತವನ್ನು ನಿರ್ಮಿಸಲು ನಡಕಟ್ಟೋಣ. ಹೀಗೆ ಇಷ್ಟು ಬಿನ್ನಹ ಮಾಡಿಕೊಂಡು ಈ ಬೆಳೆದ ಈ ಶಾಸ್ತ್ರ ವಿಭಾಗವನ್ನು ಮುಗಿಸುತ್ತೇನೆ.

## ಹನ್ನೊಂದನೆಯ ಮೆಟ್ಟಿಲು

**ಭಾರತೀಯರ ಜ್ಞಾನೋಪಾಸನೆ**

ಇಲ್ಲಿಯವರೆಗೆ ಈ ಪುಸ್ತಕದಲ್ಲಿ ಒಟ್ಟಾರೆ ಮಾನವಜಾತಿಯು ಮಾಡಿದ ಜ್ಞಾನೋಪಾಸನೆಯ ಸಂಕ್ಷಿಪ್ತ ಆಢಾವೆಯನ್ನು ತೆಗೆದಂತಾಯಿತು. ಭಾರತೀಯರ ಜ್ಞಾನೋಪಾಸನೆಯ ವಿಷಯದಲ್ಲಿ ಸ್ವತಂತ್ರ ನಾಲ್ಕು ಸಾಲುಗಳನ್ನು ಬರೆಯಬೇಕೆನಿಸಿದ್ದರಿಂದ ಇಲ್ಲಿಯವರೆಗೆ ಉಲ್ಲೇಖಿಸಲು ತಡೆಹಿಡಿಯಬೇಕಾಯಿತು. ಈಗ ಮಾತ್ರ ಭಾರತೀಯರ ಜ್ಞಾನೋಪಾಸನೆಯ ಪರಾಮರ್ಶೆಯನ್ನು ಸ್ವಲ್ಪದರಲ್ಲಿ ಮಾಡೋಣ.

ಈ ಕೆಲಸವು ಗಹನವೂ, ಸೂಕ್ಷ್ಮವೂ ಇದೆ. ಗಹನವಿರುವ ಕಾರಣವೆಂದರೆ, ವಿಷಯದ ವಿಸ್ತಾರವು ಅಪಾರವಿದ್ದು, ಅದರ ಸಂಶೋಧನವು ಆಗಬೇಕಾದಷ್ಟು ಆಗಿರುವದಿಲ್ಲ. ಬೇರೆ ಬೇರೆ ಜ್ಞಾನಶಾಖೆಗಳಲ್ಲಿ ಭಾರತೀಯರು ಮಾಡಿರುವ ಕಾರ್ಯವನ್ನು ಹೇಳುವ ಎಷ್ಟೋ ಪುಸ್ತಕಗಳಾಗಿರುವುದು ನಿಜ. ಆದರೆ ಅನೇಕ ಹಳೆಯ ಗ್ರಂಥಗಳಲ್ಲಿಯ ಸಂಗತಿಗಳನ್ನು ಕ್ರೋಢೀಕರಿಸಿ ಕೊಟ್ಟಿರುವರಲ್ಲದೆ ಈ ಗ್ರಂಥಗಳ ಮುಖಾಂತರವಾಗಿ ಹೆಚ್ಚಿನ ಕಾರ್ಯವಾಗಿರುವದಿಲ್ಲ. ಇನ್ನೂ ಎಷ್ಟೋ ಶಾಸ್ತ್ರಗಳ ಸಂಬಂಧವಾಗಿ ಸಂಶೋಧನ ಕಾರ್ಯವಾಗಬೇಕಾಗಿದೆ.

ಆದರೆ, ಈ ವಿಷಯವು ಗಹನವಿದ್ದಷ್ಟರ ಎಷ್ಟೋ ಪಟ್ಟು ಸೂಕ್ಷ್ಮತಮವಾಗಿಯೂ ಕುಳಿತಿರುವುದು. ಕಾರಣವೆಂದರೆ ಇದರಲ್ಲಿ ಭಾವನೆಯ ಸಂಬಂಧವು ಅಲ್ಲಲ್ಲಿ ಇಣಕುತ್ತದೆ. ಇಜಿಪ್ತ ಅಥವಾ ಬಾಬಿಲೋನಗಳ ಇತಿಹಾಸವನ್ನು ಬರೆಯುವದು ಬಲು ಸುಲಭ. ಯಾಕೆಂದರೆ, ಇಜಿಪ್ತಿಯನ್ ಅಥವಾ ಬಾಬಿಲೋನಿಯನ್ ಸಂಸ್ಕೃತಿಯ ಹಕ್ಕುದಾರರೆಂದು ಇಲ್ಲಿಯ ಜನರಾರೂ ಬಡಿದಾಡಲು ಸಿದ್ಧರಿರದ್ದರಿಂದ ಆ ದೇಶಗಳ ಬಗ್ಗೆ ಪಾಶ್ಚಾತ್ಯ

ಗ್ರಂಥಕಾರರ ಏಕಮುಖಗಳಾದ ಗ್ರಂಥಗಳನ್ನು ಓದಿ ನಮಗೆ ಸಹಜ ವಾಗಿ ಬರೆಯಲು ಬರುತ್ತದೆ. ಆದರೆ ಭಾರತೀಯ ಸಂಸ್ಕೃತಿಯ ಸಂಬಂಧದಲ್ಲಿ ಪಾಶ್ಚಾತ್ಯ ಪಂಡಿತರ ಸುಲ್ತಾನಿ ಅಧಿಕಾರವನ್ನು ಮನ್ನಿಸದೆ ಅವರೊಟನೆ ನಮ್ಮ ಭಾರತೀಯ ಪಂಡಿತರು ಸಮಾನಸ್ಕಂಧರಾಗಿ ಭುಜ ತಟ್ಟಿ ನಿಲ್ಲಬೇಕಾಗುವದರಿಂದ ಸಾಮಾನ್ಯ ಸಂಗ್ರಹಕ್ಷೇತ್ರದಲ್ಲಿ ಬಹು ಹೀನಸ್ಥಿತಿ ಪ್ರಾಪ್ತವಾಗಿದೆ. ಈ ಕ್ಷೇತ್ರದಲ್ಲಿ ಉಭಯ ಪಕ್ಷಗಳಲ್ಲಿಯೂ ಬಹುತರವಾಗಿ ವಾದಗ್ರಸ್ತವಿಷಯಗಳಿರುವದರಿಂದ ಇದಕ್ಕೆ ಏಕಮುಖ ತ್ವವು ಬಹಳ ಉಳಿಯಲಿಲ್ಲ. ಇನ್ನುಳಿದ ಸಂಗತಿಗಳು ವಾದಗ್ರಸ್ತವಿದ್ದರೂ ಈ ವಿಷಯದಲ್ಲಿ ಮಾತ್ರ ನಿಶ್ಚಿತವಿರುವದು: ಅಂದರೆ ಇ. ಸ. ೧೪೦೦ ರಿಂದ ಮುಂದೆ ಪಾಶ್ಚಾತ್ಯರು ಜ್ಞಾನಪ್ರಾಂತದಲ್ಲಿ ಯಾವ ಅತಿ ರಭಸವನ್ನು ಆರಂಭಿಸಿದರೋ ಅದು ಭಾರತೀಯರ ಕೈಯಿಂದಾಗಲಿಲ್ಲ. ಅಂದರೆ ಕಳೆದ ೫೦೦ ವರ್ಷಗಳಿಂದ ನಾವು ಒಂದೇಸವನೆ ಪಾಶ್ಚಾತ್ಯರಿಗಿಂತ ಹಿಂದೆ ಬಿದ್ದಿದ್ದೇವೆ; ಮತ್ತು ಇಂದಿಗೂ ಕೂಡ ನಮಗಿಂತ ಅವರ ಪ್ರಗತಿಯ ವೇಗವು ಎಷ್ಟೋ ಪಟ್ಟಿಗೆ ಹೆಚ್ಚಿಗಿರುವದರಿಂದ ಅವರ ಮತ್ತು ನಮ್ಮ ನಡುವಿನ ಅಂತರವು ಬೆಳೆಯುತ್ತಲೇ ಇದೆ. ಈ ಮಾತು, ಎಷ್ಟು ಸ್ಪಷ್ಟ, ನಿರ್ವಿವಾದವಿರುವದೋ ಅಷ್ಟೇ ಸರ್ವ ರಿಂದಲೂ ಮನ್ನಿಸಲ್ಪಟ್ಟಿದೆ. ಈ ನ್ಯೂನತೆಯನ್ನು ನಮ್ಮ ಭಾರತೀಯ ಪಂಡಿತರು ಗತವೈಭವದ ಮಹತಿಯನ್ನು ಹಾಡಿಕೊಂಡು ಸಮಾಧಾನ ಪಡುತ್ತಾರೆ. 'ನಿಮ್ಮ ಎಲ್ಲ ಶಾಸ್ತ್ರಜ್ಞಾನವು ಇತ್ತೀಚೆ ಒಂದೆರಡು ಶತಮಾನ ಹಿಂದಿನದು. ಅದಕ್ಕೂ ಮೊದಲು ನಾವು—ಭಾರತೀಯರು ನಿಮಗಿಂತ ಎಷ್ಟೋ ಪಟ್ಟು ಮುಂದಿದ್ದೆವು. ತತ್ವಜ್ಞಾನದಲ್ಲಷ್ಟೇ ಅಲ್ಲದೆ ವ್ಯಾವಹಾರಿಕ ಜ್ಞಾನದಲ್ಲಿಯೂ ನಾವು ಪರಿಣತಿಯನ್ನು ಹೊಂದಿದ್ದೆವು' ಎಂಬ ಪ್ರೌಢಿಮೆಯನ್ನು ಅನೇಕ ಭಾರತೀಯ ವಿದ್ವಾಂಸರು ಹೊಗಳಿಕೊಂಬುವದೂ ಉಂಟು. ಹೀಗೆ ಕೊಗಳಿಕೊಳ್ಳಲು ಅವರಿಗೆ ಒಳ್ಳೇ ಸಬಲವಾದ ಆಧಾರಗಳಿರುವದೇನು ಸುಳ್ಳಲ್ಲೆಂಬುದು ಸಂಶೋಧ ನದಿಂದ ನಿರ್ಣಯವಾಗಿದೆ. ಇದು ಐತಿಹಾಸಿಕ ಸತ್ಯವಿರುವದರಿಂದ ಪಾಶ್ಚಾತ್ಯ ಪಂಡಿತರು ಪ್ರತ್ಯಕ್ಷ ವಿರೋಧಿಸಲಾರದೆ "ಭಾರತೀಯರು

ಆ ಕಾಲದಲ್ಲಿ ಅಷ್ಟೊಂದು ಉತ್ಕರ್ಷಿತರಾಗಿದ್ದರೂ ಆ ಜ್ಞಾನವನ್ನು ಅವರು ಗ್ರೀಕರಿಂದ ತೆಗೆದುಕೊಂಡಿದ್ದರು. ಜ್ಯೋತಿಷ, ವೈದ್ಯಕ, ಶಿಲ್ಪಕಲೆ, ನಾಟ್ಯಕಲೆ ಮೊದಲಾದವುಗಳನ್ನು ಈ ಗ್ರೀಕರಿಂದಲೇ ಭಾರತೀಯರು ತೆಗೆದುಕೊಂಡು ಅದಕ್ಕೆ ತಮ್ಮ ವೇಷವನ್ನು ತೊಡಿಸಿದರು" ಎಂದು ಅವರು ಪ್ರತಿಪಾದಿಸಿ "ಒಟ್ಟಿನಲ್ಲಿ ಭಾರತೀಯರಾದ ನೀವು ಪರಪುಷ್ಟರಾಗಿ ಬಾಳುವವರು" ಎಂದು ಧ್ವನ್ಯಾರ್ಥದಿಂದ ನಮ್ಮನ್ನು ಶ್ಲಾಘಿಸುವರು. ಇದನ್ನು ಸಿದ್ಧಪಡಿಸಲು ಅವರು ಎರಡು ತರಹದ ಉದ್ಯೋಗವನ್ನು ಸಾಗಿಸಿದ್ದಾರೆ. ಗ್ರೀಕರ ಮತ್ತು ಭಾರತೀಯರ ಜ್ಞಾನದಲ್ಲಿ ಹೆಚ್ಚು ಸಾಮ್ಯಗಳನ್ನು ತೋರಿಸುವುದು ಒಂದು ರೀತಿ. ಆದರೆ ಇಷ್ಟರಿಂದ ಕಾರ್ಯಭಾಗ ತೀರಲಿಲ್ಲ. ಗ್ರೀಕ ಮತ್ತು ಅಲೆಗ್ಝಾಂಡ್ರಿಯನ್ ಜ್ಞಾನದ ಪ್ರಗತಿಯು ಇ. ಸ. ಪೂ. ೩೫೧ ರಿಂದ ಇಸ್ವಿ ಆರಂಭದವರೆಗೆ ಅಪಾರವಾದುದನ್ನು ನಾವು ನೋಡಿದ್ದೇವೆ. ಇದರಿಂದ ಭಾರತೀಯ ಶಾಸ್ತ್ರ ಮತ್ತು ಕಲೆಗಳ ಪ್ರಗತಿಯು ಇಸ್ವಿಯಾರಂಭಕ್ಕೆ ಇತ್ತೀಚಿನದು; ಅಂದರೆ ಅಲೆಗ್ಝಾಂಡರನ ದಾಳಿಯಾದಮೇಲಿನದು ಎಂದು ಸಿದ್ಧಪಡಿಸಲು ಪಾಶ್ಚಾತ್ಯರು ಒಂದೇಸಮನೆ ಪ್ರಯತ್ನಿಸುತ್ತಿದ್ದಾರೆ. ಈ ಪ್ರಯತ್ನಕ್ಕೆ ಎಷ್ಟೋ ಫಲವೂ ದೊರೆತಿದೆ. ಏಕೆಂದರೆ ಸಂಸ್ಕೃತದಲ್ಲಿಯ ಜ್ಯೋತಿಷ ಹಾಗೂ ವೈದ್ಯಶಾಸ್ತ್ರದ ಎಲ್ಲ ಮುಖ್ಯ ಗ್ರಂಥಗಳೂ, ಷಡ್ದರ್ಶನದ ಸೂತ್ರಗ್ರಂಥಗಳೂ ಮತ್ತು ಇನ್ನುಳಿದ ವಿದ್ಯೆ ಕಲೆಗಳ ಮೇಲಿನ ಉಪಲಬ್ಧವಿರುವ ಗ್ರಂಥಗಳೂ ಇಸ್ವಿಯಾರಂಭದಿಂದಲೇ ಇರದಿದ್ದರೂ ಇ. ಸ.ಪೂ ೩೫೦ ರ ನಂತರವಿರಬೇಕೆಂಬ ಬಗ್ಗೆ ಸಾಕಷ್ಟು ಪ್ರಮಾಣಗಳು ದೊರೆತಿವೆ. ಆದರೆ ಭಾರತೀಯ ಪಂಡಿತರು ಈ ಬಗ್ಗೆ ಬೇರೆಯೇ ಅಭಿಪ್ರಾಯಪಡುತ್ತಾರೆ. ಉಪಲಬ್ಧವಿರುವ ಭಾರತೀಯಗ್ರಂಥಗಳು ಇ. ಸ. ಪೂ. ೩೫೭ ರದ ನಂತರವೇ ಇದ್ದರೂ ಅವುಗಳಲ್ಲಿಯ ಜ್ಞಾನದ ಮೂಲವು ಬಹು ಪ್ರಾಚೀನಕಾಲದ್ದಿದ್ದು ಅದು ವೇದದಲ್ಲಿಯೂ ಕೂಡ ಕಂಡುಬರುತ್ತದೆಂದು ಪ್ರತಿಪಾದಿಸುತ್ತಾರೆ ಅಂದರೆ ಭಾರತೀಯ ಜ್ಞಾನದ ಪರಂಪರೆಯು ಅತಿ ಪ್ರಾಚೀನವಿದ್ದು ಅದನ್ನು ಬೇರೊಬ್ಬರಿಂದ ಯಾರಾದರೂ ತೆಗೆದುಕೊಂಡವರಿದ್ದರೆ ಅವರು ಗ್ರೀಕರೇ ಇರಬೇಕೆಂದು ಭಾರ

ತೀಯ ಪಂಡಿತರು ಮಾಡಿಸುತ್ತಾರೆ. ಈ ಪ್ರಯತ್ನದಲ್ಲಿ ಎಷ್ಟು ಫಲ ದೊರೆಯುವುದೋ ಹೇಳುವುದು ಕಠಿಣ. ಏಕೆಂದರೆ ಅಲೆಗ್ಝಾಂಡರನ ಹಿಂದಿನಕಾಲದ ವಿಶ್ವಸನೀಯ ಸಂಗತಿಗಳು ತೀರ ಕಡಿಮೆ ದೊರೆಯು ತ್ತವೆ; ಉಪಲಬ್ಧವಿರುವ ವೇದಾದಿಕ ಯಾವ ಪ್ರಾಚೀನ ಗ್ರಂಥಗಳಿವೆಯೊ ಅವುಗಳ ಕಾಲನಿರ್ಣಯವನ್ನು ಮಾಡಲು ಸಾಧನಗಳ ಕೊರತೆ ಬಹಳ. ಮತ್ತು ಆ ಗ್ರಂಥಗಳ ಅರ್ಥದ ವಿಷಯದಲ್ಲಿಯೂ, ಅರ್ಥದಿಂದ ಯಾವ ಅನುಮಾನವನ್ನು ತೆಗೆಯಬೇಕೋ ಆದರಲ್ಲಿಯೂ ಮತಭೇದವಾಗಲು ಬೇಕಾದಷ್ಟು ಅವಕಾಶವಿದೆ. ಆದುದರಿಂದ ವೇದದಲ್ಲಿ ಉಗಿಬಂಡಿ, ತಾರಾ ಯಂತ್ರ, ಭೂಸ್ತರಶಾಸ್ತ್ರ, ಜಂತುಶಾಸ್ತ್ರಗಳಿವೆ. ವೇದಕಾಲವು ಇಪ್ಪತ್ತು ಲಕ್ಷ ವರುಷ ಹಿಂದಿನದಿದೆ ಎಂಬ ಅನೇಕ ವಿದ್ವಾಂಸರ ಕಲ್ಪನಾತರಂಗಗ ಳಲ್ಲಿ ನಾವು ಈಜಾಡುತ್ತಿದ್ದೇವೆ. ಇದರ ವಿರುದ್ಧ ಋಗ್ವೇದದ ಕಾಲವು ಇ. ಸ. ಪೂ. ೧೨೦೦ ದಷ್ಟಿದೆ. ರಾಮಾಯಣವು ಹೋಮರನಿಂದ ತೆಗೆದು ಕೊಂಡಿದೆ. ಸುಶ್ರುತ ಗ್ರಂಥವು ಮುಸಲ್ಮಾನರ ಆಳಿಕೆಯ ನಂತರ ಬರೆದು ದೆಂದು ಪಾಶ್ಚಾತ್ಯ ಪಂಡಿತರು ವ್ಯಕ್ತಮಾಡುವುದು ಕಂಡುಬಂದಿದೆ. ಹೀಗೆ ಒಂದೇಸವನೆ ಎಳೆದಾಟವು ಈ ಸಂಶೋಧನಪ್ರಾಂತದಲ್ಲಿ ನಡೆದಿ ರುವುದರಿಂದ ಅದು ಎಂದಾದರೂ ಒಮ್ಮೆ ಮುಗಿದೀತೆಂಬ ಚಿಹ್ನವು ಕಾಣವದಿಲ್ಲ. ಒಂದುಕಡೆ ವಾದವಿವಾದವಾಗಿ ನಿರ್ಣಯವಾದುದು ಬೇರೊಂದೆಡೆಗೆ ವಾದವನ್ನು ಹುಟ್ಟಿಸುತ್ತದೆ. ಅದರಲ್ಲಿ ಮತಪ್ರಸಾರದ ಸಾಧನಗಳು ಪಾಶ್ಚಾತ್ಯರಲ್ಲಿ ನಮಗಿಂತ ಎಷ್ಟೋ ಹೆಚ್ಚಿಗಿರುವುದರಿಂದ ಜಗತ್ತಿನಲ್ಲಿ ಸದ್ಯಕ್ಕೆ ಅವರ ಮಾತಿಗೇ ಮನ್ನಣೆ ದೊರೆಯುವುದು ಸಹಜ ವಾಗಿದೆ. ನಾವು ಈ ತುಲನಾತ್ಮಕ ರೀತಿಯನ್ನು ಬಿಟ್ಟು ಭಾರತೀಯರ ಶಾಸ್ತ್ರಜ್ಞಾನದ ಪ್ರಗತಿಯ ಬಗ್ಗೆಯೂ ಮತ್ತು ಜ್ಞಾನದ ಸೆಣಸಾಟ ದಲ್ಲಿಯೂ ಏಕೆ ಹಿಂದೆಬಿದ್ದೆವೆಂಬುದನ್ನು ಸ್ವಲ್ಪ ಅವಲೋಕಿಸೋಣ.

ಈ ವಿಷಯವಾಗಿ ಶಾಸ್ತ್ರಗಳ ಯೋಗ್ಯ ವರ್ಗೀಕರಣವನ್ನು ಪಾಶ್ಚಾತ್ಯರಲ್ಲಿ ಅರಿಸ್ಟಾಟಲನ ಕಾಲದಿಂದ ಮಾಡಿದ ಹಾಗೆ ನಮ್ಮಲ್ಲಾರೂ ಮಾಡಲಿಲ್ಲ. ಜ್ಯೋತಿಷ, ವೈದ್ಯಕ ಸಮಾಜವ್ಯವಹಾರಕ್ಕೆ ಅತ್ಯಂತ ಉಪ ಯೋಗವಿರುವ ಈ ಶಾಸ್ತ್ರಗಳು ಬೇರೆ ಬೇರೆ ಇದ್ದು, ಅವುಗಳ ಸ್ವತಂತ್ರ

ಅಭ್ಯಾಸವು ನಡೆದದ್ದರಿಂದ ಹಾಗೆ ವರ್ಗೀಕರಣ ಮಾಡಿಲ್ಲವೆನ್ನಲು ಬರು ವಂತಿಲ್ಲ. ಭಾರತೀಯರ ಭಾಷಾಶಾಸ್ತ್ರವನ್ನು ನೋಡಬೇಕಾದರೆ ಶಿಕ್ಷಾ, ವ್ಯಾಕರಣ, ನಿರುಕ್ತ ಈ ಮೂರು ವೇದಾಂಗಗಳನ್ನು ನೋಡಬೇಕಾಗು ವುದು. ಪದಾರ್ಥವಿಜ್ಞಾನ ವಿಷಯದಲ್ಲಿ ಅವರ ವಿಚಾರಗಳನ್ನು ಪರಿಶೀಲಿಸ ಬೇಕೆಂದರೆ ತತ್ವಜ್ಞಾನಕ್ಕಾಗಿ ಪ್ರವೃತ್ತಿಗೊಳಿಸುವ ಷಡ್‌ದರ್ಶನಗಳನ್ನು ನೋಡಬೇಕು. ಜೀವಶಾಸ್ತ್ರೀಯಜ್ಞಾನದ ಶೋಧವನ್ನು ಮಾಡಬೇ ಕಾದರೆ ವೈದ್ಯಕ ಗ್ರಂಥ, ಪುರಾಣ ಮತ್ತು ಸ್ಮೃತಿಗಳನ್ನು ತಿರುವಿಹಾಕ ಬೇಕಾಗುವುದು.

ವಿದ್ಯೆಯಲ್ಲಿ ಪರ ಮತ್ತು ಅಪರ ಎಂಬ ಎರಡು ಭೇದಗಳನ್ನು ಬಹು ಪ್ರಾಚೀನ ಕಾಲದಿಂದ ನಮ್ಮಲ್ಲಿ ಮಾಡಿದ್ದಾರೆ. ಯಾವುದರಿಂದ ಅಕ್ಷಯ ಬ್ರಹ್ಮತತ್ವವು ಗೊತ್ತಾಗುವುದೋ ಅದು 'ಪರವಿದ್ಯೆ' ಮತ್ತು ಇನ್ನುಳಿದ ಐಹಿಕ ಸೃಷ್ಟಿಸಂಬಂಧದ ಎಲ್ಲ ಜ್ಞಾನವನ್ನು ಮಾಡಿಕೊಡುವುದು 'ಅಪರ ವಿದ್ಯೆ.' ಅಂದರೆ ಮೋಕ್ಷ ಲಭಿಸುವ ವಿದ್ಯೆಯೇ ಮುಖ್ಯವೆಂದು ಮನ್ನಿಸ ಲ್ಪಟ್ಟಿದ್ದರಿಂದ ನಾನೀ ಎಂಬುವಂಥ ತತ್ವವೇತ್ತರ ಲಕ್ಷ್ಯವು ಅತ್ತ ಕಡೆಗೆ ಎಳೆಯಿತು. ಸೃಷ್ಟಪದಾರ್ಥಶಾಸ್ತ್ರದ ಯೋಗ್ಯ ವ್ಯವಸ್ಥೆಯನ್ನು ಮಾಡಿ ಅದರ ಉತ್ಕರ್ಷಗೋಸುಗ ಪ್ರಯತ್ನಿಸುವ ತತ್ವಜ್ಞರ ಸಂಖ್ಯೆಯು ಬಹಳ ಕಡಿಮೆ ಇದೆ. ಆದರೂ ಅದರಲ್ಲಿಯೆ ವರ್ಗೀಕರಣದ ಮಟ್ಟಿಗೆ ನೋಡುವು ದಾದರೆ:-

'ಅಂಗಾನಿ (೬) ವೇದಾಶ್ಚತ್ವಾರೊ (೪) ಮೀಮಾಂಸಾ (೧) ನ್ಯಾಯವಿಸ್ತರಃ (೧) ಧರ್ಮಶಾಸ್ತ್ರಂ (೧) ಪುರಾಣಾಂ (೧) ಚ ವಿದ್ಯಾ ಹ್ಯೇತಾಶ್ಚತುರ್ದಶ। ಆಯುರ್ವೇದೊ (೧) ಧನುರ್ವೇದೊ (೧) ಗಾಂಧರ್ವ (೧) ಶ್ಚೇತಿ ತೇತ್ರಯಃ। ಅರ್ಥಶಾಸ್ತ್ರಂ (೧) ಚತುರ್ಥಂ ಚ ವಿದ್ಯಾ ಹ್ಯಷ್ಟಾದಶೈವ ತು ॥ —ಪದ್ಮಪುರಾಣ.

ಹೀಗೆ ವ್ಯಾಪಕ, ತರ್ಕಶುದ್ಧ ಪ್ರಯತ್ನವಾದುದು ಕಂಡುಬಂದಿದೆ. ಆದರೆ ಅವು ಅರಿಸ್ಟಾಟಲನ ವರ್ಗೀಕರಣದ ಮಟ್ಟಕ್ಕೆ ಬರುವದಿಲ್ಲೆಂಬುದು ಸ್ಪಷ್ಟ ವಿದೆ. ಮೇಲಿನ ಶ್ಲೋಕದಲ್ಲಿ ೧೮ ವಿದ್ಯೆಗಳಲ್ಲಿ ನ್ಯಾಯ (ತರ್ಕಶಾಸ್ತ್ರ) ಧರ್ಮಶಾಸ್ತ್ರ, ಪುರಾಣ (ದಂತಕಥಾಶಾಸ್ತ್ರ), ಆಯುರ್ವೇದ (ವೈದ್ಯಕ

ಶಾಸ್ತ್ರ), ಧನುರ್ವೇದ, ಅರ್ಥಶಾಸ್ತ್ರ (ರಾಜಕಾರಣ) ಮೊದಲಾದ ಶಾಸ್ತ್ರಗಳ ಪರಿಗಣನೆಯು ಮಹತ್ವದ್ದಿದೆ.

**ಜ್ಯೋತಿಷ್ಯಶಾಸ್ತ್ರ**

ಪ್ರಾಚೀನ ಕಾಲದಿಂದಲೂ ಭಾರತೀಯ ಆರ್ಯರು ಜ್ಯೋತಿಷ ಶಾಸ್ತ್ರದಲ್ಲಿ ಬಹಳೇ ಪ್ರಗತಿಯನ್ನು ಮಾಡಿದ್ದಾರೆ. ಋಗ್ವೇದ ಕಾಲದಲ್ಲಿಯೂ ಕಾಲಗಣನೆಯ ಪದ್ಧತಿಯು ಒಳ್ಳೇ ಪರಿಣತಾವಸ್ಥೆಯನ್ನು ಪಡೆದಿತ್ತು. ಕಾಲಗಣನೆಯ ಪದ್ಧತಿಯು ಈಗಿದ್ದಂತೆಯೇ ಆಗಿನ ಕಾಲದಲ್ಲಿಯೂ ಇತ್ತು. ಸೌರಮಾನದ ವರ್ಷ, ಚಂದ್ರಮಾನದ ತಿಂಗಳ, ಚಂದ್ರಮಾಸದಿಂದ ಬೀಳುವ ಅಂತರವನ್ನು ತುಂಬುವದಕ್ಕಾಗಿ ಅಧಿಕಮಾಸವನ್ನೂ ಮನ್ನಿಸುತ್ತಿದ್ದರು. ಪೃಥ್ವಿಯು ದುಂಡಗಿದ್ದು ನಿರಾಧಾರವಿದೆ ಯೆಂಬ ತಿಳಿವಳಿಕೆ ಅಸ್ತಿತ್ವದಲ್ಲಿತ್ತು. ಮುಂದೆ ವೇದೋತ್ತರ ಬ್ರಾಹ್ಮಣ ಕಾಲಗಳಲ್ಲಿ ಸೂರ್ಯನ ಅಯನಗಳ ಅಂದರೆ ಋತುಗಳ ಜ್ಞಾನವಾಗಿತ್ತು. ಚಂದ್ರಮಾರ್ಗದಲ್ಲಿಯ ೨೭ ನಕ್ಷತ್ರಗಳಲ್ಲಿ ವಿಭಾಗ ಮಾಡಿ, ಅವುಗಳಿಗೆ ಹೆಸರನ್ನಿಡಲಾಗಿತ್ತು. ಗ್ರಹಗಳ ಜ್ಞಾನವೂ ಆಗಿತ್ತು. ಮುಂದೆ ವೇದಾಂಗ ಜ್ಯೋತಿಷ, ಸೂತ್ರ ಗ್ರಂಥಗಳಲ್ಲಿ ಇನ್ನಿಷ್ಟು ಪ್ರಗತಿಯಾದುದು ಕಂಡು ಬಂದಿದೆ ಬೋಧಾಯನಸೂತ್ರದಲ್ಲಿ ಮೇಷಾದಿ ರಾಶಿಗಳ ಉಲ್ಲೇಖ ವಾಗಿದೆ.

**ವರಾಹ ಮಿಹಿರ ಮತ್ತು ಆರ್ಯಭಟ**

ಇದಕ್ಕೂ ಮುಂದಿನ ಪ್ರಗತಿಯೆಂದರೆ ಪಂಚಸಿದ್ಧಾಂತಗಳಲ್ಲಿ ಹೇಳಿದ ಜ್ಞಾನವು. ವರಾಹಮಿಹಿರನಿಗೆ ಗೊತ್ತಿದ್ದ ಪಂಚಸಿದ್ಧಾಂತವು ಪ್ರಾಚೀನವಿದ್ದು, ಸದ್ಯಕ್ಕೆ ಪ್ರಚಲಿತವಿರುವ ಸಿದ್ಧಾಂತಗಳಿಂದ ಭಿನ್ನವಿದೆ ಯೆಂದು ಶ್ರೀ. ಶಂಕರ ಬಾಳಕೃಷ್ಣ ದೀಕ್ಷಿತ ಇವರು ಪ್ರತಿಪಾದಿಸಿದ್ದಾರೆ. ವರಾಹಮಿಹಿರನು ಪುಲಿಶ, ರೋಮಕ, ವಸಿಷ್ಠ, ಸೂರ್ಯ, ಪಿತಾಮಹ ಎಂಬ ಐದು ಸಿದ್ಧಾಂತಗಳನ್ನು ಕೊಟ್ಟಿದ್ದಾನೆ. ಈ ಸಿದ್ಧಾಂತದಲ್ಲಿಯ ಜ್ಯೋತಿರ್ಗಣಿತ ಅರ್ಥಾತ್ ವೇದಕಾಲಕ್ಕಿಂತಲೂ ಎಷ್ಟೋ ಮುಂದೆ ಹೋಗಿದ್ದಾರೆ. ಸೂರ್ಯ ಮತ್ತು ಉಳಿದ ಗ್ರಹಗಳ ಭಗಣ (ಪರಿಭ್ರಮಣ ಕಾಲ) ವನ್ನು ಇದರಲ್ಲಿ ಹೇಳಿದ್ದು ವರ್ಷಮಾನವು ಉತ್ತರೋತ್ತರವಾಗಿ

ಸರಿಯಾಗುತ್ತ ನಡೆದಿದೆ. ಗ್ರಹಗಳ ಮಧ್ಯಮ, ಸ್ಪಷ್ಟ ಗತಿಗಳು ಗಮನದ ಗಣಿತವನ್ನು ಮೆಲ್ಲಮೆಲ್ಲನೆ ಕೂಡಿಸುವದು ನಡೆದಿತ್ತು. ಯುಗ, ಮಹಾಯುಗ, ಕಲ್ಪ ಮೊದಲಾದ ಕಲ್ಪನೆಗಳೂ ಈ ಸಿದ್ಧಾಂತದಲ್ಲಿ ಮಂಡಿಸಲ್ಪಟ್ಟಿವೆ. ಆಮೇಲೆ ಇ. ಸ. ೪೭೮ರ ಮುಂದೆ ವರ್ತಮಾನಕಾಲೀನ ಪಂಚಸಿದ್ಧಾಂತವು ಪ್ರಚಾರದಲ್ಲಿ ಬಂದಿತು.

ಇ. ಸ. ೪೭೬ ರಲ್ಲಿ ಆರ್ಯಭಟನೆಂಬ ಪ್ರಸಿದ್ಧ ಜ್ಯೋತಿಷಿಯು ಜನ್ಮ ತಾಳಿದನು. ಪೃಥ್ವಿಯು ತನ್ನ ಮೈಸುತ್ತು ತಿರುಗುತ್ತದೆಂದೆನ್ನುವ ಭಾರತೀಯ ಜ್ಯೋತಿಷಿಯು ಇವನೊಬ್ಬನೇ. ಮುಂದೆ ವರಾಹಮಿಹಿರನು (ಇ. ಸ. ೫೦೫), ಬ್ರಹ್ಮಗುಪ್ತ (ಜನ್ಮ ಇ. ಸ. ೫೯೮), ಭಾಸ್ಕರಾಚಾರ್ಯ (ಜನ್ಮ ಇ. ಸ. ೧೧೧೪) ರೆಂಬವರು ಹುಟ್ಟಿ ತಂತಮ್ಮ ರೀತಿಯಲ್ಲಿ ಈ ಶಾಸ್ತ್ರದಲ್ಲಿ ಪ್ರಗತಿಯನ್ನು ಮಾಡಿದರು. ಆದರೂ ಒಟ್ಟಿನಲ್ಲಿ ಅವರ ಲಕ್ಷ್ಯವು ಗಣಿತಶಾಸ್ತ್ರ, ಫಲಜ್ಯೋತಿಷಗಳ ಕಡೆಗೆ ಹೆಚ್ಚಿಗಿತ್ತು. ಭಾಸ್ಕರಾಚಾರ್ಯರ ಪ್ರವೃತ್ತಿಯು ಪ್ರತ್ಯಕ್ಷ ವೇಧಿಸಿ, ಅವಲೋಕಿಸಿ ಜ್ಯೋತಿಷಶಾಸ್ತ್ರದ ಪ್ರಗತಿಯ ಕಡೆಗೆ ಇದ್ದಂತೆ ಕಾಣಲಿಲ್ಲ. ಆದರೆ ಗಣಿತಜ್ಞರೆಂದು ಅವನ ಯೋಗ್ಯತೆಯು ಅದ್ವಿತೀಯವಿದೆ. ೧೮ ನೆಯ ಶತಮಾನದಲ್ಲಿ ಶೂನ್ಯಲಬ್ಧಗಣಿತವನ್ನು ಯುರೋಪದಲ್ಲಿ ನ್ಯೂಟನ್ನನು ಶೋಧಮಾಡಿದುದನ್ನೇ ಭಾಸ್ಕರಾಚಾರ್ಯರು ೧೨ ನೆಯ ಶತಮಾನದಲ್ಲಿ ಶೋಧಮಾಡಿದರೆಂದು ಪಂಡಿತ ಬಾಪೂದೇವಶಾಸ್ತ್ರಿಯವರು ಸಿದ್ಧಮಾಡಿದ್ದಾರೆ. ಗಣೇಶ ದೈವಜ್ಞರೇ ಭಾರತದ ಕೊನೆಯ ಹೆಸರುವಾಸಿಗಳಾದ ಜ್ಯೋತಿಷಿಗಳು. ಅವರು ಎಲ್ಲ ಗ್ರಹಗಳ ಸ್ಥಿತಿಗತಿಗಳು ನಡೆಯುವ ಕಲೆಯನ್ನು ಪೂರ್ಣತೆಗೆ ಮುಟ್ಟಿಸಿ 'ಗ್ರಹಲಾಘವ' ಎಂಬ ಗ್ರಂಥವನ್ನು ರಚಿಸಿದರು. ಇದರ ಆಧಾರದಿಂದಲೇ ಇಂದಿನವರೆಗೆ ಎಲ್ಲ ಪಂಚಾಂಗಗಳು ಆಗುತ್ತಿರುತ್ತವೆ. ಒಟ್ಟಿನ ಮೇಲೆ ನೋಡುತ್ತಿರಲು ಭಾಸ್ಕರಾಚಾರ್ಯರ ಕಾಲದಿಂದ ಅಂದರೆ ೧೩ ನೆಯ ಶತಮಾನದವರೆಗೆ ಗಣಿತ, ಜ್ಯೋತಿಷಶಾಸ್ತ್ರಗಳಲ್ಲಿ ಭಾರತೀಯರ ಪ್ರಗತಿಯು ಚನ್ನಾಗಿ ಮುಂದುವರಿದಿತ್ತು. ಮತ್ತು ಅದರ ಜ್ಞಾನವು ಆ ಕಾಲದ ಯುರೋಪಿಯನರ ಜ್ಞಾನಕ್ಕಿಂತಲೂ ಎಷ್ಟೋ ಮುಂದುವರಿದಿತ್ತು. ಆದರೆ ಭಾರ

ತೀಯರಿಗೆ ಅಭಿಮಾನಾಸ್ಪದವಾದ ಈ ಸ್ಥಿತಿಯು ಬಹುದಿನ ಬಾಳಲಿಲ್ಲ. ಭಾರತೀಯ ಜ್ಯೋತಿಷದ ಬೆಳವಣಿಗೆಯು ೧೩ನೇ ಶತಮಾನದ ನಂತರ ಕುಗ್ಗಿತು. ಮುಂದೆ ಟೀಕಾ ಮತ್ತು ಮುಹೂರ್ತ ಗ್ರಂಥಗಳ ಸುಳಿದಾಟವಾರಂಭವಾಯಿತು. ಪಾಶ್ಚಾತ್ಯರು ಮಾತ್ರ ಕೊಪರ್ನಿಕಸನ ಕಾಲ ದಿಂದ ಒಳ್ಳೇ ಭರದಿಂದ ಮುಂದುವರಿಯುಹತ್ತಿದರು.

## ಭೂಗೋಲಶಾಸ್ತ್ರ ( ಭೂಪೃಷ್ಠಶಾಸ್ತ್ರ, ಭೂಸ್ತರಶಾಸ್ತ್ರ )

ಭೂವರ್ಣನೆಯ ವಿಷಯವಾಗಿ ನಮ್ಮ ಪೂರ್ವಜರ ಕಲ್ಪನೆಗಳು ಹೇಗಿದ್ದವೆಂಬುದನ್ನು ತೋರಿಸುವದಕ್ಕಾಗಿ ಭಾಗವತ ಪುರಾಣದೊಳಗಿನ ಒಂದು ಸಣ್ಣ ಉದಾಹರಣೆಯನ್ನು ಇಲ್ಲಿ ಕೊಟ್ಟಿದೆ. "ಭೂಮಂಡಲ ರೂಪವೆಂಬ ಕಮಲವು ಸಪ್ತದ್ವೀಪವೆಂಬ ಕೋಶದೊಳಗಿನ ಅಭ್ಯಂತರ ಕೋಶವಾದ ಜಂಬುದ್ವೀಪವು ಲಕ್ಷಯೋಜನ ವಿಸ್ತೀರ್ಣವಿದ್ದು ಕಮಲ ಪತ್ರದ ಹಾಗೆ ಸಮವರ್ತುಳವಿದೆ....ಭೂಮಂಡಲರೂಪ ಕಮಲದ ಮಧ್ಯದಲ್ಲಿಯ ಕರ್ಣಿಕೆಯೇ ಸುವರ್ಣ ಮೇರುಪರ್ವತವು. ಅದರ ಎತ್ತರವು ೩೨ ಸಾವಿರ ಯೋಜನವಿದ್ದು ತಳಹದಿಯು ೧೬ ಸಾವಿರ ಯೋಜನ ವಿದೆ. ಉತ್ತರಕ್ಕೆ ನೀಲ, ಶ್ವೇತ, ಶ್ರಿಂಗವಾನ್ನ ಹೀಗೆ ಮೂರು ರಮ್ಯ ಹಿರಣ್ಮಯ, ಮತ್ತು ಕುರು ಈ ಖಂಡಗಳ ಮರ್ಯಾದೆಯ ಪರ್ವತಗಳು ಕ್ರಮದಿಂದಿವೆ ಅವು ಪೂರ್ವ ಪಶ್ಚಿಮಕ್ಕೆ ಹಬ್ಬಿ ಎರಡೂ ತುದಿಗಳು ಕ್ಷಾರ ಸಮುದ್ರಕ್ಕೆ ಹೋಗಿ ಕೂಡಿವೆ. ಆ ಪರ್ವತಗಳು ಎರಡೆರಡು ಸಾವಿರ ಯೋಜನ ವಿಸ್ತೀರ್ಣವಿವೆ. ಇಲಾವೃತ್ತದ ದಕ್ಷಿಣಕ್ಕೆ ನಿಷಧ, ಹೇಮ ಕೂಟ, ಹಿಮಾಲಯ ಹೀಗೆ ಪೂರ್ವ ಪಶ್ಚಿಮ ಹಬ್ಬಿರುವ ಮೂರು ಪರ್ವತಗಳಿವೆ. ಅವು ಹತ್ತು ಹತ್ತು ಸಾವಿರ ಯೋಜನ ಎತ್ತರವಿದ್ದು ಹರಿ ವರ್ಷ, ಕಿಂಪುರುಷ, ಭಾರತ ಈ ಖಂಡಗಳ ಮರ್ಯಾದೆಯ ಪರ್ವತಗಳಾಗಿವೆ. ಅದರಂತೆ ಇಲಾವೃತ್ತದ ಪಶ್ಚಿಮ-ಪೂರ್ವಕ್ಕೆ ಮಾಲ್ಯವಾನ, ಗಂಧ ಮಾದನವೆಂಬೆರಡು ಪರ್ವತಗಳಿದ್ದು ಅವು ಕೇತುಮಾಲ ಭದ್ರಾಶ್ವ ಈ ಖಂಡದ ಸೀಮೆಯನ್ನು ತೋರಿಸುತ್ತವೆ."

ಈಗ ಇಂಥ ವರ್ಣನೆಯು ಪಾಶ್ಚಾತ್ಯರ ಅವಲೋಕ

ವಾದ ವಾಸ್ತವಿಕ ಭೂವರ್ಣನೆಗೆ ಸಾಮ್ಯವಿರುತ್ತದೆಂದು ಪ್ರತಿಪಾದಿಸುವ ವಿದ್ವಾಂಸರು ನಮ್ಮಲ್ಲಿದ್ದಾರೆ! ಆದರೆ ರಾಮಾಯಣ, ಮಹಾಭಾರತ ಗ್ರಂಥಗಳಲ್ಲಿ ಬರುವ ದೇಶಗಳ, ನದಿಗಳ ಹೆಸರು ಮತ್ತು ವರ್ಣನೆಗಳು ಬಂದಿರುವದರಿಂದ ಎಷ್ಟೋ ಗೊಂದಲವೆದ್ದುದು ಕಾಣುತ್ತದೆ. ಮತ್ತು ಕಾಲ್ಪನಿಕ ವಿಸ್ತಾರವೂ ಎಷ್ಟೋ ಆದುದು ಕಾಣುತ್ತದೆ. ಇದರಿಂದ ಯಥಾರ್ಥ ಅವಲೋಕನೆ, ವರ್ಣನೆ ಮಾಡುವ ವೃತ್ತಿಯು ಭಾರತೀಯ ರಲ್ಲಿ ಈ ಶಾಸ್ತ್ರದ ಮಟ್ಟಿಗೆ ಉತ್ಪನ್ನವಾಗಿಲ್ಲೆಂದೆನ್ನಬೇಕಾಗುತ್ತದೆ. ಆದರಂತೆ "ಯಃ ಪೃಥಿವೀಂ ವ್ಯಥಮಾನಾಮದೃಂಹದ್ಯಃ ಪರ್ವತಾನ್ ಪ್ರಕುಪಿತಾನ್ ಅರಮ್ಣಾತ್!" ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ!" ಹೀಗೆ ಋಗ್ವೇದದಲ್ಲಿಯ ವಚನಗ ಳಿಂದ ಆಧುನಿಕ ಭೂಸ್ತರ ಶಾಸ್ತ್ರಜ್ಞರ ಪೃಥ್ವಿಯ ಉತ್ಪತ್ತಿಯ ಸಿದ್ಧಾಂ ತವೂ ಮತ್ತು ಅವರು ಮನ್ನಿಸುವ ಪ್ರಸ್ತಾರದ ಕಾಲವಿಭಾಗವೂ ವೇದ ಕಾಲದ ಋಷಿಗಳಿಗೆ ಪೂರ್ಣವಾಗಿ ಅವಗತವಿತ್ತೆಂದು ಸಿದ್ಧಮಾಡುವ ಪ್ರಯತ್ನವನ್ನು ಶ್ರೀ. ನಾ. ನಾ. ಪಾವಗಿಯವರು ಮಾಡಿದ್ದಾರೆ! ಮತ್ಸ್ಯ, ಕೂರ್ಮ, ವರಾಹ ಮೊದಲಾದವು ವಿಷ್ಣುವಿನ ದಶಾವತಾರಗಳು ಪೃಥ್ವಿಯ ಮೇಲಿನ ಪ್ರಾಣಿಸೃಷ್ಟಿಯ ವಿಕಾಸವೆಂದು ತೋರಿಸಿಕೊಡಲು ಅನೇಕ ಜನರು ಪ್ರತಿಪಾದಿಸಿದ್ದಾರೆ! ಅಂದರೆ ವಿಕಾಸವಾದದ ಶೋಧ ವನ್ನು ಡಾರ್ವಿನಾನಿಗಿಂತ ಮೊದಲು ನೂರಾರು ವರ್ಷ ಮೊದಲೇ ನಮ್ಮ ಪೌರಾಣಿಕ ಕವಿಗಳು ಗೊತ್ತುಹಚ್ಚಿದರು. ಈಗ ಈ ದಶಾವತಾರಗಳು ಪುರಾತನ ಜೀವಶಾಸ್ತ್ರ, ಮಾನವಶಾಸ್ತ್ರಗಳಾನುಸಾರವಾಗಿ ಶಿಕ್ಷಿತಪ್ರಾಣಿ ಗಳ ಮತ್ತು ಮನುಷ್ಯರ ಅವಸ್ಥೆಯ ದೊಡ್ಡದೊಂದು ಚಮತ್ಕಾರಿಕ ವಾದ ಸಾಮ್ಯವಿರುವದು ನಿಜ; ಆದರೂ ಶಾಸ್ತ್ರೀಯ, ಉದ್ದೇಶ, ಅವಲೋ ಕನ, ಅನುಮಾನಪದ್ಧತಿಗಳ ಗಂಧವು ಕೂಡ ಇಲ್ಲದೆ ಈ ದಶಾವತಾರ ಗಳ ವರ್ಣನೆಯಲ್ಲಿ ಇಲ್ಲವೆ ಅವುಗಳ ಸುತ್ತುಮುತ್ತು ಎಲ್ಲಿಯೂ ಕಾಣಿ ಸದೆ ಕೇವಲ ಇಷ್ಟು ಕಲ್ಪನೆಯಿಂದಲೇ ಪೂರ್ವಜರಿಗೆ "ಭೂಸ್ತರ ಶಾಸ್ತ್ರದ ಜನಕ" ಮತ್ತು "ವಿಕಾಸವಾದದಪ್ರಣೇತೆ"ರೆಂದು ಗೊತ್ತುಮಾಡು ವದು ಅತ್ಯಂತ ಸಾಹಸದ ಮಾತೇ ಸರಿ.

## ಪದಾರ್ಥವಿಜ್ಞಾನ ಮತ್ತು ರಸಾಯನಶಾಸ್ತ್ರ

ಇವೆರಡೂ ಶಾಸ್ತ್ರಗಳು ನಮ್ಮಲ್ಲಿ ಸ್ವತಂತ್ರವಾಗಿ ಬೆಳೆಯದ್ದರಿಂದ ಇವುಗಳ ಸಂಬಂಧವಾಗಿ ಭಾರತೀಯರ ಜ್ಞಾನವನ್ನು ಅಳೆಯುವದಕ್ಕಾಗಿ ನಾವು ಸಾಂಖ್ಯಯೋಗ, ನ್ಯಾಯವೈಶೇಷಿಕ ದರ್ಶನಗಳನ್ನು ನೋಡ ಬೇಕಾಗುತ್ತದೆ. ಈ ದರ್ಶನಗಳೆಂದರೆ ನಿಜವಾಗಿಯೂ ತತ್ವಜ್ಞಾನದ ಸಂಪ್ರದಾಯವಿದ್ದು ಅದರಲ್ಲಿ ಸೃಷ್ಟಪದಾರ್ಥಗಳ ಬಗ್ಗೆ ಇರುವಂಥ ವಿಚಾರಗಳು ತತ್ವಜ್ಞಾನದ ಆನುಷಂಗಿಕವಾಗಿಯೂ ಇವೆ. ಸಾಂಖ್ಯ ಮತ್ತು ಯೋಗ ಇವು ಸಂಯುಕ್ತದರ್ಶನಗಳಿವೆ. ಯೋಗವು ತತ್ವವಿಚಾರ ವನ್ನು ಸಾಂಖ್ಯದಿಂದಲೇ ತೆಗೆದುಕೊಂಡದ್ದಿದ್ದು ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳಲು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾ ಹಾರ, ಧ್ಯಾನ, ಧಾರಣ ಮತ್ತು ಸಮಾಧಿ ಈ ಉಪಾಯಗಳ ಉಪದೇಶ ವನ್ನು ಮಾತ್ರ ಹೆಚ್ಚಾಗಿ ಮಾಡಿದೆ. ಸಾಂಖ್ಯತತ್ವದ ವೈಶಿಷ್ಟ್ಯವೆಂದರೆ ಪರಿಣಾಮವಾದ ಮತ್ತು ಅದರ ೨೪ ತತ್ವಗಳು. ಮೊದಲನೆಯ ತತ್ವವಾದ 'ಪ್ರಕೃತಿ' ಯು ಸರ್ವಸೃಷ್ಟಿಯ ಮೂಲಕಾರಣವಿದ್ದು ಅದು ಅನಾದಿ, ಅನಂತ, ವ್ಯಾಪಕ, ಅಪರಿಚ್ಛಿನ್ನ, ಆಕಾರಹೀನ ಮತ್ತು ಅವ್ಯಕ್ತವಿದೆ. ಈ ಪ್ರಕೃತಿಯು ತ್ರಿಗುಣಾತ್ಮಕವಿದ್ದು ಅವು ಸೃಷ್ಟಿಯ ಆರಂಭದ ಮೊದಲೇ ಅವ್ಯಕ್ತ, ಅಸಂಹತ ಸಂಘಟಿತವಿರುತ್ತದೆ. ಅದರ ಈ ಅವಸ್ಥೆಗೆ 'ಸಾಮ್ಯಾ ವಸ್ಥೆ' ಎಂದಿದ್ದರೂ ಅದರಲ್ಲಿ ಪುರುಷನ ಪ್ರೇರಣೆಯಿಂದ ಬದಲಾದ ಸೃಷ್ಟಿಯುತ್ಪತ್ತಿಯ ಚಕ್ರವು ಆರಂಭವಾಗುತ್ತವೆ. ಗುಣಗಳ ಸಾಮ್ಯಾ ವಸ್ಥೆಯು ನಷ್ಟವಾಗಿ ಅವು ವಿಷಮಪ್ರಮಾಣದಲ್ಲಿ ಸಂಘಟಿತವಾಗುತ್ತವೆ. ಆದರೆ ಈ ವ್ಯಾಪಾರದ ಮೂಲಕ ವಿಶೇಷವಾಗಿ ರಜೋಗುಣದ ಕ್ರಿಯಾ ಶಕ್ತಿಯ ಮೂಲಕ ಅವ್ಯಕ್ತಪ್ರಕೃತಿಯಿಂದ 'ಮಹತ್' ಎಂಬ ತತ್ವವು ನಿರ್ಮಾಣವಾಗುತ್ತದೆ. ಮಹತ್‌ದಿಂದ ಅಹಂಕಾರವೂ ಹುಟ್ಟುತ್ತದೆ. ಅಹಂಕಾರವು ಎರಡು ತರಹದಿಂದ ಕಾರ್ಯಪ್ರವೃತ್ತವಾಗುತ್ತದೆ. ರಜೋ ಗುಣಪ್ರಧಾನ ಅಹಂಕಾರದಿಂದ ವ್ಯಕ್ತಿಪರತ್ರವು ಬೇರೆಯಾಗಿ ಜ್ಞಾನೇಂ ದ್ರಿಯ, ಕರ್ಮೇಂದ್ರಿಯ, ಮನಗಳು ಶುದ್ಧವಾಗುವವು. ತಮೋಗುಣ ಅಹಂಕಾರದಿಂದ 'ತನ್ಮಾತ್ರೆ' ( ಸೂಕ್ಷ್ಮಭೂತ ) ಗಳುಂಟಾಗುತ್ತವೆ.

ಈ ತನ್ಮಾತ್ರೆಗಳು ಐದು ಪ್ರಕಾರವಿದ್ದು ಅವುಗಳಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ಐದು ಶಕ್ತಿಗಳ ಗುಣಗಳ ವ್ಯಾಪಾರದಿಂದುಂಟಾಗುತ್ತವೆ. ಶಬ್ದತನ್ಮಾತ್ರದಲ್ಲಿ ಕೇವಲ ಕೇಳಬರುವ ಶಕ್ತಿಯಿದೆ. ಸ್ಪರ್ಶ ತನ್ಮಾತ್ರದಲ್ಲಿ ಶಬ್ದ ಸ್ಪರ್ಶ ಇವೆರಡೂ ಶಕ್ತಿಗಳಿವೆ. ಹೀಗೆ ಪ್ರತಿಯೊಂದು ತನ್ಮಾತ್ರದಲ್ಲಿ ಒಂದೊಂದು ಶಕ್ತಿಯು ಹೆಚ್ಚಾಗಿ ಗಂಧತನ್ಮಾತ್ರದಲ್ಲಿ ಐದೂ ಶಕ್ತಿಗಳು ಉಂಟಾಗುತ್ತವೆ. ಈ ತನ್ಮಾತ್ರೆಗಳು ಸೂಕ್ಷ್ಮ ದ್ರವ್ಯಗಳಿರುವದರಿಂದ ಅವುಗಳಲ್ಲಿರುವ ಶಬ್ದಾದಿ ಧರ್ಮಗಳೂ ಅವ್ಯಕ್ತ, ಅನುದ್ಭೂತ ವೃತ್ತಿಯುಳ್ಳವು. ಈ ಸೂಕ್ಷ್ಮಭೂತಗಳಿಂದಲೇ ಆಕಾಶ, ವಾಯು, ತೇಜ, ಆಪ್, ಪೃಥ್ವಿ ಎಂಬ ಐದು ಸ್ಥೂಲಭೂತಗಳ ಪರಮಾಣಗಳುಂಟಾಗಿವೆ. ಸ್ಥೂಲಭೂತದ ಪರಮಾಣುಗಳು ಸಂಘಟಿತವಾಗಿ ಅವುಗಳ ಏಕಭೂತಾತ್ಮಕ ದ್ರವ್ಯಗಳಾಗುವವು. ಬೇರೆಬೇರೆ ಭೂತಗಳ ಪರಮಾಣುಗಳು ಪರಸ್ಪರ ಸಂಯುಕ್ತವಾದರೆ ಅನೇಕ ಭೂತಾತ್ಮಕದ್ರವ್ಯಗಳಾಗುತ್ತವೆ. ಹೀಗೆ ಸಾಂಖ್ಯಮತಾನುಸಾರವಾಗಿ ಸೃಷ್ಟಿಯು ಉತ್ಪತ್ತಿಕ್ರಮವಿದೆ. ಈ ಜಗತ್ತಿನ ನಿರ್ಮಾಣಕ್ರಿಯೆಗೆ 'ವಿಸದೃಶಪರಿಣಾಮ'ವೆಂಬ ಹೆಸರಿದೆ.

ಸತ್ವ, ರಜ, ತಮ ಈ ಮೂರು ಗುಣಗಳ ವೈಷಮ್ಯದಿಂದಲೂ, ಪರಿಚ್ಛಿನ್ನ ಸ್ವರೂಪದಲ್ಲೂ ಪರಸ್ಪರಸಂಯುಕ್ತವಾಗುವ ಪ್ರವೃತ್ತಿಯ ಮೂಲಕವಾಗಿ ಉತ್ಪತ್ತಿಚಕ್ರವು ಆರಂಭವಾಗಿ ಜಗತ್ತು ನಿರ್ಮಾಣವಾಗುತ್ತದೆ. ಇದರ ವಿರುದ್ಧ ಗುಣಗಳ ವಿಷಮ ಮತ್ತು ಸಂಘಟಿತ ಅವಸ್ಥೆಯು ನಷ್ಟವಾಗಹತ್ತಿದರೆ ಸೃಷ್ಟಿಯ ಲಯವು ಪ್ರಾರಂಭವಾಗುವದು. ಯಾವ ಕ್ರಮದಿಂದ ಸಂಘಟನವಾಗುತ್ತದೋ ಅದರ ವಿರುದ್ಧ ಕ್ರಮದಿಂದ ವಿಘಟನೆಯಾಗಿ ಕಟ್ಟಕಡೆಗೆ ಗುಣಗಳ ಪೂರ್ಣ ಸಾಮ್ಯಾವಸ್ಥೆಯು ಸ್ಥಾಪಿತವಾಗುತ್ತದೆ. ಅಂದರೆ ಈ ಅವಸ್ಥೆಯಲ್ಲಿ ಅವ್ಯಕ್ತ, ಆಕಾರಹೀನಸಗಳೆಂಬ ಪ್ರಕೃತಿತತ್ವವು ಅವಶಿಷ್ಟವಾಗಿರುತ್ತದೆ. ಈ ಲಯವಾಗುವ ಪ್ರಕ್ರಿಯೆಗೆ 'ಸದೃಶಪರಿಣಾಮ'ವೆಂದೆನ್ನುತ್ತಾರೆ.

**ಸಾಂಖ್ಯಮತದ ರೂಪರೇಷೆ**

ಸಾಂಖ್ಯರ ಮತದಲ್ಲಿಯೂ,ಆಧುನಿಕ ಶಾಸ್ತ್ರಜ್ಞರು ಪ್ರಯೋಗದಿಂದ

ಸಿದ್ಧಪಡಿಸಿದ ಸಿದ್ಧಾಂತದಲ್ಲಿಯೂ ಎಷ್ಟೋ ಸಾಮ್ಯವಿದೆ. ಸಾಂಖ್ಯರ ಮತದಿಂದ ಗುಣವು ಕೇವಲ ವಸ್ತುಗತ ಧರ್ಮವಿರದೆ ವಸ್ತುಸ್ವರೂಪವೇ ಇದೆ. ಪ್ರತಿಯೊಂದು ಪದಾರ್ಥವು ನಿಜವಾಗಿಯೂ ತ್ರಿಗುಣಾತ್ಮಕವಿರುತ್ತದೆ. ಅಂದರೆ ಪ್ರತಿಯೊಂದು ಪರಮಾಣುವಿನಲ್ಲಿ ಶಕ್ತಿ (ರಜಸ್), ಜಡ ದ್ರವ್ಯ (ತಮಸ್) ಇವೆರಡೂ ಇರುತ್ತವೆ. ಆಧುನಿಕ ಶಾಸ್ತ್ರಜ್ಞರ ಮತ ಪ್ರಕಾರವಾಗಿ ಪರಮಾಣುವಿನಲ್ಲಿರುವ ವಿದ್ಯುತ್‌ಕಣವು ಶಕ್ತಿಸ್ವರೂಪಿ ಇದ್ದು, ಅದರ ಸಾಮ್ಯಾವಸ್ಥೆಯ ಮೂಲಕ ಅದು ಜಡದ್ರವ್ಯಾತ್ಮಕವಾಗಿ ರುವದೆಂಬದನ್ನು ನಾವು ನೋಡಿಯೇ ಇದ್ದೇವೆ. ಸಾಂಖ್ಯಮತವಾದಿಗಳು ಈ ಪರಮಾಣುವಿನ ಮಟ್ಟಿಗೆ ನಿಲ್ಲದೆ, ಅದರಾಚೆಗಿರುವ ತನ್ಮಾತ್ರ, ಭೂತಾದಿ ಅಹಂಕಾರಗಳ ವರೆಗೆ ಹೋಗುತ್ತಾರೆ. ಅದರಂತೆ ಆಧುನಿಕಶಾಸ್ತ್ರಜ್ಞರೂ ಸಹ ಪರಮಾಣುಗಳನ್ನು ಪೃಥಕ್ಕರಿಸಿ ವಿದ್ಯುತ್ ಕಣದ ವರೆಗೆ ಬಂದು ಮುಟ್ಟಿರುತ್ತಾರೆ.

ನ್ಯಾಯ-ವೈಶೇಷಿಕರು ಸಾಂಖ್ಯರ ಪರಿಣಾಮವಾದ ಮತ್ತು ಅವ್ಯಕ್ತ ಪ್ರಕೃತಿಯಿಂದ ವ್ಯಕ್ತಸೃಷ್ಟಿಯ ಉತ್ಪತ್ತಿಯಾಯಿತೆಂಬ ಸಿದ್ಧಾಂತವನ್ನು ಮನ್ನಿಸುವದಿಲ್ಲ. ವಸ್ತುಗಳ ಮೂಲಕಾರಣಗಳ ಶೋಧ ಮಾಡುತ್ತ ಅವರು ಕೇವಲ ಪರಮಾಣುವಿನ ವರೆಗೆ ಹೋಗುತ್ತಾರೆ. ಈ ದೃಷ್ಟಿಯಿಂದ ಅವರು ಸಾಂಖ್ಯರಿಗಿಂತ ಹೆಚ್ಚು ಪ್ರತ್ಯಕ್ಷಾನುಸಾರಿಗಳಿದ್ದಾರೆ. ಪಂಚಮಹಾಭೂತಗಳ ರಚನೆಯು ಪರಮಾಣುವಿನ ಇತ್ತೀಚಿನ ಪ್ರಕ್ರಿಯೆಗಳು ಸ್ಥೂಲಮಾನದಿಂದ ಸಾಂಖ್ಯರಂತೆಯೇ ಇವೆ. ಬಂಗಾರ, ಕಬ್ಬಿಣ ಮೊದಲಾದ ಧಾತುಗಳನ್ನು ವೈಶೇಷಿಕರು ತೈಜಸ ದ್ರವ್ಯಗಳಲ್ಲಿ ಸೇರಿಸಿಕೊಂಡ ಸಂಗತಿಯು ಚಮತ್ಕಾರಿಕವಿದ್ದು ನೆನಪಿಡಬೇಕಾದ ಸಂಗತಿಯಾಗಿದೆ.

ಜ್ಞಾನದ ತಾತ್ವಿಕರೀತಿಯಾಯಿತು. ವ್ಯಾವಹಾರಿಕ ರೀತಿಯೆಂದರೆ ಬೇರೆ ಬೇರೆ ರಾಸಾಯನಿಕಕ್ರಿಯೆಗಳನ್ನು ಮಾಡುವುದರಲ್ಲಿ ಭಾರತೀಯರು ಒಳ್ಳೇ ಕುಶಲತೆಯನ್ನು ಸಂಪಾದಿಸಿದ್ದಾರೆ. ಭಾರತೀಯರು ಈ ವಿಷಯವಾಗಿ ಆಗಿನ ಕಾಲದ ಜಗತ್ತಿನಲ್ಲಿ ಬಹಳ ಮುಂದು ವರಿದಿದ್ದರೆಂದು ಹೇಳಲು ಯಾವ ಅಡ್ಡಿಯೂ ಇಲ್ಲ. ಅಸಂಶೋಧಿತ

ವಾದ ಧಾತುಗಳ ಸಂಶೋಧನೆಯನ್ನು ಮಾಡುವ ಕ್ರಿಯೆಯು ಅತಿ ಪ್ರಾಚೀನ ಕಾಲದಿಂದಲೂ ಇವರಿಗೆ ಗೊತ್ತಿದ್ದಿತು. ಶ್ರೇಷ್ಠವಾದ ಅದುರು ಹಿಂದುಸ್ಥಾನದಲ್ಲಿತ್ತು. ಭಸ್ಮೀಕರಣ, ಅಧಃಪಾತನ, ಊರ್ಧ್ವಪಾತನ, ಸ್ವೇದನ, ಸ್ತಂಭನ ಮೊದಲಾದ ರಾಸಾಯನಿಕ ಕ್ರಿಯೆಗಳು ಸಂಪೂರ್ಣ ವಾಗಿ ನಮ್ಮವರಿಗೆ ಗೊತ್ತಿದ್ದವು. ಅನೇಕ ಆಮ್ಲ, ಕ್ಷಾರ, ಭಸ್ಮಗಳನ್ನು ಇವರು ಔಷಧಕ್ಕಾಗಿ ಸಿದ್ಧಪಡಿಸುತ್ತಿದ್ದರು. ಪಾರಜ, ಗಂಧಕ ದ್ರವ್ಯ ಗಳಿಂದ ಔಷಧಗಳು ಸಿದ್ಧವಾಗುತ್ತಿದ್ದವಲ್ಲದೆ ರಾಸಾಯನಿಕ ಸಂಯೋಗ ದಿಂದಹುಟ್ಟುವ ದ್ರವ್ಯಗಳನ್ನು ತಯಾರಿಸುವ ಕಾರಖಾನೆಗಳು ಭರತ ಖಂಡದಲ್ಲಿದ್ದವು. ಪರದೇಶಗಳ ಔಷಧಗಳ ಮೇಲೆ ಅವಲಂಬಿಸಿರುವ ಈಗಿನ ಡಾಕ್ಟರರಂತೆ ಆಗಿನವರು ಅವಲಂಬಿಸಿ ಕುಳಿತುಕೊಳ್ಳುತ್ತಿದ್ದಿಲ್ಲ.

**ಜೀವಶಾಸ್ತ್ರ ಮತ್ತು ಮಾನವೀಯ ಶಾಸ್ತ್ರಗಳು**

ಜೀವಶಾಸ್ತ್ರವು ನಮ್ಮಲ್ಲಿ ಸ್ವತಂತ್ರವಾಗಿ ನಿರ್ಮಾಣವಾಗದ್ದ ರಿಂದ ಆ ವಿಷಯದ ಪರಿಚಯಮಾಡಿಕೊಳ್ಳಲು ವೈದ್ಯಕ ಗ್ರಂಥಗಳ ಸಹಾಯವನ್ನು ಪಡೆಯದ ಹೊರತು ಗತಿಯಿಲ್ಲ. ಅಲ್ಲಿ ನಮಗೆ ವನಸ್ಪತಿ, ಪ್ರಾಣಿಗಳ ವರ್ಗೀಕರಣ, ಅವುಗಳ ಶರೀರರಚನೆ, ಶರೀರವ್ಯಾಪಾರ ಮೊದಲಾದವುಗಳ ಬಗ್ಗೆ ವಿಸ್ತೃತ ಜ್ಞಾನವು ದೊರೆಯುತ್ತದೆ. ಮಧ್ಯ ಯುಗದಲ್ಲಿಯ ಯುರೋಪಿಯನ್ ಜನರ ಜ್ಞಾನದಂತೆ ಈ ಜ್ಞಾನಕ್ಕೆ ಅವಲೋಕನ, ಪ್ರಯೋಗಗಳ ಆಧಾರವು ಕಡಿಮೆ ಇದ್ದುದರಿಂದ ಶಾಸ್ತ್ರೀಯ ದೃಷ್ಟಿಯಿಂದ ಅದರಲ್ಲಿ ಭ್ರಾಮಕತೆಯು ಹೆಚ್ಚಾಗಿ ಕಂಡು ಬರುತ್ತದೆ. ಬೇರೆ ಬೇರೆ ಗ್ರಂಥಕಾರರ ವರ್ಣನೆಯಲ್ಲಿಯೂ ಹೆಚ್ಚು ಭಿನ್ನತೆಯಿದೆ. ಇದು ಅವಲೋಕನದ ಆಧಾರವು ಕಡಿಮೆಯಾದುದರ ಪರಿಣಾಮವೇ ಸರಿ.

ಶರೀರರಚನೆ, ಶರೀರವ್ಯಾಪಾರ, ಗರ್ಭವೃದ್ಧಿ ಈ ಶಾಖೆಗಳ ಬಗ್ಗೆಯೂ ವಿಸ್ತೃತ ವರ್ಣನವು ವೈದ್ಯಕ ಗ್ರಂಥದಲ್ಲಿ ದೊರೆಯುತ್ತದೆ. ಶರೀರದಲ್ಲಿ ಸ್ರೋತಸ್, ತಲೆ, ಧಮನಿ ಹೀಗೆ ಮೂರು ಪ್ರಕಾರದ ವಾಹಿನಿ ಗಳಿವೆ. ಇವೆಲ್ಲವುಗಳಲ್ಲಿ ವಾತ, ಪಿತ್ತ, ಕಫ ಈ ಮೂರೂ ಶರೀರಕ್ಕೆ

ಆಧಾರಭೂತವಾದ ದ್ರವ್ಯಗಳು ಹರಿಯುತ್ತಿರುತ್ತವೆ. ಕೆಲವುಗಳಲ್ಲಿ ರಕ್ತ, ಕೆಲವುಗಳಲ್ಲಿ ಅನ್ನರಸ ಹರಿಯುತ್ತಿರುತ್ತವೆ. ಅನ್ನರಸವು ಹೊರಬಂದು ಅಲ್ಲಿ ಪಿತ್ತಕ್ರಿಯೆಯಾಗಿ ಆಮೇಲೆ ಕೆಂಪುಬಣ್ಣದ ರಕ್ತವಾಗುತ್ತದೆ. ಹೃದಯವು ಎಲ್ಲ ಸಂವೇದನ, ವಿಚಾರ, ಭಾವನೆಗಳ ಅಧಿಷ್ಠಾನವಿದೆ. ಕಣ್ಣು, ಮೂಗು, ಕಿವಿ, ನಾಲಗೆಗಳಿಂದ ಸಂವೇದನವು ಹರಿದು ಬರು ವಂಥ ಧಮನಿಗಳು ಹೃದಯದ ಕಡೆಗೆ ಒರುತ್ತವೆ ಇದರಂತೆ ಅನೇಕ ವರ್ಣನೆಗಳು ನಮ್ಮ ಪ್ರಾಚೀನ ಗ್ರಂಥಗಳಲ್ಲಿವೆ. ಜೀವಶಾಸ್ತ್ರದ ಜ್ಞಾನದ ಪ್ರಶ್ನೆಯನ್ನು ಬಿಟ್ಟು ಕೇವಲ ವೈದ್ಯಕಜ್ಞಾನದ ವಿಚಾರಮಾಡಿದರೆ ಭಾರತೀಯರು ಅದರಲ್ಲಿ ಅತ್ಯಂತ ಪ್ರಶಂಸನೀಯ ಪ್ರಗತಿಯನ್ನು ಮಾಡಿ ದ್ದರೆಂಬದು ಕಂಡುಬರುತ್ತದೆ. ಭಾರತೀಯ ವೈದ್ಯಕವು ಶಾಸ್ತ್ರದ ತಳ ಹದಿಯ ಮೇಲೆ ಅವಲಂಬಿಸಿರಲಿ ಅಥವಾ ಬಿಡಲಿ (ಹಾಗೆ ಆ ಕಾಲಕ್ಕೆ ಯಾರದೂ ಇರಲಿಲ್ಲ) ಅದು ಅನುಭವಸಿದ್ಧ, ಉಪಯುಕ್ತ, ಕಾರ್ಯ ಕ್ಷಮವಿತ್ತೆಂಬುವದರಲ್ಲಿ ಏನೂ ಸಂಶಯವಿಲ್ಲ.

## ಕೌಟಿಲ್ಯನ ಅರ್ಥಶಾಸ್ತ್ರ

ಸಾಮಾಜಿಕಶಾಸ್ತ್ರದ ಬಗ್ಗೆ ವಿಚಾರ ಮಾಡುತ್ತಲೆ ಇಪ್ಪತ್ತೇ ವರ್ಷಗಳ ಪೂರ್ವದಲ್ಲಿ ಉಪಲಬ್ಧವಾದ ಕೌಟಿಲ್ಯನ 'ಅರ್ಥಶಾಸ್ತ್ರವು' ಕಣ್ಮುಂದೆ ಬರುತ್ತದೆ. ರಾಜಕಾರಣ ಶಾಸ್ತ್ರದಲ್ಲಿ ಭಾರತೀಯರ ಶ್ರೇಷ್ಠ ಪ್ರಗತಿಯಾಗಿತ್ತೆಂಬುದನ್ನು ತೋರಿಸುವುದಕ್ಕಾಗಿ ಈ ಗ್ರಂಥವು, ಬಾರ್ಹ ಸ್ಪತ್ಯ ಅರ್ಥಶಾಸ್ತ್ರ, ಶುಕ್ರನೀತಿ, ಶಾಂತಿಪರ್ವದೊಳಗಿನ ರಾಜನೀತಿ ಮೊದಲಾದ ಗ್ರಂಥಗಳನ್ನು ಮುಂದೆ ಚಾಚಬೇಕಾಗುತ್ತದೆ. ಆದರೆ ಈ ಗ್ರಂಥ ಅಥವಾ ಗ್ರಂಥಾಂಶವು ರಾಜಕಾರಭಾರದ ಯಾವ ವಿದ್ಯೆಯಿದೆಯೋ ಅದರ ಉದ್ಘಾಟನವನ್ನು ಮಾಡತ್ತದೆಂದರೆ ಹೆಚ್ಚು ಶೋಭಿಸೀತು. ಹಿಂದೆ ಆರನೆಯ ಪ್ರಕರಣದಲ್ಲಿ ಶಾಸ್ತ್ರ ಮತ್ತು ವಿದ್ಯೆ ಇವುಗಳ ಅಂತರವನ್ನು ತೋರಿಸಿದುದರ ನೆನಪನ್ನು ತಂದುಕೊಂಡು ಈ ಗ್ರಂಥದ ಕಡೆಗೆ ನೋಡಿ ದರೆ ಅದು ವಿದ್ಯಾಪ್ರತಿಪಾದಕವಿರುವದೇ ಹೊರತು ಶಾಸ್ತ್ರಪ್ರತಿಪಾ ದಕವಿಲ್ಲವೆಂದು ಕಂಡುಬರುವದು. ಸಮಾಜವೆಂದರೇನು? ಸಮಾಜದಲ್ಲಿ ರಾಜಸಂಸ್ಥೆಯು ಹೇಗೆ ಉತ್ಪನ್ನವಾಯಿತು? ಮುಂದೆ ಅದರ ಪರಿಣತಿ

ಹೇಗಾಯಿತು? ಆದರ ಅಧಿಕಾರಗಳೇನಿವೆ? ಅದರ ಪ್ರಕಾರಗಳೆಷ್ಟು? ಇವೇ ಮೊದಲಾದ ತಾತ್ವಿಕ, ವ್ಯಾಪಕಪ್ರಶ್ನೆಗಳ ವಿವೇಚನೆಯು ನಮ್ಮ ಅರ್ಥಶಾಸ್ತ್ರಾದಿ ಗ್ರಂಥಗಳಲ್ಲಿ ದೊರೆಯುವದಿಲ್ಲ. ಆದರೆ ಇಂಥ ಪ್ರಶ್ನೆಗಳ ಚರ್ಚೆಯನ್ನು ೨೪೦೦ ವರ್ಷಗಳ ಮೊದಲು ಅರಿಸ್ಟಾಟಲನು ತನ್ನ 'Politics' ಎಂಬ ಗ್ರಂಥದಲ್ಲಿ ಮಾಡಿದ್ದಾನೆ. ಆಧುನಿಕ ಪಾಶ್ಚಾತ್ಯ ಶಾಸ್ತ್ರಜ್ಞರು ಅವನ ಪರಂಪರೆಯನ್ನೇ ಮುಂದುವರಿಸಿ ರಾಜ್ಯ ಶಾಸ್ತ್ರದ ಅಗಮ್ಯ ವಿಸ್ತಾರವನ್ನು ಮಾಡಿದ್ದಾರೆ. ನಮ್ಮ ಅರ್ಥಶಾಸ್ತ್ರಾದಿ ಗ್ರಂಥಗಳಲ್ಲಿ ರಾಜನು ಸರ್ವಸತ್ತಾಧಿಕಾರಿ, ಏಕತಂತ್ರಿ ಪುರುಷನೆಂಬುದನ್ನು ಕಲ್ಪಿಸಿ, ಅವನು ರಾಜ್ಯವನ್ನು ಹೇಗೆ ಮಾಡಬೇಕು? ಪ್ರಜೆಗಳಿಂದ ಯಾವ ಕರವನ್ನು ಎಷ್ಟು ಹೇಗೆ ತೆಗೆದುಕೊಳ್ಳಬೇಕು? ಬೇರೆ ಬೇರೆ ಖಾತೆಗಳನ್ನು ಹೇಗೆ ನಡೆಸಬೇಕು, ಅಧಿಕಾರಸ್ಥರ ಮೇಲೆ ಹೇಗೆ ಕಣ್ಣಿಡಬೇಕು, ಶತ್ರುಗಳನ್ನು ಕೆಡವಿ ಸ್ವಂತ ರಾಜ್ಯದ ಸಂರಕ್ಷಣೆಯನ್ನು ಹೇಗೆ ಮಾಡಬೇಕು ಇವೇ ಮೊದಲಾದ ವ್ಯಾವಹಾರಿಕ ಸಂಗತಿಗಳನ್ನು ಮುಖ್ಯವಾಗಿ ಮಂಡಿಸಿದ್ದಾರೆ. ಈ ಮಂಡನವು ತಾತ್ಕಾಲಿಕ ವಸ್ತುಸ್ಥಿತಿಗೆ ಹೆಚ್ಚು ಅನುಸರಿಸಿರದೆ, ಹೆಚ್ಚಾಗಿ ಅವು ಕಾಲ್ಪನಿಕವಿವೆ ಎಂದು ತಜ್ಞರ ಮತವಿರುತ್ತದೆ. ಅಂದರೆ, ಇದು ರಾಜ್ಯಶಾಸ್ತ್ರವಿರದೆ ರಾಜ್ಯವನ್ನು ಹೇಗೆ ಮಾಡಬೇಕು ಎಂಬುದನ್ನು ಕಲಿಸುವ ವಿದ್ಯೆಯ ಶಿಕ್ಷಾಪುಸ್ತಕವಿದೆಯೆಂದು ಅಂದರೆ ಹೆಚ್ಚು ಯಥಾರ್ಥವಾದೀತು. ತಾತ್ಪರ್ಯವೆಂದರೆ ಶಾಸ್ತ್ರ ಈ ಶಬ್ದದ ಸದ್ಯಕ್ಕೆ ಸರ್ವಮಾನ್ಯವಾಗಿ ಗೊತ್ತಾದ ಅರ್ಥವನ್ನು ಅನುಸರಿಸಿ ನೋಡಿದರೆ ನಮ್ಮಲ್ಲಿ ಸಾಮಾಜಿಕಶಾಸ್ತ್ರಗಳು ನಿರ್ಮಾಣವಾಗಿದ್ದವೋ, ಇಲ್ಲವೋ ಎಂಬದು ಸಂದೇಹವಿದೆ. ಪದಾರ್ಥವಿಜ್ಞಾನಾದಿ ಶಾಸ್ತ್ರಗಳಲ್ಲಿ ಸೇರ್ಪಡೆಯಾಗುವ ಸಂಗತಿಗಳು ಬೇರೆ ಕಡೆಯಿಂದ ದೊರೆಯುವಂತೆ ಸಾಮಾಜಿಕ ವಿಷಯವು ಸ್ವಲ್ಪ ಹೆಚ್ಚು ಕಡಿಮೆಯಾಗಿ ಸಂಗ್ರಹ ಮಾಡಲು ಬಂದರೂ ಆ ಶಾಸ್ತ್ರವು ಅಸ್ತಿತ್ವದಲ್ಲಿತ್ತೆಂದು ಸಿದ್ಧವಾಗುವದಿಲ್ಲ.

ಆದರೆ ಇದರಲ್ಲಿ ಭಾರತೀಯರಿಗೆ ಲಾಂಛನಾಸ್ಪದವಾದುದು ಯಾವದೂ ಇಲ್ಲ. ಯಾಕಂದರೆ ಈಗಿನ ಕಲ್ಪನೆಗಳ ತುಲನೆಯಿಂದ ಭಾರ

ತೀಯರ ಜ್ಞಾನವು ಹೇಗೆ ಕಂಡರೂ ೧೪ ನೇ ಶತಮಾನದವರೆಗೆ ಭಾರತೀಯರು ಜ್ಞಾನದ ವಿಷಯದಲ್ಲಿ ಯುರೋಪಿಯ ರಾಷ್ಟ್ರಗಳಿಗಿಂತಲು ಮುಂದುವರಿದಿದ್ದರೆಂಬುದಕ್ಕೆ ಯಾವ ಸಂಶಯವೂ ಇಲ್ಲ. ಇದಕ್ಕೂ ಮೊದಲೆಂದರೆ ಇ. ಸ. ಪೂ. ೩೬೫ ರಿಂದ ೧೦೦ ವರೆಗೆ ಗ್ರೀಕ ಜನರು ಮಾತ್ರ ಭಾರತೀಯರನ್ನು ಶಾಸ್ತ್ರೀಯ ವಿಷಯಗಳ ವಿಚಾರದಲ್ಲಿ ಹಿಂದೆ ಹಾಕಿದ್ದರೆಂಬುದನ್ನು ನಾವು ನೋಡಿಯೇ ಇದ್ದೇವೆ. ಮತ್ತು ಇತ್ತೀಚೆ ೫೦೦ ವರ್ಷಗಳಿಂದ ಎಲ್ಲ ಪಾಶ್ಚಾತ್ಯ ರಾಷ್ಟ್ರಗಳು ಸರ್ವವಿಧದಲ್ಲಿಯೂ ಪ್ರಗತಿಯನ್ನು ಹೊಂದಿ ನಮ್ಮನ್ನು ತೀರ ಹಿಂದೆ ಹಾಕಿದುದನ್ನು ನೋಡುತ್ತಿದ್ದೇವೆ. ನಿರುತ್ಸಾಹದಿಂದ ಕಿಂಕರ್ತವ್ಯತಾ ಮೂಢರಾದಾಗ ನಮಗೆ ಗೌರವಯುಕ್ತ ಪ್ರೋತ್ಸಾಹನವು ಅವಶ್ಯವಾಗಿ ಬೇಕಾದ ಒಂದು ಕಾಲವು ನಮಗಿತ್ತು. ಆದರೆ ಅದು ಗತಕಾಲವಾಯಿತು. ನಾವು ಮೊದಲು ದೊಡ್ಡವರಿದ್ದೆವು, ಮುಂದೂ ದೊಡ್ಡವರಾಗುವ ಪೂರ್ಣ ಪಾತ್ರತೆಯು ನಮ್ಮಲ್ಲಿದೆ ಎಂಬುದು ಭಾರತೀಯರಾದ ನಮಗೆ ತಿಳಿದುಬಂದು ಹಾಗೆ ನಾವು ಬೆಳೆಯಲುದ್ಯುಕ್ತರಾಗಿದ್ದೇವೆ. ಮುಂದಿನ ಪ್ರಗತಿಯನ್ನು ಗಟ್ಟಿಯಾದ ತಳಹದಿಯಮೇಲೆ ನಿಲ್ಲಿಸಬೇಕೆಂದು ವಿಚಾರ ಮಾಡುವ ಕಾಲ ವೊದಗಿದೆ. ಈ ಪುಸ್ತಕದ ಉದ್ದೇಶವು ಭಾರತೀಯರ ಕೇವಲ ಗೌರವ ಗುಣಗಾನ ಮಾಡದೆ, ಪರಿಸ್ಥಿತಿಯ ಯಥಾರ್ಥ ಜ್ಞಾನ ಮಾಡಿಕೊಟ್ಟು ಭಾರತೀಯರ ಕರ್ತವ್ಯವೇನು ಎಂಬುದನ್ನು ತಿಳಿಸುವದಿದೆ. ಯಾವ ಮಾನಸಿಕ, ಸಾಮಾಜಿಕ ವೈಗುಣ್ಯಗಳ ಮೂಲಕ ನಾವು ಹಿಂದೆ ಬಿದ್ದಿರುವೆವೋ ಅವುಗಳ ನಿಜವಾದ ಜ್ಞಾನವಾದರೆ ಮುಂದಿನ ಕರ್ತವ್ಯದೆಶೆಯು ಸ್ಪಷ್ಟವಾಗಿ ಕಾಣುವದು. ಕಾರಣ ಆ ವೈಗುಣ್ಯದ ಊಹಾಪೋಹವನ್ನು ಮಾಡುವ ಮನಸ್ಸಿದೆ.

### ಭಾರತೀಯರ ಮನವೃತ್ತಿ ವಿಶೇಷ

ನಮ್ಮ ಭಾರತೀಯರ ಮಾನಸಿಕ ಸಿದ್ಧತೆಯು ಬಹುಚಮತ್ಕಾರಿಕವಿದೆ. ನಾವು ಸಂಸಾರಾಸಕ್ತರಾಗಿ ಹೆಂಡಿರು, ಮಕ್ಕಳು, ಹಣದಿಂದ ತೊಂದರೆಗೀಡಾಗಿ ಕ್ಷುದ್ರದೃಷ್ಟಿಯಿಂದ ಸಂಸಾರಸಾಗಿಸಬೇಕು; ಇಲ್ಲವೆ ಒಮ್ಮೆಲೆ ಸರ್ವಸಂಗ ಪರಿತ್ಯಾಗ ಮಾಡಿ ಬೈರಾಗಿಯಾಗಿ ಅರಣ್ಯಕ್ಕೆ ತೆರಳಬೇಕು.

ಆದರೆ ಉಚ್ಚ ದೇಹದಿಂದ ಯಾವದೊಂದು ಸಮಾಜಕಾರ್ಯವನ್ನು ಕೈ ಕೊಂಡು ಅದನ್ನೇ ಪರಿಪೋಷಿಸುವ ಪರಂಪರೆಯು ನಮ್ಮಲ್ಲಿ ಕಂಡು ಬರುವದಿಲ್ಲ. ಜ್ಞಾನದ ದೃಷ್ಟಿಯಲ್ಲಿಯೂ ಹಾಗೆಯೇ. ವ್ಯವಹಾರೋಪ ಯೋಗಿ ವಿದ್ಯೆ, ಕಲೆಗಳ ಉತ್ಕರ್ಷೆಯನ್ನು ಭಾರತೀಯರು ಬೇಕಾದಷ್ಟು ಮಾಡಿದ್ದಾರೆಂಬುದನ್ನು ನಾವು ನೋಡಿದ್ದೇವೆ. ವಾಸ್ತುಶಿಲ್ಪ, ರಸಾಯನ, ವೈದ್ಯಕಿ, ವಸ್ತುನಿರ್ಮಾಣ ಕಲೆಗಳು ಈ ಭರತಖಂಡದಲ್ಲಿ ಬಹು ಉತ್ಕರ್ಷ ಯನ್ನು ಹೊಂದಿದ್ದವು; ಮತ್ತು ಇವುಗಳ ಬಗ್ಗೆ ಬೇಕಾದಷ್ಟು ವಾಙ್ಮ ಯವು ನಿರ್ಮಾಣವಾಗಿತ್ತು.ವ್ಯವಹಾರಕ್ಕೆ ಎಷ್ಟು ಬೇಕೋ ಅಷ್ಟರ ಪ್ರಗತಿ ಯನ್ನು ಭಾರತೀಯರು ಚನ್ನಾಗಿ ಮಾಡಿದ್ದರು. ಆದರೆ ತತ್ವಶೋಧನದ ಸಿದ್ಧಾಂತ ಸ್ಥಾಪನೆಯ ಪ್ರಸಂಗದಲ್ಲಿ ಮಾತ್ರ ಹಿಂದೆ ಬಿದ್ದರು. ರಾಸಾಯ ನಿಕ ಕ್ರಿಯಾವಲೋಕನದಿಂದ ಪದಾರ್ಥ-ಘಟನೆಗಳ ಶೋಧಹಚ್ಚಿ ರಸಾ ಯನ ಶಾಸ್ತ್ರವನ್ನು ರಚಿಸಬಹುದಾಗಿತ್ತು. ಆದರೆ ಅವಲೋಕನದ ಆಧಾರವನ್ನು ಬಿಟ್ಟುಗೊಟ್ಟು ಅವರು ಸಾಂಖ್ಯ, ವೈಶೇಷಿಕ, ವೇದಾಂತ, ದರ್ಶನಗಳಲ್ಲಿ ಜಗದ್ರಚನೆಯ ವಿಷಯಕ್ಕೆ ಕೆಲವೊಂದು ಪರಸ್ಪರ ವಿರೋಧಿ ಸಿದ್ಧಾಂತಗಳನ್ನು ಕಲ್ಪನೆಯ ಬಲದಿಂದ ನಿರ್ಮಿಸಿದರು. ಈ ಸಿದ್ಧಾಂತ ಗಳಲ್ಲಿಯ ಪರಮಾಣುವಿನಂತಹ ಕೆಲವು ಸಂಗತಿಗಳು ಈಗಿನ ಶಾಸ್ತ್ರಕ್ಕೆ ಹೋಲುವಂಥಹವಿರುವದು ನಿಜ. ಆದರೆ ಅದು ಕಾಕತಾಲೀಯ ನ್ಯಾಯ ವೆಂದೇ ಹೇಳಬಹುದು.

ಭಾರತೀಯರಲ್ಲಿ ಚಿಕಿತ್ಸಕಬುದ್ಧಿ, ಮೂಲ ಸಂಶೋಧನದ ಪ್ರವೃತ್ತಿ ಗಳೇನೂ ಇರಲಿಲ್ಲವೆಂದು ಅನೇಕ ಜನರು ಅನ್ನುತ್ತಾರೆ. ಆದರೆ ಈ ಮಾತು ಪೂರ್ಣ ಯಥಾರ್ಥವಿರುವದಿಲ್ಲ. ಮೂಲ, ಸಂಶೋಧನ, ವರ್ಗೀಕರಣ, ಸಿದ್ಧಾಂತಸ್ಥಾಪನೆ ಮೊದಲಾದ ಶಾಸ್ತ್ರರಚನೆಯ ಅಂಗಗಳ ಕಲ್ಪನೆಯು ಅವರಿಗಿತ್ತು. ಪ್ರತಿಯೊಂದು ದರ್ಶನದಲ್ಲಿ ಭಾರತೀಯರು ವರ್ಗೀಕರಣ, ಕಾರಣಮೀಮಾಂಸೆಯನ್ನು ಚನ್ನಾಗಿ ಮಾಡಿದುದು ಕಂಡುಬರುತ್ತದೆ. ಆದರೆ ಇವುಗಳನ್ನು ಪ್ರತ್ಯಕ್ಷ ಆಧಾರದಿಂದ ಮಾಡದೆ ಅವರು ಕಲ್ಪನೆಯ ಆಧಾರ ಮತ್ತು ಮಾನಸಿಕ ಪ್ರೇರಣೆಯಿಂದ ಮಾಡಿದರು. ಅಂದರೆ ಪ್ರತ್ಯೇಕ ದರ್ಶನಕಾರರ, ಭಾಷ್ಯಕಾರರ ಮಾನಸಿಕ ಪ್ರೇರಣೆಯು ಭಿನ್ನ

ವಿದ್ದುದರಿಂದ ನಮಗೆ ಭಾರತೀಯ ಜ್ಞಾನಪ್ರಾಂತದಲ್ಲಿ ಪ್ರತ್ಯಕ್ಷದ ಅಪ್ರತಿಭೇದ್ಯ ತಳಹದಿಯ ಆಧಾರವಾಗಿರುವ ಏಕಮುಖೀ ಶಾಸ್ತ್ರಗಳೆಂದು ಕಾಣದೆ ನಾನಾವಾದಿಮತಗಳ ಕೋಲಾಹಲವು ಮಾತ್ರ ಕೇಳಬರುತ್ತಿದೆ. ಇರಲಿ. ಮೊದಲು ಆದುದು ಆಯಿತು; ಈಗ ನಾವು ಪಾಶ್ಚಾತ್ಯರ ಜ್ಞಾನವನ್ನು ನಮ್ಮದನ್ನಾಗಿ ಮಾಡಿಕೊಂಡು ಎಲ್ಲ ಸಮಾಜಗಳ ರೋಮರೋಮಗಳಲ್ಲಿ ತುಂಬಬೇಕು. ಮುಂದೆ ಕುತೂಹಲಬುದ್ಧಿ, ಅವಲೋಕನ, ಮತ್ತು ಪ್ರಯೋಗಗಳ ಆಧಾರದ ಮೇಲೆ ಶಾಸ್ತ್ರಗಳ, ವಿದ್ಯೆಗಳ, ಕಲೆಗಳ ಪ್ರಗತಿಯನ್ನು ಮಾಡಬೇಕು.

ಜ್ಞಾನಪ್ರಸಾರಾರ್ಥವಾಗಿ ಸಾಮಾಜಿಕ ಮತ್ತು ಇನ್ನಿತರ ಪ್ರಕಾರದ ತೊಂದರೆಗಳನ್ನು ಕೂಡಲೇ ಹೊಡೆದು ಹಾಕಬೇಕು. ನಮ್ಮ ದೇಶವು ೫೦೦ ಅಥವಾ ೬೦೦ ವರ್ಷಗಳಿಂದ ಹಿಂದೆ ಬಿದ್ದುದರ ಕಾರಣವೆಂದರೆ ಜ್ಞಾನದ ಕೊಂಡವಾಡೆಯಾದುದೇ. ಯಾವ ಸಮಾಜದಲ್ಲಿಯಾದರೂ ವಿದ್ಯಾವ್ಯಾಸಂಗದ ಗುತ್ತಿಗೆಯನ್ನು ಒಂದೇ ವರ್ಗದ ಕಡೆಗೆ ಕೊಡಲಾಗದು. ಹಿಂದಕ್ಕೆ ನಮ್ಮ ದೇಶದಲ್ಲಿ ಯಾವ ಸ್ಥಿತಿಯಿತ್ತೋ ಅದು ಇರಲಿ. ಆದರೆ ಈಗ ನೂರಾರು ವರ್ಷಗಳಿಂದ ಕೆಲವೇ ವಿಶಿಷ್ಟ ಜಾತಿಗಳಲ್ಲಿ ಜ್ಞಾನದ ಗುತ್ತಿಗೆಯು ಇತ್ತೆಂಬುದು ಸ್ಪಷ್ಟವಿದೆ. ಯುರೋಪದಲ್ಲಿಯೂ ಅಜ್ಞಾನ, ಮಧ್ಯಯುಗದಲ್ಲಿಯೂ ಇದೇ ಪರಿಸ್ಥಿತಿಯಿತ್ತು. ಆಗ ಇಬ್ಬರ ಸ್ಥಿತಿಯೂ ಸಮಾನವಿದ್ದರೂ ನಾವು ಜ್ಞಾನದಲ್ಲಿ ಪುರೋಗಾಮಿಗಳಾಗಿದ್ದೆವು. ಆದರೆ ಪಾಶ್ಚಾತ್ಯರು ವಿಶಿಷ್ಟ ಜಾತಿಗಳ ಕಡೆಗಿದ್ದ ಜ್ಞಾನಕ್ಷೇತ್ರದಲ್ಲಿ ಎಲ್ಲರಿಗೂ ಪ್ರವೇಶಮಾಡಿಕೊಟ್ಟದ್ದರಿಂದ ಪ್ರಗತಿಯಾಗತೊಡಗಿತು. ಆದರೆ, ವಿಶಿಷ್ಟವರ್ಗವು ಮಾತ್ರ ಇದ್ದಲ್ಲಿಯೇ ಇದೆ.

**ಜ್ಞಾನಭಾಂಡಾರವು ಎಲ್ಲ ವರ್ಗದವರಿಗೂ ಮುಕ್ತವಿರಬೇಕು**

ಸಮಾಜದಲ್ಲಿ ವಿಶಿಷ್ಟವರ್ಗವಿರಲೇಬಾರದು ಅಥವಾ ಧರ್ಮದ ನಾಶವಾಗಬೇಕು ಎಂಬುದಾಗಿ ಈ ಪ್ರತಿಪಾದನೆಯಿಂದ ಯಾರೂ ಅರ್ಥ ಮಾಡಿಕೊಳ್ಳಬಾರದು. ಅದೊಂದು ಬೇರೆ ಪ್ರಶ್ನೆಯೇ ಇದೆ. ಮಾನವನ ಮನಸ್ಸಿನ ಉನ್ನತಿಗೆ ಧರ್ಮವು ಎಂಥ ಬಲವಾದ ಆಧಾರವಿದೆಯೆಂಬುದನ್ನು ನಾವು ೭ನೆಯ ಮೆಟ್ಟಲಿನಲ್ಲಿ ಕಂಡಿದ್ದೇವೆ. ವಿಶಿಷ್ಟ ಸಮೂಹದ

ಕೈಯೊಳಗೆ ಶಾಸ್ತ್ರೀಯ ಜ್ಞಾನಭಾಂಡಾರವು ಹೋಗಬಾರದು. ಹಾಗೆ ಹೋದುದಾದರೆ ಉಳಿದ ಸಮಾಜಗಳಿಗೆ ಹಾನಿತಟ್ಟುವದೆಂದು ಈ ಪ್ರತಿಪಾದನೆಯ ತಾತ್ಪರ್ಯವಿದೆ. ಈ ವಿಷಯದಲ್ಲಿ ಪುರೋಹಿತ ವರ್ಗವು ದೋಷಿಯಿದ್ದು, ಬಲಾತ್ಕಾರದಿಂದ ಬೇರೆಯವರ ಕಡೆಗಿರುವ ಜ್ಞಾನವನ್ನು ಕಸಿದುಕೊಂಡು ತನ್ನ ವಶದಲ್ಲಿಯೇ ಬಚ್ಚಿಟ್ಟುಕೊಳ್ಳುತ್ತದೆಂಬ ಹಾಗಿಲ್ಲ. ಸಮಾಜದ ಪ್ರಥಮಾವಸ್ಥೆಯಲ್ಲಿ ಧಾರ್ಮಿಕ, ವ್ಯವಹಾರಿಕ, ಶಾಸ್ತ್ರೀಯ ಜ್ಞಾನಗಳ ಪೃಥಕ್ಕರಣವು ಸ್ಥಾಪನೆಯಾಗಿರುವದಿಲ್ಲ. ಅಂದರೆ ಪುರೋಹಿತವರ್ಗವು ಧರ್ಮದ ಜೊತೆಗೆ ಉಳಿದ ವಿದ್ಯೆಗಳ ಅಧ್ಯಯನ ಮಾಡುತ್ತದೆ. ಈ ವರ್ಗಕ್ಕೆ ಜ್ಞಾನಸಂಪಾದನೆಗೆ ಸಾನುಕೂಲತೆಗಳು ಹೆಚ್ಚಾಗಿರುವದರಿಂದ ಅವರ ಜ್ಞಾನವು ಸಹಜವಾಗಿ ಬೆಳೆಯುತ್ತಲಿರುತ್ತದೆ. ಸಮಾಜದೊಳಗಿನ ಇನ್ನುಳಿದ ವರ್ಗದವರು ತಮ್ಮ ತಮ್ಮ ವ್ಯವಸಾಯದಲ್ಲಿ ಮುಳುಗಿರುವದರಿಂದ ಜ್ಞಾನಾರ್ಜನೆಯು ಅಷ್ಟೊಂದು ಅವರಿಗೆ ಆವಶ್ಯವೆನಿಸದ್ದರಿಂದ ಅವರು ಜ್ಞಾನಾರ್ಜನೆಯ ಗೊಂದಲದಿಂದ ಪರಾವೃತ್ತರಾಗುವರು. ಆದರೆ ಪುರೋಹಿತ ವರ್ಗದವರ ಉದರನಿರ್ವಹಣವು ಧಾರ್ಮಿಕಕ್ರಿಯೆಗಳಿಂದಾಗುವುದರಿಂದ ಜ್ಞಾನೋಪಾಸನೆ, ಶಾಸ್ತ್ರಸಂವರ್ಧನಗಳು ತಮ್ಮ ಕರ್ತವ್ಯವೆಂಬದನ್ನು ಅವರು ಮರೆತುಬಿಡುತ್ತಾರೆ. ಬಹಳಾದರೆ ಸಮಾಜದ ಮೇಲೆ ಪ್ರತಿಷ್ಠೆಯನ್ನು ಕೆಡವಲು ಉಪಯೋಗಿಯಾದರೂ ವಸ್ತುತಃ ನಿರುಪಯೋಗಿಯಾದ ಶಾಬ್ದಿಕ ಪಾಂಡಿತ್ಯದ ಕಡೆಗೆ ಮತ್ತು ಘಟಪಟಾದಿ ಪ್ರಯತ್ನದ ಕಡೆಗೆ ಅವರ ಲಕ್ಷ್ಯವು ಹೋಗುತ್ತದೆ. ಈ ಸಾಮಾನ್ಯ ನಿಯಮಕ್ಕೆ ಅಪವಾದವಾಗಿ ಜ್ಞಾನಸಂವರ್ಧನೆಯ ಮತ್ತು ಸಾರ್ವತ್ರಿಕ ಜ್ಞಾನಪ್ರಸಾರದ ಕರ್ತವ್ಯವನ್ನು ನಿರಪೇಕ್ಷತೆಯಿಂದ ಮಾಡುವವರೂ ಕೆಲವರಿದ್ದಾರೆ; -ಅವರು ವಂದನೀಯರೂ ಆಗಿದ್ದಾರೆ. ಆದರೆ ಅದರಿಂದ ಮೇಲೆ ವರ್ಣಿಸಿದ ಸಾಮಾನ್ಯ ಪರಿಸ್ಥಿತಿಯಲ್ಲಿ ಬಹಳ ಬದಲಾಗುವದಿಲ್ಲ; ಮತ್ತು ಪರಿಣಾಮದಲ್ಲಿ ಉಳಿದೆಲ್ಲ ಸಮಾಜವು ದುರ್ಲಕ್ಷಿಸಿದ್ದರೂ ಜ್ಞಾನಸಂವರ್ಧನದ ಮುಖ್ಯಭಾರವು ಯಾವ ಬ್ರಾಹ್ಮಣವರ್ಗ ಅಥವಾ ಪುರೋಹಿತವರ್ಗದ ಮೇಲೆ ಇರುವದೋ ಅಂಥ ಸಮಾಜವು ಅಡ್ಡಹಾದಿ ಹಿಡಿದು ಅಧೋಗತಿಗಿಳಿ

ಯುತ್ತದೆ. ಇದರಲ್ಲಿ ಬ್ರಾಹ್ಮಣರು ಸಾಧಿಸಿಕೊಳ್ಳುವದೇನೂ ಇಲ್ಲ. ಜ್ಞಾನಪ್ರಸಾರ, ಜ್ಞಾನಸಂವರ್ಧನವನ್ನು ಮಾಡದಿದ್ದುದಕ್ಕಾಗಿ ಬ್ರಾಹ್ಮಣರು ಎಷ್ಟು ದೋಷಿಗಳಿರುವರೋ ಅಷ್ಟೇ ಜ್ಞಾನದ ವಿಷಯದಲ್ಲಿ ಅನಾಸ್ಥೆಯನ್ನು ತೋರಿಸುವ ಉಳಿದ ವರ್ಗಗಳೂ ದೋಷಿಗಳಿರುತ್ತವೆ.

ಪಾಶ್ಚಾತ್ಯರು ೫೦೦ ವರ್ಷಗಳ ಮೊದಲೇ ಈ ಅನಿಷ್ಟ ಪರಿಸ್ಥಿತಿಯನ್ನು ನಾಶಗೊಳಿಸಿದರು. ನಮ್ಮಲ್ಲಿ ಸದ್ಯಕ್ಕೆ ಸುದೈವದಿಂದ ಮೊದಲಿನ ಸ್ಥಿತಿಯು ಇಲ್ಲದ್ದರಿಂದ ಪುರೋಹಿತ ವರ್ಗದ ಇಲ್ಲವೆ ಯಾವದೋ ಒಂದು ಜಾತಿಯ ಕೈಯಲ್ಲಿ ಜ್ಞಾನದ ಕೀಲಿಕೈ ಇರುವದಿಲ್ಲ. ಆದರೆ ಪೂರ್ವ ಪರಂಪರೆಯ ಮೂಲಕ ಉಳಿದ ಜಾತಿಗಳು ಜ್ಞಾನಸಂಪಾದನಕ್ಕಾಗಿ ಎಷ್ಟು ಮುಂದುವರಿಯಬೇಕೋ ಅಷ್ಟು ಮುಂದುವರಿದಿಲ್ಲ. ಆದರೂ ಇನ್ನು ಮುಂದೆ ಸರ್ವ ಭಾರತೀಯರು ಜ್ಞಾನಭಾಂಡಾರದ ಲೂಟಿಮಾಡಲು ಒಕ್ಕಟ್ಟಿನಿಂದ ಮುಂದುವರಿಯಬೇಕು; ಮತ್ತು ಮೊದಲಿನ ಜ್ಞಾನಶ್ರೇಷ್ಠರಾದ ಋಷಿಗಳ ಕುಗ್ಗಿದ ಪರಂಪರೆಯನ್ನು ಮುಂದೂಡಬೇಕು. ಆದರಿಂದ ನವಭಾರತದ ಭಾಗ್ಯೋದಯವಾಗಿ ಅದು 'ಇದೇ ಕಣ್ಣಿನಿಂದ' ನೋಡಲು ಸಿಗುವದರಲ್ಲಿ ನಮಗೆ ಸಂಶಯವಿಲ್ಲ.

### ಜ್ಞಾನೋಪಾಸನೆ ಸ್ವಭಾಷೆಯಿಂದಾಗಬೇಕು

ಈ ಜ್ಞಾನಪ್ರಸಾರದಲ್ಲಿ ಇನ್ನೊಂದು ದೊಡ್ಡ ಆತಂಕವೆಂದರೆ ಭಾಷೆಯದು. ಪೂರ್ವಕಾಲದಲ್ಲಿ ಯುರೋಪದಲ್ಲಿ ಲ್ಯಾಟಿನ, ಹಿಂದುಸ್ಥಾನದಲ್ಲಿ ಸಂಸ್ಕೃತ ಭಾಷೆಗಳಿದ್ದವು. ಜ್ಞಾನಸಂಗ್ರಹ, ಅಧ್ಯಯನ, ಅಧ್ಯಾಪನೆಗಳ ಭಾಷೆಯು ಸಾಮಾನ್ಯ ಜನಸಮಾಜದ ಭಾಷೆಗಿಂತ ಭಿನ್ನವಾಗಿರುವ ಕೃತಕ ಹಾಗು ಘಾತಕ ಸಂಗತಿಯು ಇನ್ನೊಂದಾವದೂ ಇಲ್ಲ. ಒಬ್ಬನ ಕೊರಳಲ್ಲಿ ದೊಡ್ಡದೊಂದು ಕಲ್ಲನ್ನು ಕಟ್ಟಿ ಅವನಿಗೆ ಈಸೆಂದು ಹೇಳುವದೂ, ಹುಟ್ಟಿನಿಂದಲೇ ಬಂದ ಸ್ವಭಾಷೆಯನ್ನು ಬಿಟ್ಟು ಪರಭಾಷೆಯ ಮುಖಾಂತರ ಜ್ಞಾನ ಪ್ರಾಪ್ತಮಾಡಿಕೊಳ್ಳೆಂದು ಹೇಳುವದೂ ಎರಡೂ ಒಂದೇ. ಸಮಾಜದಲ್ಲಿ ಅಸಂಖ್ಯ ವ್ಯಕ್ತಿಗಳಿಗೆ ಪರಭಾಷೆಯನ್ನು ಕಲಿಯುವದು ಶಕ್ಯವಿಲ್ಲದ್ದರಿಂದ ಸಮಾಜವನ್ನು ಅಜ್ಞಾನದಲ್ಲಿಟ್ಟ ಶ್ರೇಯಸ್ಸು ಈ ಯುಕ್ತಿಯಿಂದ ತನ್ನಷ್ಟಕ್ಕೆ ತಾನೇ ಬರುವದು. ಜ್ಞಾನ

ಸಂಪಾದನದ ಯಾವ ಭಾಷೆ ಇರುವದೋ ಅದನ್ನು ಕಲಿತ ಬೆರಳೆಣಿಸುವಷ್ಟು ಜನರು ಉಳಿದ ಸಮಾಜದ ಜನರಿಂದ ದೂರ ಉಳಿಯುತ್ತಾರೆ; ಸಮಾಜದಲ್ಲಿ ಜ್ಞಾನವು ಸಜೀವವಾಗಿ ಎಂದೂ ಉಳಿಯುವದಿಲ್ಲ. ಅಂದರೆ ಜ್ಞಾನದ ಪ್ರಗತಿಯು ಎಷ್ಟು ಬೇಕೋ ಅಷ್ಟಾಗುವದಿಲ್ಲ. ಹೀಗೆ ಒಂದಲ್ಲ, ಎರಡಲ್ಲ ಅನೇಕ ದುಷ್ಟ ಪರಿಣಾಮಗಳು ಈ ಕೃತ್ರಿಮ ಪದ್ಧತಿಯಿಂದಾಗುತ್ತವೆ. ಗ್ರೀಕರಲ್ಲಿ ಬಹುಜನ ಸಮಾಜದ ಮತ್ತು ಜ್ಞಾನವ್ಯವಹಾರದ ಭಾಷೆಯು ಒಂದೆ. ಪಾಶ್ಚಾತ್ಯ ದೇಶದಲ್ಲಿಯೂ ೩೦೦ ವರ್ಷಗಳಿಂದ ಒಂದೇ ಭಾಷೆಯಿದೆ. ಗ್ರೀಕರಂತೆ ಹಾಗೂ ಈಗಿನ ಪಾಶ್ಚಾತ್ಯರಂತೆ ಉನ್ನತಿ ಶಿಖರವನ್ನೇರಬೇಕಾದರೆ ದೇಶೀಯ ಭಾಷೆಯ ಮೂಲಕವಾಗಿಯೆ ಜ್ಞಾನಪ್ರಸಾರಮಾಡಲು ನಾವು ಕೂಡಲೇ ಆರಂಭಿಸಬೇಕು. ತೊಂದರೆಗಳ ನೆವವನ್ನು ಎಣಿಸಕೂಡದು. ಕೃತ್ರಿಮ ಸಂಗತಿಯ ನಾದ ಹಿಡಿದರೆ ಸ್ವಾಭಾವಿಕ ಸಂಗತಿಗಳು ಕೂಡ ತೊಂದರೆದಾಯಕವೆಂದು ಕಾಣುತ್ತವೆ.

ಇಂದಿಗೆ ಏನಿಲ್ಲೆಂದರೂ ಎರಡುವರೆ ಸಾವಿರ ವರ್ಷಗಳಿಂದ ಹಿಂದುಸ್ಥಾನದಲ್ಲಿಯ ಬಹುಜನ ಸಮಾಜದ ಭಾಷೆಯು ಸಂಸ್ಕೃತವಲ್ಲದ್ದರಿಂದ ಉಳಿದ ಪ್ರಾಕೃತಾದಿ ಭಾಷೆಗಳನ್ನು ಜನರು ಮಾತಾಡುತ್ತಾರೆಂಬುದು ಸರ್ವಮಾನ್ಯವಾದ ಸಂಗತಿ. ಆದರೆ ಜ್ಞಾನವ್ಯವಹಾರದ ಭಾಷೆಯು ಮಾತ್ರ ಇಂಗ್ಲಿಷರ ಆಳಿಕೆಯು ಆರಂಭವಾಗುವ ಮೊದಲೇ (ಕೆಲ ಅಪವಾದ ಬಿಟ್ಟು) ಸಂಸ್ಕೃತವೇ ಇತ್ತು. ಈ ಸಂಸ್ಕೃತ ಭಾಷೆಯನ್ನು ಹಿಂದೂಡಲು ದೇಶೀಯ ಭಾಷೆಗಳು ಪ್ರಬಲವಾದವು. ಭಾರತದ ಬಹು ಭಾಷೆಗಳಲ್ಲಿಯೂ ಜ್ಞಾನಪ್ರಸಾರವು ಹೆಚ್ಚುತ್ತ ನಡೆಯಿತು. ಅನೇಕ ಬರೆಹಗಾರರು ಮಾತೃಭಾಷೆಯಲ್ಲಿಯೇ ಬರೆಯತೊಡಗಿದರು. ಅವರೆಲ್ಲರಿಗೂ ಸಂಸ್ಕೃತದಲ್ಲಿ ಬರೆಯಲಿಕ್ಕೆ ಬರುತ್ತಿದ್ದಿಲ್ಲೆಂದು ಯಾರೂ ಅರ್ಥಮಾಡಿಕೊಳ್ಳಬಾರದು. ಅವರು ಬುದ್ಧಿಪೂರ್ವಕವಾಗಿಯೇ ಸ್ವಭಾಷೆಯನ್ನು ಮುಂದೆ ತರುವ ಹೇತುವಿನಿಂದಲೇ ಬರೆದಿದ್ದಾರೆಂದು ಅವರ ಗ್ರಂಥಗಳಿಂದಲೇ ಕಂಡುಬರುತ್ತದೆ. ಆದರೆ ಈ ಸ್ವಭಾಷೆಯ ಉದ್ಧಾರದ ಚಟುವಟಿಕೆಯು ಜ್ಞಾನದ ಒಂದು ಭಾಗ ಮಾತ್ರವಾಗಿತ್ತು. ಧರ್ಮ, ವೇದಾಂತ, ಮಹಾಭಾರತ, ರಾಮಾಯಣಾದಿ ಗ್ರಂಥಗಳು ಸ್ವಭಾಷೆ

ಯಲ್ಲಿಯೇ ನಿರ್ಮಾಣವಾಗಿ ಜ್ಞಾನಭಾಂಡಾರದ ಸತ್ರವನ್ನೇ ಇಟ್ಟೆವು. ಆದರೆ ಇನ್ನುಳಿದ ಜ್ಞಾನಶಾಖೆಗಳ ಭಾಂಡಾರವು ಮೊದಲಿದ್ದಂತೆಯೇ ಸಂಸ್ಕೃತದಲ್ಲಿಯೇ ಹಾಯಾಗಿರುವವು.

ಸಂಸ್ಕೃತವು ಬಹುಜನ ಸಮಾಜಕ್ಕೆ ತಿಳಿಯದಿದ್ದರೂ ಅದು ನಮಗೆ ಪರಕೀಯ ಭಾಷೆಯಲ್ಲ. ಆದರೆ ಯಾವ ಭಾಷೆಯು ನಮ್ಮ ಭಾಷೆಯ ಮೇಲೆ ನೂರಾರು ವರ್ಷಗಳಿಂದ ಬಂದು ಕುಳಿತಿರುವದೋ ಆ ಭಾಷೆ ಮಾತ್ರ ಪರಕೀಯವಿದ್ದು ಜ್ಞಾನವರ್ಧನಕ್ಕೆ ಎಳ್ಳಷ್ಟೂ ಉಪಯೋಗ ಬೀಳುವಂತಿಲ್ಲ. ರಾಜಸತ್ತೆಯ ಬಲದಿಂದ ಆ ಭಾಷೆಯು ನಮ್ಮ ದೇಶದಲ್ಲಿ ಪ್ರಚಾರವಾಯಿತು. ಶಿಕ್ಷಣ, ವಿಚಾರವಿನಿಮಯ, ಜ್ಞಾನದ ಪ್ರಸಾರ ಮೊದಲಾದವು ಆ ಪರಕೀಯ ಭಾಷೆಯಲ್ಲಿಯೇ ಪ್ರಾರಂಭವಾದ್ದರಿಂದ ನಮ್ಮ ದೇಶೀಯ ಭಾಷೆಗಳಿಗೆ ಅರ್ಧಚಂದ್ರಾಕೃತಿ ಒಂದು ಈ ರಾಜ ಭಾಷೆಯು ಮೆರೆಯುತ್ತಲಿದೆ. ಇಂಗ್ಲಿಷ ಬಾಷೆಯು ಎಷ್ಟು ಪ್ರಚಾರ ವಾದರೂ ಅದನ್ನು ಆತ್ಮಸಾತ್ತಾಗಿ ಮಾಡಿಕೊಳ್ಳಲು ಬರುವದಿಲ್ಲೆಂದು ನಮ್ಮ ವಿಚಾರವಂತರ ತಲೆಯಲ್ಲಿ ಬಂದಿತು. ಅದರಂತೆ ಪರಭಾಷೆಯಿಂದ ಶಿಕ್ಷಣಪಡೆಯುವದೂ, ವಿಚಾರವಿನಿಮಯಮಾಡುವದೂ ಮೊದಲಾದವು ಎಷ್ಟು ಕೃತ್ರಿಮ, ಹಾನಿಕಾರಕವಿದೆಯೆಂಬುದು ನಮ್ಮ ಮುಂದಾಳುಗಳ ಲಕ್ಷ್ಯಕ್ಕೆ ಬಂದಿತು. ನಮ್ಮ ವಿಚಾರವಂತ ಮುಂದಾಳುಗಳು ಸ್ವಭಾಷೆಯ ಪುರಸ್ಕಾರವ್ರತವನ್ನು ತೊಟ್ಟರು. ಇದು ಸ್ತುತ್ಯ ಪ್ರಯತ್ನವಾಯಿತು. ಆದರೆ ಕಾರ್ಯ ಬಹಳಾಗಲಿಲ್ಲ. ಅ ಆ ಹಿಡಿದು ಎಮ್ ಎ ದವರೆಗಿನ ಎಲ್ಲ ಶಾಸ್ತ್ರ,ವಿದ್ಯೆ, ಕಲೆ, ವಾಙ್ಮಯಗಳ ಶಿಕ್ಷಣವು ಸ್ವಭಾಷೆಯ ಮೂಲಕ ವಾಗಿ ಕೊಡುವ ಸರಕಾರದ ಯೋಜನೆಯು ಕಾರ್ಯದಲ್ಲಿ ಬಂದರೆ ಈ ಚಟುವಟಿಕೆಗೆ ಜಯದೊರೆಯುವದು. ಭಾಷೆಯು ಅಪಾತ್ರವಿದೆ, ಗ್ರಂಥ ಗಳಿಲ್ಲ ಎಂಬಿವೇ ಮೊದಲಾದ ಆಕ್ಷೇಪಗಳು ಜೊಳ್ಳು ಇರುತ್ತವೆ. ಹೇಗೆ ಸಮಾಜವೋ ಹಾಗೆ ಅದರ ಭಾಷೆ. ಭಾಷೆಯು ಅಪಾತ್ರವಿದ್ದರೆ ಸಮಾ ಜವು ಜ್ಞಾನಗ್ರಹಿಸಲು ಅಪಾತ್ರವಾಗುತ್ತದೆ. ಸಮಾಜವು ಜ್ಞಾನ ಗ್ರಹಣಕ್ಕೆ ಪಾತ್ರವಿದ್ದರೆ ಅದರ ಭಾಷೆಯು ಪಾತ್ರವಿರಲೇಬೇಕು. ಜ್ಞಾನೋಪಾಸನೆಯಲ್ಲಿ ಉಪಲಬ್ಧಜ್ಞಾನದ ಪ್ರಸಾರವೂ,ಹೊಸ ಸಂಶೋ

ಸಂಪಾದನದ ಯಾವ ಭಾಷೆ ಇರುವದೋ ಅದನ್ನು ಕಲಿತ ಬೆರಳಿನಿಂದೆಣಿಸುವಷ್ಟು ಜನರು ಉಳಿದ ಸಮಾಜದ ಜನರಿಂದ ದೂರ ಉಳಿಯುತ್ತಾರೆ; ಸಮಾಜದಲ್ಲಿ ಜ್ಞಾನವು ಸಜೀವವಾಗಿ ಎಂದೂ ಉಳಿಯುವದಿಲ್ಲ. ಅಂದರೆ ಜ್ಞಾನದ ಪ್ರಗತಿಯು ಎಷ್ಟು ಬೇಕೋ ಅಷ್ಟಾಗುವದಿಲ್ಲ. ಹೀಗೆ ಒಂದಲ್ಲ, ಎರಡಲ್ಲ ಅನೇಕ ದುಷ್ಟ ಪರಿಣಾಮಗಳು ಈ ಕೃತ್ರಿಮ ಪದ್ಧತಿಯಿಂದಾಗುತ್ತವೆ. ಗ್ರೀಕರಲ್ಲಿ ಬಹುಜನ ಸಮಾಜದ ಮತ್ತು ಜ್ಞಾನವ್ಯವಹಾರದ ಭಾಷೆಯು ಒಂದೆ. ಪಾಶ್ಚಾತ್ಯ ದೇಶದಲ್ಲಿಯೂ ೩೦೦ ವರ್ಷಗಳಿಂದ ಒಂದೇ ಭಾಷೆಯಿದೆ. ಗ್ರೀಕರಂತೆ ಹಾಗೂ ಈಗಿನ ಪಾಶ್ಚಾತ್ಯರಂತೆ ಉನ್ನತಿ ಶಿಖರವನ್ನೇರಬೇಕಾದರೆ ದೇಶೀಯ ಭಾಷೆಯ ಮೂಲಕವಾಗಿಯೆ ಜ್ಞಾನಪ್ರಸಾರಮಾಡಲು ನಾವು ಕೂಡಲೇ ಆರಂಭಿಸಬೇಕು. ತೊಂದರೆಗಳ ನೆವವನ್ನು ಎಣಿಸಕೂಡದು. ಕೃತ್ರಿಮ ಸಂಗತಿಯ ನಾದ ಹಿಡಿದರೆ ಸ್ವಾಭಾವಿಕ ಸಂಗತಿಗಳು ಕೂಡ ತೊಂದರೆದಾಯಕವೆಂದು ಕಾಣುತ್ತವೆ.

ಇಂದಿಗೆ ಏನಿಲ್ಲೆಂದರೂ ಎರಡುವರೆ ಸಾವಿರ ವರ್ಷಗಳಿಂದ ಹಿಂದುಸ್ಥಾನದಲ್ಲಿಯ ಬಹುಜನ ಸಮಾಜದ ಭಾಷೆಯು ಸಂಸ್ಕೃತವಲ್ಲದ್ದರಿಂದ ಉಳಿದ ಪ್ರಾಕೃತಾದಿ ಭಾಷೆಗಳನ್ನು ಜನರು ಮಾತಾಡುತ್ತಾರೆಂಬುದು ಸರ್ವಮಾನ್ಯವಾದ ಸಂಗತಿ. ಆದರೆ ಜ್ಞಾನವ್ಯವಹಾರದ ಭಾಷೆಯು ಮಾತ್ರ ಇಂಗ್ಲಿಷರ ಆಳಿಕೆಯು ಆರಂಭವಾಗುವ ಮೊದಲೇ (ಕೆಲ ಅಪವಾದ ಬಿಟ್ಟು) ಸಂಸ್ಕೃತವೇ ಇತ್ತು. ಈ ಸಂಸ್ಕೃತ ಭಾಷೆಯನ್ನು ಹಿಂದೂಡಲು ದೇಶೀಯ ಭಾಷೆಗಳು ಪ್ರಬಲವಾದವು. ಭಾರತದ ಬಹು ಭಾಷೆಗಳಲ್ಲಿಯೂ ಜ್ಞಾನಪ್ರಸಾರವು ಹೆಚ್ಚುತ್ತ ನಡೆಯಿತು. ಅನೇಕ ಬರೆಹಗಾರರು ಮಾತೃಭಾಷೆಯಲ್ಲಿಯೇ ಬರೆಯತೊಡಗಿದರು. ಅವರೆಲ್ಲರಿಗೂ ಸಂಸ್ಕೃತದಲ್ಲಿ ಬರೆಯಲಿಕ್ಕೆ ಬರುತ್ತಿದ್ದಿಲ್ಲೆಂದು ಯಾರೂ ಅರ್ಥಮಾಡಿಕೊಳ್ಳಬಾರದು. ಅವರು ಬುದ್ಧಿಪೂರ್ವಕವಾಗಿಯೇ ಸ್ವಭಾಷೆಯನ್ನು ಮುಂದೆ ತರುವ ಹೇತುವಿನಿಂದಲೇ ಬರೆದಿದ್ದಾರೆಂದು ಅವರ ಗ್ರಂಥಗಳಿಂದಲೇ ಕಂಡುಬರುತ್ತದೆ. ಆದರೆ ಈ ಸ್ವಭಾಷೆಯ ಉದ್ಧಾರದ ಚಟುವಟಿಕೆಯು ಜ್ಞಾನದ ಒಂದು ಭಾಗ ಮಾತ್ರವಾಗಿತ್ತು. ಧರ್ಮ, ವೇದಾಂತ, ಮಹಾಭಾರತ, ರಾಮಾಯಣಾದಿ ಗ್ರಂಥಗಳು ಸ್ವಭಾಷೆ

ಯಲ್ಲಿಯೇ ನಿರ್ಮಾಣವಾಗಿ ಜ್ಞಾನಭಾಂಡಾರದ ಸತ್ರವನ್ನೇ ಇಟ್ಟವು. ಆದರೆ ಇನ್ನುಳಿದ ಜ್ಞಾನಶಾಖೆಗಳ ಭಾಂಡಾರವು ಮೊದಲಿದ್ದಂತೆಯೇ ಸಂಸ್ಕೃತದಲ್ಲಿಯೇ ಹಾಯಾಗಿರುವವು.

ಸಂಸ್ಕೃತವು ಬಹುಜನ ಸಮಾಜಕ್ಕೆ ತಿಳಿಯದಿದ್ದರೂ ಅದು ನಮಗೆ ಪರಕೀಯ ಭಾಷೆಯಲ್ಲ. ಆದರೆ ಯಾವ ಭಾಷೆಯು ನಮ್ಮ ಭಾಷೆಯ ಮೇಲೆ ನೂರಾರು ವರ್ಷಗಳಿಂದ ಬಂದು ಕುಳಿತಿರುವದೋ ಆ ಭಾಷೆ ಮಾತ್ರ ಪರಕೀಯವಿದ್ದು ಜ್ಞಾನವರ್ಧನಕ್ಕೆ ಎಳ್ಳಷ್ಟೂ ಉಪಯೋಗ ಬೀಳುವಂತಿಲ್ಲ. ರಾಜಸತ್ತೆಯ ಬಲದಿಂದ ಆ ಭಾಷೆಯು ನಮ್ಮ ದೇಶದಲ್ಲಿ ಪ್ರಚಾರವಾಯಿತು. ಶಿಕ್ಷಣ, ವಿಚಾರವಿನಿಮಯ, ಜ್ಞಾನದ ಪ್ರಸಾರ ಮೊದಲಾದವು ಆ ಪರಕೀಯ ಭಾಷೆಯಲ್ಲಿಯೇ ಪ್ರಾರಂಭವಾದ್ದರಿಂದ ನಮ್ಮ ದೇಶೀಯ ಭಾಷೆಗಳಿಗೆ ಅರ್ಧಚಂದ್ರಾಕೃತಿ ಒಂದು ಈ ರಾಜ ಭಾಷೆಯು ಮೆರೆಯುತ್ತಲಿದೆ. ಇಂಗ್ಲಿಷ ಬಾಷೆಯು ಎಷ್ಟು ಪ್ರಚಾರ ವಾದರೂ ಅದನ್ನು ಆತ್ಮಸಾತ್ತಾಗಿ ಮಾಡಿಕೊಳ್ಳಲು ಬರುವದಿಲ್ಲೆಂದು ನಮ್ಮ ವಿಚಾರವಂತರ ತಲೆಯಲ್ಲಿ ಬಂದಿತು. ಅದರಂತೆ ಪರಭಾಷೆಯಿಂದ ಶಿಕ್ಷಣಪಡೆಯುವದೂ, ವಿಚಾರವಿನಿಮಯಮಾಡುವದೂ ಮೊದಲಾದವು ಎಷ್ಟು ಕೃತ್ರಿಮ, ಹಾನಿಕಾರಕವಿದೆಯೆಂಬುದು ನಮ್ಮ ಮುಂದಾಳುಗಳ ಲಕ್ಷ್ಯಕ್ಕೆ ಬಂದಿತು. ನಮ್ಮ ವಿಚಾರವಂತ ಮುಂದಾಳುಗಳು ಸ್ವಭಾಷೆಯ ಪುರಸ್ಕಾರವ್ರತವನ್ನು ತೊಟ್ಟರು. ಇದು ಸ್ತುತ್ಯ ಪ್ರಯತ್ನವಾಯಿತು. ಆದರೆ ಕಾರ್ಯ ಬಹಳಾಗಲಿಲ್ಲ. ಅ ಆ ಹಿಡಿದು ಎಮ್ ಎ ದವರೆಗಿನ ಎಲ್ಲ ಶಾಸ್ತ್ರ,ವಿದ್ಯೆ, ಕಲೆ, ವಾಙ್ಮಯಗಳ ಶಿಕ್ಷಣವು ಸ್ವಭಾಷೆಯ ಮೂಲಕ ವಾಗಿ ಕೊಡುವ ಸರಕಾರದ ಯೋಜನೆಯು ಕಾರ್ಯದಲ್ಲಿ ಬಂದರೆ ಈ ಚಟುವಟಿಕೆಗೆ ಜಯದೊರೆಯುವದು. ಭಾಷೆಯು ಅಪಾತ್ರವಿದೆ, ಗ್ರಂಥ ಗಳಿಲ್ಲ ಎಂಬಿವೇ ಮೊದಲಾದ ಆಕ್ಷೇಪಗಳು ಜೊಳ್ಳು ಇರುತ್ತವೆ. ಹೇಗೆ ಸಮಾಜವೋ ಹಾಗೆ ಅದರ ಭಾಷೆ. ಭಾಷೆಯು ಅಪಾತ್ರವಿದ್ದರೆ ಸಮಾ ಜವು ಜ್ಞಾನಗ್ರಹಿಸಲು ಅಪಾತ್ರವಾಗುತ್ತದೆ. ಸಮಾಜವು ಜ್ಞಾನಸ ಗ್ರಹಣಕ್ಕೆ ಪಾತ್ರವಿದ್ದರೆ ಅದರ ಭಾಷೆಯು ಪಾತ್ರವಿರಲೇಬೇಕು. ಜ್ಞಾನೋಪಾಸನೆಯಲ್ಲಿ ಉಪಲಬ್ಧ ಜ್ಞಾನದ ಪ್ರಸಾರವೂ,ಹೊಸ ಸಂಶೋ

ಧನದ ಯೋಗದಿಂದ ಇದ್ದ ಜ್ಞಾನವನ್ನು ವೃದ್ಧಿಗೊಳಿಸುವದೂ ಹೀಗೆ ಎರಡಂಗಗಳಿವೆ. ಜ್ಞಾನಪ್ರಸಾರವಾಗಲೆಂಬ ಉದ್ದೇಶದಿಂದ ಉಪಯುಕ್ತ ಮತ್ತು ಶಾಸ್ತ್ರೀಯ ವಾಙ್ಮಯವು ದೇಶೀಯ ಭಾಷೆಗಳಲ್ಲಿ ಸಾಕಷ್ಟು ನಿರ್ಮಾಣವಾಗಿದೆ. ಆದರಲ್ಲಿ ಎಷ್ಟೋ ಗ್ರಂಥಗಳು ಅಮೌಲ್ಯವಿವೆ. ಅವುಗಳ ಉಪಯೋಗ ಮಾತ್ರ ಬಹಳ ಕಡಿಮೆಯಾಗಿದೆ. ಅದರಿಂದ ಶಾಸ್ತ್ರಗಳ ಅಭ್ಯಾಸಮಾಡಿ ಪುಸ್ತಕ ಬರೆಯುವವರಿಗೆ ಪ್ರೋತ್ಸಾಹನವು ದೊರೆಯುವದಿಲ್ಲ. ನಮ್ಮ ದೇಶದಲ್ಲಿ ಇಂಗ್ಲಿಷ ಭಾಷೆಯ ಮುಖಾಂತರವಾಗಿ ಶಿಕ್ಷಣ ಕ್ರಮವು ಸಾಗಿರುವದೇ ನಿರಾಶಾಜನಕ ಪರಿಸ್ಥಿತಿಗೆ ಮುಖ್ಯ ಕಾರಣವಾಗಿದೆ. ದೇಶೀಯ ಭಾಷೆಗಳ ಮುಖಾಂತರ ಪೂರ್ಣವಾಗಿ ಜ್ಞಾನಪ್ರಸಾರವಾಗದ ಹೊರತು ನಮ್ಮ ವಾಙ್ಮಯವು, ಊರ್ಜಿತಾವಸ್ಥೆಯನ್ನು ಹೊಂದಲಾರದು.

ಜ್ಞಾನ ಪ್ರಸಾರದೊಡನೆ ವಿಚಾರನಿರ್ಮಿತಿ ಹಾಗೂ ಸಂಶೋಧನದ ಕಾರ್ಯವೂ ಸ್ವಭಾಷೆಯಲ್ಲಾಗಬೇಕಾಗಿದೆ. ಸದ್ಯಕ್ಕೆ ಯಾರಾದರೂ ವಿದ್ವಾಂಸರು ತಮ್ಮ ವಿಚಾರಗಳನ್ನು ಪ್ರಕಟಮಾಡಬೇಕಾದರೆ ಇಂಗ್ಲಿಷ ಭಾಷೆಯಲ್ಲಿ ಮಾಡುತ್ತಾರೆ. ನಮ್ಮ ಮಹದ್ವ್ಯಕ್ತಿಗಳು ಈ ವರೆಗೆ ಹೆಚ್ಚಾಗಿ ಇಂಗ್ಲಿಷಭಾಷೆಯಲ್ಲಿ ಬರೆದಿರುತ್ತಾರೆ. ತಮ್ಮ ವಿಚಾರಗಳು ತಮ್ಮವರಿಗೆ ತಿಳಿಯದಿದ್ದರೂ ಪರಕೀಯರಿಗೆ ಅವಶ್ಯ ತಿಳಿಯಲೆಂದೆನಿಸಿ ಬರೆಯುವದು ಸ್ವಬಾಂಧವರ ಒಂದು ತರಹದ ಅಪಮಾನವೆ. ಪರಕೀಯರಿಂದ ಅಭಿನಂದನವಾಗಬೇಕೆಂಬ ತೀವ್ರ ಇಚ್ಛೆಯುಳ್ಳವರು ಮೊದಲು ಸ್ವಭಾಷೆಯಲ್ಲಿ ಬರೆದು ಆ ಮೇಲೆ ಮಹಾತ್ಮಾ ಗಾಂಧಿ, ರವೀಂದ್ರನಾಥರಂತೆ ಇಂಗ್ಲಿಷಿನಲ್ಲಿ ಅನುವಾದಿಸಬೇಕು. ಆದರೆ ಸ್ವಬಾಂಧವರ ಅವಹೇಲನಮಾಡಿ ಪರಕೀಯರ ಸ್ವತ್ತನ್ನಾಗಮಾಡಬಾರದು. ಉಳಿದೆಲ್ಲ ದೇಶದವರು ತಮ್ಮ ತಮ್ಮ ಭಾಷೆಯು ಹೇಗೇ ಇದ್ದರೂ ಪರಭಾಷೆಯಲ್ಲಿ ತಮ್ಮ ವಿಚಾರಗಳನ್ನು ಎಂದೂ ಪ್ರಕಟಿಸುತ್ತಿರುವದಿಲ್ಲ ಎಂಬುದನ್ನು ನಾವು ಲಕ್ಷ್ಯದಲ್ಲಿಟ್ಟು ಹಾಗೆ ಕಾರ್ಯಾಸಕ್ತರಾಗಬೇಕು.

---

# ಹನ್ನೆರಡನೆಯ ಮೆಟ್ಟಲು

## ಉಪಸಂಹಾರ

ಇಲ್ಲಿಯ ವರೆಗೆ ಈ ಪುಸ್ತಕದಲ್ಲಿ ಪ್ರತಿಪಾದಿಸಿದ ವಿಷಯಗಳ ಮೇಲಿಂದ ಸದ್ಯಸ್ಥಿತಿಯಲ್ಲಿ ತಂತಮ್ಮ ಕರ್ತವ್ಯವೇನು ಎಂಬುದನ್ನರಿತು ಕೊಳ್ಳಲು ಏನೂ ತೊಂದರೆಯಾಗಲಿಕ್ಕಿಲ್ಲ. ಮೊದಲನೆಯ ಕರ್ತವ್ಯವೆಂದರೆ- ಪಾಶ್ಚಾತ್ಯರು ನಿರ್ಮಿಸಿದ ಸರ್ವಜ್ಞಾನವನ್ನು ನಮ್ಮ ದೇಶದಲ್ಲಿ ಪ್ರಸಾರಮಾಡಿ, ಅದನ್ನು ನಮ್ಮದನ್ನಾಗಿ ಮಾಡಿಕೊಳ್ಳುವದಿದೆ. ಶಾಸ್ತ್ರ, ವಿದ್ಯೆ, ಕಲೆ, ವಾಙ್ಮಯಗಳ ಅಭ್ಯಾಸಮಾಡುವಂತೆ ನಮ್ಮ ಸಮಾಜವನ್ನು ಪ್ರೇರೇಪಿಸಿ, ಪ್ರವೃತ್ತಿಗೊಳಿಸಿ, ಅವರ ವಿಚಾರಶಕ್ತಿ, ಬೌದ್ಧಿಕ ಸಂಪತ್ತಿಗಳನ್ನು ಬೆಳೆಯಿಸುವಂತೆ ಸಹಾಯಮಾಡುವದು ಪ್ರತಿಯೊಬ್ಬ ದೇಶಪ್ರೇಮಿಯ ಕರ್ತವ್ಯಕರ್ಮವಿರುತ್ತದೆ. ಜ್ಞಾನಪ್ರಾಂತದಲ್ಲಿ ಎಲ್ಲ ಭೇದಾಭೇದಗಳನ್ನು ನಾಶಗೊಳಿಸಿ, ರಾಷ್ಟ್ರದೊಳಗಿನ ಎಲ್ಲ ವ್ಯಕ್ತಿಗಳೂ ಶಕ್ಯವಿದ್ದಷ್ಟು ಮಟ್ಟಿಗೆ ಜ್ಞಾನಸಂಪಾದಿಸುವ ಪ್ರಯತ್ನವನ್ನು ಮಾಡಬೇಕು. ಆದುದರಿಂದಲೇ ಜ್ಞಾನಪ್ರಸಾರ, ಜ್ಞಾನವರ್ಧಕ ಪ್ರಯತ್ನಗಳು ಆಯಾ ಮಾತೃಭಾಷೆಗಳ ಮುಖಾಂತರವಾಗಿ ನಡೆಯಬೇಕು. ಆ ಮೇಲೆ ಶಾಸ್ತ್ರೀಯ ದೃಷ್ಟಿ, ವಿಚಾರಪದ್ಧತಿಗಳನ್ನು ಸಂಪೂರ್ಣವಾಗಿ ತಿಳಿದು ಕೊಂಡು ಅವಲೋಕನ, ಪ್ರಯೋಗಗಳ ಆಧಾರ ಶಾಸ್ತ್ರ, ವಿದ್ಯೆ, ಕಲೆಗಳ ಸಂವರ್ಧನ ಮಾಡುವ ಕರ್ತವ್ಯವು ಕ್ರಮವಾಗಿ ತಾನೇ ಬರುವದು. ಭೌತಿಕಶಾಸ್ತ್ರಗಳ ಸಂಶೋಧನೆಗೆ ಅನೇಕ ಬಗೆಯ ಉಪಕರಣಗಳ ಅವಶ್ಯಕತೆಯಿದೆ. ಆದರೆ ಮಾನಸಶಾಸ್ತ್ರ, ಸಾಮಾಜಿಕಶಾಸ್ತ್ರಗಳ ಅಭ್ಯಾಸ ಮಾಡಲು, ಸಂಶೋಧನ ಮಾಡಲು ಅವುಗಳ ಅವಶ್ಯಕತೆಯಿಲ್ಲ

ದ್ದರಿಂದ ಈ ಶಾಸ್ತ್ರಗಳ ಕ್ಷೇತ್ರಗಳಲ್ಲಿ ಪ್ರತ್ಯಕ್ಷ ಅವಲೋಕನದಿಂದ ಕಾರ್ಯ ಮಾಡಲು ಸುಲಭವಾಗಿ ಸಹಜವಾಗಿ ಬರುವಂತಿದೆ. ಪ್ರತ್ಯಕ್ಷ ವಾದ ಆಧಾರವನ್ನು ಬಿಟ್ಟು ಮಾಡಿದ ವಿವೇಚನೆಯು ಶಾಸ್ತ್ರಗಳ ದೃಷ್ಟಿ ಯಿಂದ ವ್ಯರ್ಥವೆಂಬ ಮಾತನ್ನು ಲಕ್ಷ್ಯದಲ್ಲಿಡಬೇಕಾಗುವದು.

ಜ್ಞಾನಪ್ರಸಾರ, ಸಂವರ್ಧನ ಕಾರ್ಯವನ್ನು ಸ್ವಭಾಷೆಯ ಮುಖಾಂತರ ಮಾಡಬೇಕೆಂದು ಆರಂಭಿಸಿರುವ ಪ್ರಸ್ತುತ ಗ್ರಂಥವು ಒಂದು ಅಲ್ಪ ಯತ್ನವಿದೆ. ಶಾಸ್ತ್ರಜ್ಞಾನದ ಆವಶ್ಯಕತೆಯನ್ನು ವಿಶೇಷ ರೀತಿಯಿಂದ ಪರಿಚಯಮಾಡಿಕೊಡುವದು ಈಗ ಅತ್ಯಂತ ಆವಶ್ಯ ವಿರುವದರಿಂದ ಶಾಸ್ತ್ರವಿವೇಚನೆಯನ್ನು ಈ ಗ್ರಂಥದಲ್ಲಿ ಹೆಚ್ಚಾಗಿ ಚರ್ಚಿ ಸಿದೆ. ವಿದ್ಯೆ, ಕಲೆ, ವಾಙ್ಮಯ, ಇತಿಹಾಸ, ಧರ್ಮ ತತ್ವಜ್ಞಾನ, ಇಂದಿನ ಜಗತ್ತಿನಲ್ಲಿಯ ಆಂದೋಲನಗಳು, ಸಮಾಜವ್ಯವಸ್ಥೆಯ ಪ್ರಶ್ನೆ ಮೊದ ಲಾದ ವಿಷಯಗಳ ಕಡೆಗೂ ಶಾಸ್ತ್ರದಷ್ಟೇ ಲಕ್ಷವನ್ನು ಕೊಡಲಾಗಿದೆ.